ಮನೋಹರ ಗ್ರಂಥಮಾಲೆಯ ೯೮ನೆಯ ಕುಸುಮ

---

# ಗಂಗಾಸಾನಿ

( ಸಾಮಾಜಿಕ ಕಾದಂಬರಿ )


ಬರೆದವರು :

" ವರಗಿರಿ "



ಅಕ್ಟೋಬರ

೧೯೪೯

ಮನೋಹರ ಗ್ರಂಥಪ್ರಕಾಶನ ಸಮಿತಿ

ಧಾರವಾಡ.

ಸಾಹಿತ್ಯವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಏ.

ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ.

ಸಂಪಾದಕ

ಜಿ. ಬಿ. ಜೋಶಿ

ಬೆಲೆ

೧-೧೪-೦

ಪ್ರಕಾಶಕರು:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು:
ಎನ್. ವಿ. ಕುರಡಿ
ಶ್ರೀ ಸರಸ್ವತೀ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಮಿಕ್ಕ ಪ್ರಾಣಿಲೋಕದಲ್ಲಿ ಏನಿವೆಯೆಂಬುದು ಇದುವರೆಗೆ ಸುಸ್ಪಷ್ಟವಾಗಿ ತಿಳಿದಿಲ್ಲವಾದರೂ, ಮಾನವಲೋಕದಲ್ಲಿ ಪ್ರೇಮ ಮತ್ತು ಕಾಮಗಳು ತಮ್ಮ ಕೈಚಳಕ ನಡೆಯಿಸಿರುವುದು, ಕಂದೆರೆದು ನೋಡುವವರಿಗೆ ಸ್ಪಷ್ಟವಾಗಿ ಕಾಣುತ್ತಿರುವುದು. ಪ್ರೇಮ ತಾರಕಶಕ್ತಿಯ ಕಾರ್ಯ; ಕಾಮ ಮಾರಕಶಕ್ತಿಯ ಕಾರ್ಯ. ಪ್ರೇಮ ಲೋಕದ ಕಲ್ಯಾಣವನ್ನು ಚಿಂತಿಸುತ್ತಿದ್ದರೆ, ಕಾಮ ಪ್ರಕ್ಷೋಭವನ್ನು ಹರಡುತ್ತಿರುವುದು. ಪ್ರೇಮ ಜ್ಞಾನಮೂಲಕವಾದ ಸಂಯಮದ ಪರಿಣಾಮ. ಕಾಮ ಅಜ್ಞಾನಮೂಲಕವಾದ ಸ್ವೈರವೃತ್ತಿಯ ಪರಿಣಾಮ. ಮಾನವಲೋಕದ ಇತಿಹಾಸವನ್ನು ಎಂದಿನಿಂದ ನೋಡುತ್ತ ಬಂದರೂ, ಅದರ ಆಗು-ಹೋಗುಗಳಿಗೆ ಕಾರಣವಾದವು ಈ ಪ್ರೇಮ-ಕಾಮಗಳೆರಡೇ. ಪ್ರೇಮದ ಶಕ್ತಿ ಹೆಚ್ಚಾದಾಗ ಲೋಕದಲ್ಲಿ ಸುಖ-ಶಾಂತಿ-ತೃಪ್ತಿಗಳು ನಲಿಯುತ್ತಿರುವುವು. ಕಾಮದ ಶಕ್ತಿ ಹೆಚ್ಚಾದಾಗ ಲೋಕದಲ್ಲಿ ದುಃಖ-ಅಶಾಂತಿ-ಅತೃಪ್ತಿಗಳು ತಾಂಡವವಾಡುತ್ತಿರುವುವು. ಆದುದರಿಂದಲೆ ಯಾವ ಕಾಲದ, ಯಾವ ದೇಶದ ಲಲಿತಸಾಹಿತ್ಯವನ್ನು ನೋಡಿದರೂ ಅದು ಈ ಪ್ರೇಮ-ಕಾಮಗಳ ಕೈಚಳಕದ ಕತೆಯೇ ಆಗಿರುವುದು. ಇವೇ ದೇವ-ದಾನವರನ್ನು ಹುಟ್ಟಿಸಿದುವು; ಇವೇ ರಾಮ-ರಾವಣರನ್ನು ಸೃಷ್ಟಿಸಿದುವು; ಇವೇ ಪಾಂಡವ-ಕೌರವರನ್ನು ನಿರ್ಮಿಸಿದುವು. ಪ್ರೇಮ ದೈವೀಗುಣ. ಕಾಮ ಆಸುರೀ ಗುಣ. ಇವೆರಡರಲ್ಲಿ ಅಖಂಡವಾಗಿ ಹೋರಾಟ ನಡೆದಿರುವುದು. ಎರಡೂ ಸಮಶಕ್ತಿಯುವು. ಆ ಆ ಗುಣಕ್ಕೆ ತಕ್ಕ ಹಿನ್ನೆಲೆ, ವಾತಾವರಣ, ಅಧಿಷ್ಠಾನಗಳು ದೊರೆತಾಗ, ಆ ಆ ಗುಣಗಳಿಗೆ ಗೆಲವು ಸಿಕ್ಕುವುದು. ದೇವಗುಣಕ್ಕೆ ಗೆಲವು ದೊರೆತ ಸಾಹಿತ್ಯವಸ್ತು ಸುಖಾಂತದ್ದೆನಿಸುವುದು. ಆಸುರೀಗುಣಕ್ಕೆ ಗೆಲವು ದೊರೆತ ಸಾಹಿತ್ಯವಸ್ತು ದುಃಖಾಂತದ್ದಾಗಿ ಪರಿಣಮಿಸುವುದು.

ಏವಂಗುಣ ವಿಶಿಷ್ಟವಾದ ಪ್ರೇಮ-ಕಾಮಗಳೆರಡನ್ನೂ ಒಳಗೊಂಡಿರುವ ಮಾನವ ವ್ಯಕ್ತಿ, ಸೃಷ್ಟಿಯಲ್ಲಿರುವ ಅವೆರಡೂ ಅವ್ಯಕ್ತಗುಣಗಳ ವ್ಯಕ್ತರೂಪವಾಗಿ ನಿಂತಿರುವನು. ಮಾನವವರ್ಗದಲ್ಲಿರುವ ಗಂಡು-ಹೆಣ್ಣಿನ ನೈಸರ್ಗಿಕ ಭೇದ, ಈ ಪ್ರೇಮ-ಕಾಮಗಳ ಮೂಲಕವೇ ಒಂದು ಬಿಡಿಸಲಾರದ ತೊಡಕಾಗಿ ಕುಳಿತಿದೆ. ಶಾಂತಿ-ಸುಖಗಳನ್ನೇ ಮನವಾರೆ ಬಯಸುವ ಮಾನವನೂ ಈ ಹೆಣ್ಣು-ಗಂಡುಗಳ ಬಿಡಿಸಲಾರದ ತೊಡಕಿನ ಮೂಲಕ, ಅಶಾಂತಿ-ದುಃಖಗಳ ಹೊಳೆಯಲ್ಲಿ ಈಜುತ್ತಲೆ ಕಾಣದ ಕಡಲನ್ನು ಸೇರುವನು.

ಹೆಣ್ಣು-ಗಂಡಿನ ತೊಡಕು, ಸ್ವೈರವಾಗಿದ್ದ ಜನಜಂಗುಳಿಯನ್ನು ಮದುವೆಯ ವ್ಯವಸ್ಥೆಯ ನಾಗರಿಕತೆಯತ್ತ ಕರೆದೊಯ್ದಿತು. ಮದುವೆಯ ವ್ಯವಸ್ಥೆ ವಿಧವಾಸಂಸ್ಥೆ, ವೇಶ್ಯಾಸಂಸ್ಥೆಗಳನ್ನು ಸಮಾಜದಲ್ಲಿ ತಂದೊಡ್ಡಿತು. ಮಾನವಲೋಕ ಪ್ರೇಮದ ಬಲದಿಂದ ಸಂಯಮಿಯಾಗಿರುವಾಗ, ಈ ವ್ಯವಸ್ಥೆ-ಸಂಸ್ಥೆಗಳೆಲ್ಲ ಸುವ್ಯವಸ್ಥಿತವಾಗಿ ನಡೆದು ಸಮಾಜದಲ್ಲಿ ಶಾಂತಿ-ಸುಖಗಳನ್ನು ಕಾಯ್ದುಕೊಂಡು ಬರಲು ಸಮರ್ಥವಾದುವು. ಈಗ ಅದೇ ಮಾನವ-ಲೋಕ ಕಾಮದ ಕೈಗೊಂಬೆಯಾಗಿ ಸ್ವೈರವೃತ್ತಿಯ ಬೆನ್ನು ಹತ್ತಿದುದರಿಂದ, ಹಿಂದಿನ ವಿವಾಹವ್ಯವಸ್ಥೆ, ವಿಧವಾಸಂಸ್ಥೆ, ವೇಶ್ಯಾಸಂಸ್ಥೆಗಳ ಆವಶ್ಯಕತೆ ಅದಕ್ಕೆ ಕಾಣದಾಗಿದೆ. ಆದರೆ ಸಮಾಜದ ಸಾಂಪ್ರದಾಯಿಕ ಭಾವನೆ, ಈ ಸ್ವೈರವೃತ್ತಿಗೆ ತಡೆಯನ್ನೊಡ್ಡಲು ಬರುತ್ತವೆ. ಸಾಂಪ್ರದಾಯಿಕ ಭಾವನೆ ಹಳೆಯ ಅನುಭವದ ತತ್ತ್ವಗಳನ್ನು ಬೋಧಿಸುತ್ತಿದ್ದರೆ, ಸ್ವೈರವೃತ್ತಿಯನ್ನು ಬಯಸುವ ಕಾಮುಕ ಮನಸ್ಸು, ತನ್ನ ವಕೀಲಿಯನ್ನು ಮಾಡಲು ಬುದ್ಧಿಯನ್ನು ಕರೆದು, ಹೊಸ ತತ್ತ್ವದ ತರ್ಕಮಾಡಲು ಹಚ್ಚುತ್ತದೆ. ಜಗತ್ತಿನ ಎಲ್ಲ ಕಡೆಯಲ್ಲಿಯೂ ಇಂದು ಹೊರಡುತ್ತಲಿರುವ ಲಲಿತಸಾಹಿತ್ಯ, ಹೆಚ್ಚಾಗಿ ಇಂತಹ ಹೊಸ ತತ್ತ್ವದ ಪ್ರದರ್ಶನ-ಪ್ರಚಾರವನ್ನೇ ಮಾಡುತ್ತಲಿದೆ.

ಹೆಣ್ಣು-ಗಂಡಿನ ವಿಷಯುಕವಾಗಿದ್ದ ಹಳೆಯ ವ್ಯವಸ್ಥೆ ಅಪೂರ್ಣವಾಗಿದೆಯೆಂಬ ಇಂದಿನ ಬುದ್ಧಿವಾದ, ಹೊಸ ವ್ಯವಸ್ಥೆಯ ಸಮರ್ಥನೆಯನ್ನು ನಡೆಯಿಸಿದೆಯೇನೋ ಸರಿ. ಆದರೆ ಈ ಹೊಸ ವ್ಯವಸ್ಥೆಯೂ ಇನ್ನೊಂದು ಕಾಲದ, ಇನ್ನೊಂದು ಬಗೆಯ ಕಾಮುಕ ಮನಸ್ಸಿನವರಿಗೆ ಮತ್ತೆ ಅಪೂರ್ಣವೆಂದೇ ತೋರಬಹುದು. ಇನ್ನೊಂದು ರೀತಿಯ ಮಾರ್ಪಾಡನ್ನದು ಅಪೇಕ್ಷಿಸ

ಬಹುದು. ಕಾಮಪ್ರಧಾನ ಮಾನವಲೋಕ, ಈ ಹೆಣ್ಣು-ಗಂಡಿನ ಸಮಸ್ಯೆಯನ್ನು ಎಂದೂ ಬಿಡಿಸಲಾರದು. ಆದುದರಿಂದಲೆ 'ಹೆಣ್ಣು-ಗಂಡಿನ ಸಮಸ್ಯೆ' ಇಂದು ಬಹುಜನದ ಕೂಗಾಗಿದೆ. ಸಮಸ್ಯೆ ಬಿಡಿಸುವ ಸರಿಯಾದ ದಾರಿ ಯಾವುದೆಂಬುದನ್ನು ತಿಳಿದುಕೊಳ್ಳದೆ, ಎಲ್ಲರೂ ಅಡ್ಡಡ್ಡ ದಾರಿಯಿಂದಲೆ ಹೊರಟು ಗುಡ್ಡ ಬೀಳುತ್ತಿದ್ದಾರೆ.

ಮಾನವಕುಲ ಪ್ರೇಮಪ್ರಧಾನವಾದಲ್ಲದೆ ಹೆಣ್ಣು-ಗಂಡಿನ ಸಮಸ್ಯೆ ಎಂದೂ ಬಿಡಲಾರದು. ನಮ್ಮ ಮದುವೆಯ ವ್ಯವಸ್ಥೆಯಲ್ಲಿಯ ದೋಷವನ್ನು ಅದೇ ಕಳೆಯಬಲ್ಲದು. ವಿಧವೆಯರನ್ನೂ ವೇಶ್ಯೆಯರನ್ನೂ ಸಹಾನುಭೂತಿಯಿಂದ ನೋಡಲು ಅದೇ ಶಕ್ತಿ ಹಚ್ಚುವುದು. ಸಾಂಪ್ರದಾಯಿಕ ಭಾವನೆಯ ಸ್ಥೈರ್ಯವನ್ನು ಪ್ರೇಮವೇ ಕಡಿಮೆ ಮಾಡಬಲ್ಲದು. ಮಾನವನ ಸಹಜ ಅಶಕ್ತತೆಗಳನ್ನು ಸಹಾನುಭೂತಿಯಿಂದ ಕಂಡು, ಅವನನ್ನು ಬಹಿಷ್ಕರಿಸದೆ ಕೈಯೆತ್ತಿ ಕರೆದುಕೊಳ್ಳುವ ಪತಿತೋದ್ಧಾರಕ ಕೆಲಸವನ್ನೂ ಪ್ರೇಮವೊಂದೇ ಮಾಡಬಲ್ಲದು. ನಮ್ಮಲ್ಲಿಯ ಕಣ್ಣಿದ್ದ ಕೆಲವು ಸಾಹಿತ್ಯಿಕರು ಈ ತತ್ತ್ವದ ನೆಲಗಟ್ಟಿನ ಮೇಲೆ ತಮ್ಮ ಸಾಹಿತ್ಯಕಲೆಯ ಮಂದಿರವನ್ನು ನಿರ್ಮಿಸುತ್ತಿರುವರು.

ಈ 'ಗಂಗಾಸಾನಿ' ಕಾದಂಬರಿಯೂ ಆ ಬಗೆಯ ಕೃತಿನಿರ್ಮಿತಿಯ ಒಂದು ಪ್ರಯತ್ನವಾಗಿದೆ. ಹೆಣ್ಣು-ಗಂಡಿನ ಸಮಸ್ಯೆಯೆ ಈ ಕಾದಂಬರಿಯ ಜೀವಾಳ. ಸೂಳೆಯಾದ ಪ್ರೇಮದೇವತೆ ಗಂಗಾಸಾನಿ ಇದರ ನಾಯಕಿ. ಬ್ರಾಹ್ಮಣವಿಧವೆಯಾದ ಪ್ರಣಯಿನಿ ಸುಭಗಾ ಇದರ ಉಪನಾಯಕಿ. ಸಾತ್ತ್ವಿಕತೆಯ ಮೂರ್ತಿಯಾದ ಶಂಕರಭಟ್ಟ (ಸುಭಗಾನ ತಂದೆ), ಕಾಮದ ಪ್ರತಿಮೆಯಾದ ಶ್ರೀಕಂಠಭಟ್ಟ, ಎರಡರ ಪ್ರವಾಹದಲ್ಲಿಯೂ ಸಿಕ್ಕಿರುವ ರಾಮಚಂದ್ರ, ಬೇರೆ ಸಾಮಾಜಿಕರು ಈ ನಾಯಕಿ-ಉಪನಾಯಕಿಯರ ವ್ಯಕ್ತಿತ್ವವನ್ನು ಸ್ಫುಟಗೊಳಿಸಲು ಸಹಾಯಕರಾಗಿ ನಿಂತವರು. ಗಂಗಾಸಾನಿಯ ಸಹಜ ಪ್ರೇಮ, ಶ್ರೀಕಂಠ ಶಾಸ್ತ್ರಿಯ ಆಸುರ ಹಸ್ತದಿಂದ ಸುಭಗೆಯಂತಹ ನಿಷ್ಪಾಪಜೀವವನ್ನು ಮುಕ್ತ ಮಾಡಿ ವಿಜಯಶಾಲಿಯಾದ ಘಟನೆಯೆ ಈ ಕಾದಂಬರಿಯ ವಸ್ತು. ಹಿನ್ನೆಲೆಯಾಗಿ ಬಂದ ಹಳ್ಳಿ—ಶಂಭುಲಿಂಗನ ದೇವಸ್ಥಾನಗಳ ಪ್ರಾದೇಶಿಕ ವರ್ಣನೆ, ಕನ್ನಡ ನಾಡಿನ

ಒಂದು ವಾಸ್ತವ ಪ್ರದೇಶವನ್ನು ಸುಂದರವಾಗಿ ಪರಿಚಯ ಮಾಡಿಕೊಡು ವಂತಹದು. ಪಾತ್ರ ಪರಿಪೋಷಣೆಯಲ್ಲಿ ಹೆಚ್ಚಿನ ಭಾಗ ಔಚಿತ್ಯದಿಂದ ಕೂಡಿದುದರಿಂದಲೇ ಗಂಗಾಸಾನಿ, ಸುಭಗಾ, ಶಂಕರಭಟ್ಟ, ಶ್ರೀಕಂಠಶಾಸ್ತ್ರಿಗಳು ವಾಚಕರ ಮನದಲ್ಲಿ ಬಹುಕಾಲ ನಿಲ್ಲಬಲ್ಲರು.

ಇದನ್ನು ಬರೆದ ಲೇಖಕರು ಹೊಸಬರಲ್ಲವಾದರೂ ಹಳಬರೂ ಅಲ್ಲ. ಈಗಾಗಲೆ ಬೇರೆ ಬೇರೆ ಪತ್ರಿಕೆಗಳಲ್ಲಿ ಲಲಿತಕೃತಿಗಳನ್ನು ಬರೆದು ವಾಚಕರ ಮನಸ್ಸನ್ನು ಸೆಳೆದುಕೊಂಡವರೂ ಇದ್ದಾರೆ. ಅದೇಕೋ, ಈ ಕಾದಂಬರಿಯನ್ನು ಮುಚ್ಚು ಹೆಸರಿನಿಂದಲೆ ಕೊಡಲು ಅಪೇಕ್ಷಿಸುತ್ತಿದ್ದಾರೆ. ಆದುದರಿಂದ ಲೇಖಕರ ಪರಿಚಯುವನ್ನು ಪ್ರಕಟವಾಗಿ ಮಾಡಿಕೊಡುವ ಆವಶ್ಯಕತೆ ನನಗಿಲ್ಲ. ಆದರೂ ಈ ಲೇಖಕರು ನನ್ನ ತೀರ ಹತ್ತಿರದ ಒಬ್ಬ ತರುಣ ಮಿತ್ರರೆಂಬುದನ್ನು ಹೇಳದಿರಲಾರೆ. ವಿಶ್ವವಿದ್ಯಾನಿಲಯದ ಎರಡು ಮೂರು ಪದವಿ-ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ಸಾಹಿತ್ಯದ ನಿರಂತರ ಅಭ್ಯಾಸಿಗಳೂ ಆಹುದು. ವಿಮರ್ಶಕರಿಗೆ ಇದರಲ್ಲಿ ಕೆಲವೊಂದು ಕೊರತೆಗಳು ಕಾಣಬಹುದಾದರೂ ಒಳ್ಳೆಯ ಸಾಹಿತ್ಯವನ್ನು ಸೃಷ್ಟಿಸಬಲ್ಲ ಶಕ್ತಿ ಈ ಲೇಖಕರಲ್ಲಿ ವಿಕಾಸಗೊಳ್ಳುತ್ತಲಿದೆಯೆಂಬ ಮಾತನ್ನು ಅವರು ಒಪ್ಪಿಕೊಳ್ಳದಿರರೆಂಬ ನಂಬುಗೆ ನನಗೆ ಸಾಕಷ್ಟು ಇದೆ. ಈ ತರುಣ ಲೇಖಕರ ಅಭ್ಯಾಸ-ಅನುಭವಗಳು, ಇನ್ನೂ ಹೆಚ್ಚಾಗಿ ರಸವತ್ತಾದ ಕೃತಿಗಳನ್ನು ನಮಗೆ ಒದಗಿಸಿ ಕೊಡಲಿ.

'ಜಯಂತಿ ಕಾರ್ಯಾಲಯ'
ಧಾರವಾಡ
ತಾ. ೧೧—೧—೧೯೫೦

**ಬೆಟಗೇರಿ ಕೃಷ್ಣಶರ್ಮ**

# ನನ್ನ ಮಾತು

ನನ್ನ ಈ ಸಣ್ಣ ಕಾದಂಬರಿಯನ್ನು ರಚಿಸುವಾಗ, ವಿಜಾಪುರದ ಗೋಲಗುಮ್ಮಟದಂಥ ವಿಶಾಲವಾದ ಉನ್ನತವಾದ ಕಲಾಪರಿಪೂರ್ಣವಾದ ಕೃತಿಯೊಂದನ್ನು ನಿರ್ಮಿಸಬೇಕೆಂಬ ಮಹತ್ವಾಕಾಂಕ್ಷೆಯಿಂದೇನೂ ನಾನು ಹೊರಡಲಿಲ್ಲ. ನನ್ನ ಯೋಗ್ಯತೆಯ ಅರಿವು ನನಗೆ ಇದ್ದಿತು. ಅಂತೆಯೇ ಸರಳವಾದ ಒಂದು ಕಥಾವಸ್ತು, ಚಿತ್ರಿಸಲು ಹಗುರಾಗುವಂತೆ ನಾಲ್ಕೇ ನಾಲ್ಕು ಮುಖ್ಯಪಾತ್ರಗಳು, ಇವುಗಳ ಬೆಳವಣಿಗೆಗೆ ಸಹಾಯವಾಗುವಂಥ ನಾಲ್ಕೋ ಆರೋ ಉಪಪಾತ್ರಗಳು, ನನ್ನ ನಿರೀಕ್ಷಣೆಯ ಅಳವಿನಲ್ಲಿಯೇ ಬಂದಂಥ ಹಿನ್ನೆಲೆ—ಇಷ್ಟರಿಂದಲೇ ಈ ಕೃತಿಯನ್ನು ನಿರ್ಮಿಸಲು ಹೆಣಗಿದ್ದೇನೆ. ಇದರಲ್ಲಿ ಕಥಾವಸ್ತುವಿಗಿಂತ ಸ್ವಭಾವಚಿತ್ರಕ್ಕೂ ಸ್ವಭಾವಚಿತ್ರಕ್ಕಿಂತ ಹಿನ್ನೆಲೆಗೂ, ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವೆ ಎಂದು ನನ್ನ ತಿಳುವಳಿಕೆ.

ಒಂದು ಸಮಾಜದ ಸಂಸ್ಕೃತಿ ತಲೆಯೆತ್ತಿ ನಿಲ್ಲುವದು ಆ ಸಮಾಜದ ಗತವೈಭವದಿಂದಲ್ಲ, ಅದರ ಅಂಗವಾಗಿ ಇಂದು ಜೀವಿಸುವ ವ್ಯಕ್ತಿಗಳ ವ್ಯಕ್ತಿತ್ವದಿಂದ; ವ್ಯಕ್ತಿಗಳ ಅವಿಚಾರ-ಡಾಂಭಿಕತೆಗಳು ಇಡಿಯ ಸಮಾಜದ ಮೋರೆಗೇ ಕಪ್ಪು ಬಳೆಯಬಹುದು; ವ್ಯಕ್ತಿತ್ವಪರಿಪೂರ್ಣತೆಯು ಆನುವಂಶಿಕತೆಗಿಂತ ಸ್ವಯಂಪ್ರೇರಿತ ವಿಕಾಸವನ್ನು ಹೆಚ್ಚು ಅವಲಂಬಿಸಿದೆ; ಮುಂತಾದ ಕೆಲವು ವಿಚಾರಗಳನ್ನು ಇಲ್ಲಿ ತೇಲಿಬಿಟ್ಟಿದ್ದೇನೆ. ಅವು ತೇಲಬಹುದೋ, ಮುಳುಗಬಹುದೋ, ವಾಚಕರೇ ನಿರ್ಣಯಿಸಬೇಕು. ಕೆಲವು ಸಾಮಾಜಿಕ ಸಮಸ್ಯೆಗಳನ್ನೂ ಎತ್ತಿದ್ದೇನೆ. ಅವನ್ನು ಬಿಡಿಸುವ ಗೋಜಿಗೆ ಮಾತ್ರ ಹೋಗಿಲ್ಲ.

ಈ ಕೃತಿಯಲ್ಲಿಯ ವ್ಯಕ್ತಿಗಳು ಕೇವಲ ಕಾಲ್ಪನಿಕವಾದವು ಎಂದು ಬೇರೆ ಹೇಳಬೇಕಾಗಿಲ್ಲ. ನನ್ನ ಪ್ರಥಮಪ್ರಯತ್ನವಾದ ಈ ಕಾದಂಬರಿಯಲ್ಲಿಯ ಗುಣ-ದೋಷಗಳನ್ನು ಪಳಗಿದ ವಿಮರ್ಶಕರೂ ಉಳಿದ ಸಹೃದಯರೂ ಎತ್ತಿ ತೋರಿಸಿದರೆ, ಅವರಿಗೆ ನಾನು ತುಂಬ ಋಣಿಯಾಗುವೆನು.

ತಮ್ಮ ಜನಪ್ರಿಯ ಮಾಲೆಯಲ್ಲಿ ಈ ಕಾದಂಬರಿಗೆ ಅವಕಾಶ ಕೊಟ್ಟ 'ಮನೋಹರ ಗ್ರಂಥಮಾಲೆ'ಯ ಸಂಪಾದಕರಿಗೂ ಅಮೌಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟ ನನ್ನ ಗೆಳೆಯರಾದ ಬೆಟಗೇರಿ ಕೃಷ್ಣಶರ್ಮರಿಗೂ ನನ್ನ ವಂದನೆಗಳು.

ಅಲ್ಲಲ್ಲಿ ಅಪಾರ್ಥವಾಗುವಂತೆ ಕೆಲವೊಂದು ಮುದ್ರಣದೋಷಗಳು ನುಸುಳಿ ಉಳಿದಿವೆ. ವಾಚಕರು ಸರಿಪಡಿಸಿಕೊಂಡು ಓದಬೇಕಾಗಿ ಕೋರಿಕೆ.

—ವರಗಿರಿ

# ನಮ್ಮ ಮಾತು

'**ಮಗು**' ಮತ್ತು '**ಗಂಗಾಸಾನಿ**' ಇವೆರಡೂ ಕೂಡಿಯೆ ಗ್ರಂಥಮಾಲೆಯ ೯ಲನೆಯ ಕುಸುಮ ಎಂದು ಪ್ರಕಟಿಸಲಾಗಿದೆ.

ಈ ಕಾದಂಬರಿ ಬರೆದವರೆಂದು ಪ್ರಕಟವಾದ 'ಗಿರಿಮಾತಾ' 'ವರಗಿರಿ' ಎಂಬ ಎರಡು ಹೆಸರುಗಳೂ ಒಂದೇಯಾಗಿವೆ.

'ಗಂಗಾಸಾನಿ'ಯ ಬರೆವಣಿಗೆ ಮನಸ್ಸನ್ನು ಮುಟ್ಟುವಂತಹದಾಗಿದೆ. ಕತೆಯಲ್ಲಿ ಓಟವಿದೆ. 'ದೇಸಿನುಡಿ' ಕತೆಗೆ, ಕತೆಯಲ್ಲಿಯ ಸಂಗತಿಗಳಿಗೆ ಒಂದು ವಾಸ್ತವಿಕತೆಯ ಒಪ್ಪ ಕೊಟ್ಟಿದೆ.

ಈ ಕಾದಂಬರಿಯನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಒಪ್ಪಿ ಕೊಟ್ಟುದಕ್ಕಾಗಿ ಶ್ರೀ. 'ವರಗಿರಿ' ಅವರಿಗೂ ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೂ ನಾವು ತುಂಬ ಕೃತಜ್ಞರಾಗಿದ್ದೇವೆ.

**—ಸಂಪಾದಕ.**

ನನ್ನ ಸರ್ವತೋಮುಖ ವಿಕಾಸಕ್ಕೆ ಕಾರಣರೂ

ಈ ಕಾದಂಬರಿಯನ್ನು ಬರೆಯಲು ಹುರಿದುಂಬಿಸಿದವರೂ

ಆದ

ಗುರುವರ್ಯ

ಶ್ರೀ. ವಿ. ಕೃ. ಗೋಕಾಕ ಅವರಿಗೆ

ಸವಿನಯ

ಅ ರ್ಪ ಣೆ

" ವರಗಿರಿ "

## ಬರಲಿರುವ ಕುಸುಮಗಳು

---

### ಮೆದಿನಾಪುರಮಲ್ಲ

( ಸಾಹಸಜೀವನವನ್ನು ಚಿತ್ರಿಸುವ ಕಾದಂಬರಿ )

ಬರೆದವರು : 'ಗುರುರಾಜ'

### ಮೂಕಬಲಿ

( ಸಾಮಾಜಿಕ ಕಾದಂಬರಿ )

ಬರೆದವರು : ಜಡಭರತ

### ಸಮರಸವೇ ಜೀವನ

( ಇಜ್ಜೋಡಿನ ಕೊನೆಯ ಭಾಗ )

ಬರೆದವರು : ವಿ. ಕೃ. ಗೋಕಾಕ

### ತಾಯಿ

( ಪರ್ಲ್‌ಬಕ್ಕಳ ಕಾದಂಬರಿಯ ಆಧಾರದಿಂದ )

ಬರೆದವರು : ಕೃಷ್ಣಕುಮಾರ

### ಮಾನಸಪುತ್ರ

( ಸಾಮಾಜಿಕ ಕಾದಂಬರಿ )

ಬರೆದವರು : ದ. ರಾ. ಬೇಂದ್ರೆ

### ಚೀನದ ಬಾಳು-ಬದುಕು

( ಚೀನದೇಶದ ಸಣ್ಣಕತೆಗಳ ಪ್ರಾತಿನಿಧಿಕ ಸಂಗ್ರಹ )

ಅನುವಾದಕರು : ದ. ರಾ. ಬೇಂದ್ರೆ ಮತ್ತು ಗುಂಡಪ್ಪ

# ಗಂಗಾಸಾನಿ

## ೧

ಆ ಊರ ಮುಂದೆ ಕೂಗಳತೆಯ ದೂರದಲ್ಲಿ ಶಂಭುಲಿಂಗನ ಬಾವಿ ಇದೆ. ಬಾವಿಯ ಹತ್ತಿರವೇ ಒಂದು ದೊಡ್ಡ ಸಿಬಿರ; ಪುರಾತನದ್ದು; ವಿಶಾಲವಾದುದು. ಅಚ್ಚ ಕಲ್ಲಿನಿಂದ ಕಟ್ಟಿದುದು. ಅದರ ನಾಲ್ಕೂ ಕಂಬಗಳೇನೋ ಜಕಣಾಚಾರ್ಯರವು. ಆದರೂ ಸಿಬಿರ ಅಷ್ಟು ಹಿಂದಿನದಲ್ಲವೆಂಬುದು ಸಿಬಿರದ ಮೇಲಿನ ಶಿಖರವನ್ನು ನೋಡಿದರೆ ಯಾರಿಗಾದರೂ ಹೊಳೆಯದೆ ಇರದು. ಇದಕ್ಕೆ ಶಂಭುಲಿಂಗನ ಸಿಬಿರ ಎಂದು ಹೆಸರು. ವರುಷಕ್ಕೊಮ್ಮೆ—ಶಿವರಾತ್ರಿಯ ದಿನ—ಊರಲ್ಲಿಯ ಶಂಭೂಲಿಂಗನ ಉತ್ಸವ ಮೂರ್ತಿಯನ್ನು ಇಲ್ಲಿಗೆ ತರುತ್ತಾರೆ; ಹಗಲು ರಾತ್ರಿ—ಇಪ್ಪತ್ತುನಾಲ್ಕು ತಾಸು—ಯಾಮ ಪೂಜೆ ಮಾಡುತ್ತಾರೆ. ಅಂತೆಯೇ ಈ ಸಿಬಿರಕ್ಕೆ ಶಂಭೂಲಿಂಗನ ಸಿಬಿರ ಎಂಬ ಹೆಸರು.

ಸಿಬಿರ ವಿಶಾಲವಾಗಿದ್ದರೂ ಉನ್ನತವಾಗಿದ್ದರೂ ಸುತ್ತಲೂ ಹರವಾಗಿ ಹರಡಿದ, ದಟ್ಟವಾಗಿ ಬೆಳೆದ ಮಾವಿನ ತೋಪಿನಲ್ಲಿ ಎಲ್ಲಿಯೋ ಹುದುಗಿಕೊಂಡಂತೆ ಕಾಣುತ್ತಿದೆ. ತೋಪು ಅಷ್ಟು ದೊಡ್ಡದು; ಮಾವಿನ ಗಿಡಗಳು ಅಷ್ಟು ಎತ್ತರ. ಅರಿಯದವರು ಹಗಲೂ ಸಹ ಅಲ್ಲಿ ಹಾಯಲು ಅಂಜುವರು. ಮರಗಳು ಸಾಲುಸಾಲಾಗಿ ಹಂದರದ ಕಂಬಗಳಂತಿಲ್ಲ; ಸಿಬಿರದ ಸುತ್ತಲೂ ಮನಸ್ಸಿಗೆ ಬಂದಂತೆ ಗುಂಪುಗಟ್ಟಿ ನಿಂತಿವೆ ಗುರುವಿನ ಸುತ್ತಲು ಭಯಭಕ್ತಿಗಳಿಂದ ಶಿಷ್ಯರು ನಿಂತಂತೆ; ದೇವರ ಮೂರ್ತಿಯ ಸುತ್ತಲೂ ಭಕ್ತರು ನಿಂತಂತೆ. ಊರಿನಿಂದ ಊರ ರೇಲ್ವೆಯ ನಿಲ್ದಾಣಕ್ಕೆ ಹೋಗುವ ದಾರಿಯು ಸಿಬಿರದ ಪಕ್ಕದಲ್ಲಿಯೇ ತೋಪಿನೊಳಗೆ ನುಸುಳಿ ಹೋಗಿದೆ.

ಗಂಗಾಸಾನಿಯ ದಿನಚರಿಯಲ್ಲಿ ಪ್ರತಿದಿನ ತಪ್ಪದೆ ಶಂಭುಲಿಂಗನ ಬಾವಿಯಲ್ಲಿ ಮೈತೊಳೆದು ಹೋಗುವದೊಂದು ಅತಿ ಮಹತ್ವದ ಕಾರ್ಯಕ್ರಮ. ಮಳೆಯಿರಲಿ, ಚಳಿಯಿರಲಿ, ಗಾಳಿಯಿರಲಿ ಮೈಯಲ್ಲಿ ಮುಗುಡವಿರಲಿ—ಏನಾದರೂ ಈ ಕಾರ್ಯಕ್ರಮಕ್ಕೆ ವಿಘ್ನ ಬಾರದು.

ಗಂಗಾಸಾನಿಯ ಮೈತೊಳೆಯುವ ಕೆಲಸ ಅದೇ ತಾನೆ ಮುಗಿದಿದ್ದಿತು. ಒಗೆದ ಬಟ್ಟೆಗಳನ್ನೆಲ್ಲ ಹಿಂಡಿ ಸಿಂಬಿ ಮಾಡಿ ಸಿಬಿರದ ಕಟ್ಟೆಯ ತುದಿಯಲ್ಲಿ

ಒಂದರ ಮೇಲೊಂದು ಇಟ್ಟಿದ್ದಳು. ಬಿಳಿಯ ಪತ್ತಲವನ್ನುಟ್ಟಿದ್ದಳು. ಎಣ್ಣೆ ಹೂಸಿದ ಕೂದಲುಗಳನ್ನು ಬೆನ್ನ ಮೇಲೆ ಹರಹಿಕೊಂಡಿದ್ದಳು. ಜೊತೆಗೆ ತಂದ ಚೀಟಿಯೊಳಗಿನ ಕುಂಕುಮವನ್ನು ದುಂಡಾಗಿ ಹಣೆಗೆ ಹಚ್ಚಿಕೊಂಡಿದ್ದಳು. ಸಿಬಿರದ ಪಕ್ಕದಲ್ಲಿಯೇ ಬೆಳೆದ ಬಿಲ್ವಪತ್ರಿಯ ಗಿಡದಡಿಯಲ್ಲಿ ನಿಂತು ಶಂಭುಲಿಂಗನ ಪೂಜೆಗಾಗಿ ಎಳೆಯೆಳೆಯ ಬಿಲ್ವಪತ್ರಿಗಳನ್ನು ಆಯ್ದು ಆಯ್ದು ಉಡಿಯಲ್ಲಿ ಹಾಕಿಕೊಳ್ಳುತ್ತಿದ್ದಳು.

ಇಪ್ಪತ್ತಾರು-ಇಪ್ಪತ್ತೇಳು ವರುಷದ ಹೆಂಗಸು ಗಂಗಾಸಾನಿ. ತುಂಬಿದ ದೇಹ; ಎತ್ತರದ ಆಳು; ಕಣ್ಣು ಮೂಗು-ಬಾಯ್ಗಳು ಪ್ರಮಾಣಬದ್ಧವಾಗಿದ್ದುದರಿಂದ ಬಣ್ಣ ಸ್ವಲ್ಪ ತಿಳಿಗಪ್ಪಾಗಿದ್ದರೂ ಮೋರೆಯ ಮೇಲೆ ಕಳೆಯಿದೆ; ಬಿಳಿಯ ಹಲ್ಲುಗಳು, ಹೊಳೆವ ಕಣ್ಣುಗಳು, ಕಿವಿಯಲ್ಲಿಯ ಹರಳಿನ ನಕ್ಷತ್ರಗಳು ಕಪ್ಪು ಬಣ್ಣದ ಹಿನ್ನೆಲೆಯಲ್ಲಿ ಎದ್ದು ಕಾಣುತ್ತಿವೆ. ಸತತವೂ ಮುಖದ ಮೇಲೆ ಆಡುವ ಮೃದುಹಾಸದಿಂದ ಮುಖವು ಯಾವಾಗಲೂ ಅರಳಿಯೇ ಇರುವದು. ಆದರೂ ಈ ದಿನ ಆಕೆಯ ಮನಸ್ಸಿನಲ್ಲಿಯ ಒಂದು ಕಾತರ ಆಕೆಯ ಮೃದುಹಾಸಕ್ಕೆ ಮಂದತೆಯನ್ನು ತಂದಿದ್ದಿತು.

ಮುಂಜಾನೆಯ ಎಂಟರ ಗಾಡಿ ಆಕೆ ಮೈ ತೊಳೆಯುತ್ತಿದ್ದಾಗಲೇ ಕೂಗಿದ್ದಿತು. ನಿಲ್ದಾಣದಿಂದ ಶಂಭುಲಿಂಗನ ತೋಪು ಅರ್ಧ ತಾಸಿನ ಹಾದಿ. ಗಾಡಿಗೆ ಬಂದವರು ತೋಪಿನ ಸನಿಯಕ್ಕೆ ಬಂದಿರಲುಬೇಕು. ಅಂತೆಯೇ ಆಕೆ ಬಿಲ್ವಪತ್ರಿಯನ್ನು ಕೊಯ್ಯುತ್ತಿರುವಾಗ, ಆಗಾಗ ನಿಲ್ದಾಣದತ್ತ ನೋಡುತ್ತಿದ್ದಳು. ಶಂಕರಭಟ್ಟರು ಈ ಗಾಡಿಗೆ ಬರಲೇಬೇಕೆಂದು ಆಕೆಯ ಭರವಸೆ. ಯಾವ ಸುದ್ದಿಯನ್ನು ತರುವರೋ ಎಂಬ ಕಾತರ.

ಎರಡು ದಿನಗಳ ಹಿಂದೆ ಶಂಕರಭಟ್ಟರಿಗೆ ತಂತಿ ಬಂದಿದ್ದಿತು— ಅವರ ಅಳಿಯನಿಗೆ ಜಡ್ಡು ಜೋರು, ಹೊರಟು ಬರಬೇಕು ಎಂದು. ಯಾವ ಜಡ್ಡು ಏನು ತಾನು ಎಂಬುದು ಅದರಲ್ಲಿರಲಿಲ್ಲ. ತಾರಿನ ಸುದ್ದಿ ಊರಿನ ಜನರನ್ನೆಲ್ಲ ಕಳವಳದಲ್ಲಿ ಕೆಡಹಿದ್ದಿತು. ಅಂದೆಯೇ ಶಂಕರಭಟ್ಟರು ಅಳಿಯನ ಊರಿಗೆ ಧಾವಿಸಿದ್ದರು. ಊರಿಗೆ ಹೋಗುವ ಮುಂದೆ, ಹೋದೊಡನೆ ಯಾವುದಕ್ಕೂ ಪತ್ರ ಹಾಕುವದಾಗಿಯೂ ಒಂದೆರಡು ದಿನಗಳಲ್ಲಿಯೆ ತಿರುಗಿ ಬರುವದು ಸಾಧ್ಯವಿದ್ದುದಾದರೆ ಪತ್ರವನ್ನೇನೂ ಬರೆಯುವದಿಲ್ಲವಾಗಿಯೂ ಹೇಳಿದ್ದರು.

ಪತ್ರದ ಸುಳಿವೇ ಇಲ್ಲದ ಪರಿಂದ ಊರಿನ ಜನರೆಲ್ಲ ಅವರು ಇಂದು ಇಲ್ಲವಾದರೆ ನಾಳೆ ಬರಲೇಬೇಕೆಂದು ತರ್ಕಿಸಿದ್ದರು.

ಆಕೆಗೆ ಶಂಕರಭಟ್ಟರ ಗುರುತು ದೂರದಿಂದಲೇ ಹತ್ತಿತು– ಅವರ ಬಗಲುಗಸಿಯ ಅಂಗಿ, ಮುಂಡಾಸ, ಹೆಗಲ ಮೇಲಿನ ಹಸಿಬೆ ಇವುಗಳ ಮೇಲಿಂದ. ಹತ್ತಿರ ಬಂದಾಕ್ಷಣ ಆಕೆ ಕೇಳಿದಳು, ಹೆದರಿಕೆಯ ದನಿಯಿಂದ, “ನಿಮ್ಮ ಅಳಿಯನಿಗೆ ಹ್ಯಾಂಗದ ಭಟ್ರೇ ?” ಎಂದು.

ಅವರ ಬಾಯಿಂದ ಬರುವ ಉತ್ತರಕ್ಕಿಂತ ಮೊದಲೇ ಅವರ ಕಣ್ಣಿನ ಹನಿಗಳೇ ಉತ್ತರ ಕೊಟ್ಟವು. ಆರೆಕ್ಷಣದಲ್ಲಿ ಆಕೆಯ ಕಣ್ಣುಳೂ ನೀರಿನಲ್ಲಿ ತೇಲಹತ್ತಿದವು. ಅವರ ಮೌನ ಅಳಿಯನ ಸುದ್ದಿಯನ್ನು ಸ್ಪಷ್ಟೀಕರಿಸಿತು.

ಬೆಂದು ಬಳಲಿ ಸೋತ ಶಂಕರಭಟ್ಟರು ಸಿಬಿರದ ಮೆಟ್ಟಿಲಿನ ಮೇಲೆ ಕುಳಿತರು. ಹೆಗಲ ಮೇಲಿನ ಹಸಿಬೆಯನ್ನು ಬದಿಯಲ್ಲಿ ಚೆಲ್ಲಿ ತಲೆಯ ಮೇಲಿನ ರುಮಾಲನ್ನು ಅದರ ಮೇಲಿರಿಸಿ ನೀಳವಾದ ಉಸಿರ್ಗರೆದರು. ಎರಡು ದಿನವೂ ನಿದ್ದೆ ಕಾಣದ ಕೆಂಪಡರಿದ ಕಣ್ಣುಗಳು ಕಣ್ಣಿನ ಹೊದರುಗಳ ತಳದಲ್ಲಿ ಹುದುಗಿಕೊಂಡಿದ್ದವು. ಬೆಳೆದ ಗಡ್ಡ-ಮೀಸೆಗಳು ಅವರ ಅಂತರಾಳದ ದುಃಖದ ಪ್ರತೀಕದಂತಿದ್ದವು. ಇಳಿವಯಸ್ಸಿನಿಂದ ತಿಳುವಾದ ಮೈ ಇನ್ನಿಷ್ಟು ಬಡಕವಾಗಿದ್ದಿತು. ಕಣ್ಣ ಕೆಳಗೆ ಕಪ್ಪನ್ನ ಉಂಗುರಗಳು ಮೂಡಿದ್ದವು.

ಗಂಗಾಸಾನಿ ಅವರ ಹತ್ತಿರ ಬಂದು ಕಟ್ಟೆಯ ತುದಿಗಿಟ್ಟ ಬಟ್ಟೆಯ ಗಂಟಿನ ಮೇಲೆ ಎಡ ತೋಳನ್ನಿರಿಸಿ, ಶಂಕರಭಟ್ಟರು ತೋಡಿಕೊಳ್ಳಲು ಹತ್ತಿದ ಕರುಣಕಥೆಯನ್ನು ನಿಶ್ಚಲಳಾಗಿ ಆಲಿಸಹತ್ತಿದಳು. ಗಾಳಿಯಿಂದ ಅಲುಗಾಡುತ್ತಿದ್ದ ಆಕೆಯ ಕೂದಲುಗಳನ್ನೂ ಕಣ್ಣುಗಳೊಳಗಿನಿಂದ ಬಸಿಯುತ್ತಿದ್ದ ಅವಳ ಕಣ್ಣೀರನ್ನೂ ಮರೆತುಬಿಟ್ಟರೆ, ಅವಳು ಸಹಾನುಭೂತಿಯ ಮೇಣದಿಂದ ಮಾಡಿದ ಪ್ರತಿಮೆಯೋ ಎನ್ನುವಂತೆ ಅಚಲಳಾಗಿ ನಿಂತುಬಿಟ್ಟಿದ್ದಳು. ಅವರು ನಡುಗುವ ದನಿಯಲ್ಲಿ ಹೇಳತೊಡಗಿದರು :

“ಗಂಗವ್ವಾ, ನನ್ನ ಅದೃಷ್ಟ; ನನ್ನ ಕೂಸು ಸುಭಗಾನ ದುರ್ಭಾಗ್ಯ. ಮಾಡುವದೇನು ? ನಾನು ಅಳಿಯನ ಊರಿಗೆ ಹೋದಾಗ ಆಗಲೇ ಅವನನ್ನು ದವಾಖಾನೆಗೆ ತೆಗೆದುಕೊಂಡು ಹೋಗಿಬಿಟ್ಟಿದ್ದರು. ಈಗ ನಾಲ್ಕಾರು ದಿನಗಳಿಂದ ಬಲಗಡೆಯ ಪಕ್ಕದಲ್ಲಿ ಹೊಟ್ಟೆ ನೋಯಹತ್ತಿತಂತ. ಜಂತು ಆಗಿದ

ಬಹುದು ಅಂದು ಜಂತಿನ ಪುಡಿ ತಗೊಂಡನಂತ. ಆದರೂ ಹೊಟ್ಟೆನೋವು ನಿಲ್ಲಲಿಲ್ಲ. ಆಮ್ಯಾಲೆ ಎರಡು ದಿನ ಕೈಕಾಲಿಗೇ ಆಗಲಿಲ್ಲ. ಗೆಜ್ಜಿ ಬಿಗಿಯು ಹತ್ತಿತಂತ. ಮನೆಯ ಜನ ಹೆದರಿ ಡಾಕ್ಟರನ ಕರೀಲಿಕ್ಕೆ ಹೋದ್ರು. ಅವರು ಬಂದು ನೋಡಿ ಏನೂ ಮಾತಾಡವೇ ಆಗಿಂದಾಗ ದವಾಖಾನೆಗೆ ತಗೊಂಡು ಹೋಗಿ ಅವರಿಗೆ ಹೇಳದೇನ ಹೊಟ್ಟೀ ಕೊಯ್ದು, ಕರಳಿನಿಂದ ಏನಸ್ತೋ ಕೊಯ್ದು ಒಗದ್ರಂತ: ಆಮ್ಯಾಲೆ ಡಾಕ್ಟರಿಗೆ ಸ್ವಲ್ಪ ಧೈರ್ಯ ಬಂದು 'ಇನ್ನು ತಾಸು ಎರಡು ತಾಸು ಬಿಟ್ಟಿದ್ರ ನಿಮ್ಮ ಹುಡುಗ ಸತ್ತಹೋಗತಿದ್ದ' ಅಂದ್ರಂತ. ಅದೇನೊ ಅಪೆಂಡಿಸೈಸ್ ಅಂತ ಆಗಿತ್ತಂತ. ಅವರು ಇನ್ನೇನೂ ಹೆದರಿಕಿ ಇಲ್ಲ ಅಂದಾಗ ಎಲ್ಲರಿಗೂ ಆನಂದಾತು. ಅದೇ ಹೊತ್ತಿಗೆ ನಾನೂ ಹೋದೆ....ನಿನ್ನೆ ಸಂಜೀತನಕ ಆರಾಮಿದ್ದ. ನನ್ನ ಜೋಡಿ ಮಾತಾಡಿದ. ಆದ್ರ ನಮ್ ದುರ್ದೈವ. ಸಂಜೀಮುಂದ ಸ್ವಲ್ಪ ಮೈ ಬೆಚ್ಚಗಾದವು. ಬಡ ಬಡಿಸಹತ್ತಿದ. ರಾತ್ರಿ ಎಂಟು ಗಂಟೆಗಾಗಲೇ ನಾಡಿ ಮಂದ ಆಗಹತ್ತಿದವು. ಡಾಕ್ಟರೂ ಗಾಬರಿ ಆದ್ರು. ಇಂಜೆಕ್ಶನ್ ಕೊಟ್ಟರು....ಒಂಬತ್ತು ಗಂಟೆಗೆ ಆಗಲೇ ನನ್ನ ಅಳಿಯಾ ಹೋಗಿಬಿಟ್ಟ...."

ಮುಂದೆ ಅವರಿಂದ ಮಾತಾಡುವದಾಗಲಿಲ್ಲ.

ಗಂಗಾಸಾನಿಯೆಂದಳು: "ಯಾರೇನು ಮಾಡುವದದೆ ಭಟ್ರೆ....ಇವೆಲ್ಲ ಆ ಶಂಭುಲಿಂಗನ ಆಟ. ಮನಸ್ಯಾನ ಕೈಯಾಗ ಏನದ?....ಆದರೂ ನಿಮ್ಮಂಥ ದೇವಭೋಳೀ ಜನರಿಗೆ ಹೀಂಗ ಆಗಬಾರದಾಗಿತ್ತು. ಶಂಭುಲಿಂಗ ಆ ಪರ ದೇಶಿ ಎಳೀ ಹುಡುಗಿ ಸುಭಗಾನ ಕುತಗೀ ಕೊಯ್ದ...." ಎನ್ನುವಾಗಲೇ ಗಂಗಾಸಾನಿಯ ಮನಸ್ಸು ಸುಭಗಾನ ಕರಾಳ ಭವಿಷ್ಯದ ಕಡೆಗೆ ಓಡಹತ್ತಿ, ಶೂನ್ಯದೃಷ್ಟಿಯಿಂದ ನೆಲವನ್ನು ದಿಟ್ಟಿಸಹತ್ತಿದಳು. ಹದಿನಾರು ವರುಷದ ಹುಡುಗಿ. ತಾಯಿಯನ್ನು ಕಳೆದುಕೊಂಡು ಮೊದಲೇ ಪರದೇಶಿಯಾದ ಸುಭಗಾ. ಕಲ್ಲು-ಮುಳ್ಳಿಗೆ ಹತ್ತಿ ಬೆಳೆಬೆಳೆಯುವದರಲ್ಲಿಯೇ, ಹೂವಾಗಿ ಅದೇ ತಾನೆ ಅರಳುವದರಲ್ಲಿಯೇ, ಸುಖದ ಕಲ್ಪನೆಯ ಸುಳುವೂ ಸಹ ಮೂಡುವ ಮೊದಲೆ ಅವಳನ್ನು ವಿಧಿ ಕಗ್ಗತ್ತಲೆಯ ಕೊಳದಲ್ಲಿ ದೂಡಿಬಿಟ್ಟಿತು. ಆ ಬ್ರಾಹ್ಮಣ ಸಮಾಜ, ಆ ಕಟ್ಟುನಿಟ್ಟುಗಳು, ವಿಧವೆಯರಿಗೆ ಸಮಾಜದಲ್ಲಿರುವ ಸ್ಥಾನ ಮಾನ, ಅವರ ಅಸಹಾಯ್ಯತೆ, ಕಷ್ಟನಷ್ಟ, ಸಮಾಜದ ಔದಾಸೀನ್ಯ, ತಿರಸ್ಕಾರ

ಇವೆಲ್ಲ ಗಂಗಾಸಾನಿಯ ಕಲ್ಪನೆಗೆ ತಾಗಿ, ಆಕೆಯ ಮನಸ್ಸನ್ನು ನಡುಗಿಸಿದವು; ಅಂತಃಕರಣವನ್ನು ಕಲುಕಿಸಿದವು. ಆವಳಿಗೆ ಆ ವಿಚಾರವೇ ಅಸಹನೀಯ ವಾಯಿತು. "ಶಂಕರಭಟ್ಟರೇ, ಇನ್ನೇಳ್ರಿ. ಬಿಸಿಲು ಬಲಿಯಹತ್ತಿತು. ಸುಮ್ಮನೆ ವಿಚಾರ ಮಾಡಿದರೆ ಏನಾಗೋದದ?" ಎಂದು ಬಟ್ಟೆಯ ಗಂಟನ್ನು ಬಗಲಲ್ಲಿ ಇಟ್ಟುಕೊಂಡಳು. ಶಂಕರಭಟ್ಟರು "ನೀನು ಹೋಗವ್ವ, ನಾನು ಸ್ನಾನ ಮಾಡಿಕೊಂಡು ಬರತೇನಿ" ಎಂದು ಹಸಿಬೆಯೊಳಗಿನ ಚೋಟಾ ಪಂಜಿಯನ್ನು ತೆಗೆದು ಕಣ್ಣೊತ್ತಿಕೊಂಡರು.

## ೨

ತೋಪಿನ ಹತ್ತಿರವೇ ತುಸು ದೂರದಲ್ಲಿ ಶಂಭುಲಿಂಗನ ಬೆಟ್ಟ. ಗುಡ್ಡವೆಂದು ಕರೆಯುಬಹುದಾದಷ್ಟು ಉನ್ನತವಾಗಿದೆ; ಉದ್ದವಾಗಿದೆ. ಬೆಟ್ಟದ ತಲೆಯ ಮೇಲೆ ನಟ್ಟ ನಡುವೆ ಶಂಭುಲಿಂಗನ ದೇವಸ್ಥಾನವಿದೆ. ದೇವಸ್ಥಾನದ ಸುತ್ತಲೂ ನಾಲ್ಕೂ ಕಡೆಗೆ ದೊಡ್ಡ ಪವಳಿಯಿದೆ. ಪವಳಿಯ ಹೊರಗೆ ನಾಲ್ಕೂ ಕಡೆಗೆ ಮನೆಗಳು ಅವಿತುಕೊಂಡಿವೆ. ಮಧ್ಯದ ಉನ್ನತವಾದ ಶಂಭುಲಿಂಗನ ಬೆಟ್ಟದ ಸುತ್ತಲೂ ಮಾಲೆಯಂತೆ ಸುತ್ತುಗಟ್ಟಿದ ಏಳು ಸಣ್ಣ ಸಣ್ಣ ಬೆಟ್ಟಗಳಿವೆ. ಮಧ್ಯದ ಬೆಟ್ಟದ ಮೇಲೆ ನಿಂತು ನಾಲ್ಕೂ ಕಡೆಗೆ ನೋಡಿದರೆ ಗಾವುದ ಗಾವುದಗಳ ವರೆಗೆ ಬೈಲೇ ಬೈಲು. ಹಚ್ಚ ಹಸುರಿನ ಹೊಲಗಳ ಪಟ್ಟಿ ಪಟ್ಟಿಗಳು ಎಲ್ಲೆಲ್ಲಿಯೂ ಹಬ್ಬಿವೆ. ಒಂದೆಡೆಗೆ ಯಾವದೋ ಒಂದು ಪರ್ವತಶ್ರೇಣಿ ದೂರದಲ್ಲಿ ನೀಲವರ್ಣದಲ್ಲಿ ಮುಸುಮುಸುಕಾಗಿ ಕಾಣುತ್ತಿದ್ದರೆ, ಇನ್ನೊಂದೆಡೆಗೆ ಮಿಂಚುವ ಹೊಳೆಯೊಂದು ಬೆಳ್ಳಿಯ ಕಡ್ಡಿಯಂತೆ ಅಡ್ಡ ಉದ್ದ ಓಡಿದೆ. ಒಂದೆಡೆಗೆ ಉಗಿಬಂಡಿಯ ಹಳಿಯ ಎಳೆ ಕಣ್ಣು ನಿಲುಕುವ ವರೆಗೂ ಕಾಣುತ್ತಿದ್ದರೆ ಮತ್ತೊಂದೆಡೆಗೆ, ಟೈನುದಾರಿಯ ಗಿಡಗಳ ಜೋಡು ಸಾಲುಗಳು ಎಲ್ಲಿಯೋ ಹುಟ್ಟಿ ಎಲ್ಲಿಯೋ ಕೊನೆಗೊಂಡಿವೆ. ಅಲ್ಲಿ ಇಲ್ಲಿ ಎಲ್ಲೆಡೆಗೂ ಹಳ್ಳಿಗಳ ಹಸಿರು ಹಸಿರು ಗುಂಪುಗಳು ಮುಗಿಲಿನ ಅಂಚಿನ ವರೆಗೂ ಕಣ್ಣಿಗೆ ಬೀಳುತ್ತಿವೆ. ಬೆಟ್ಟದ ತುದಿಯಲ್ಲಿ ಒಂದು ಕ್ಷಣ ನಿಂತರೆ ಸಾಕು, ಆ ತಂಪುಗಾಳಿ, ಆ ನಿರ್ಮಲ ಹವೆ, ಆ ಸೃಷ್ಟಿಯ ಸೊಬಗು, ಆ

ಉನ್ನತ ಸ್ಥಿತಿ, ಆ ದೇವಸಾನ್ನಿಧ್ಯ ಇವೆಲ್ಲವೂ ಒಂದು ಕ್ಷಣದ ಮಟ್ಟಿಗಾದರೂ ಈ ಇಹಲೋಕದ, ಜನಜಂಗುಳಿಯ, ಕಷ್ಟನಷ್ಟಗಳ ಪರಿಯನ್ನು ಮರೆಯಿಸಿ ಬೇರೊಂದು ಜಗತ್ತಿನಲ್ಲಿಯೇ ತಂದಿಳಿಸುತ್ತವೆ. ಶಂಭುಲಿಂಗನ ದೇವಸ್ಥಾನದ ಅಂದವಾದ ಶಿಖರ ಆ ಬೆಟ್ಟಕ್ಕೇ ಶಿಖರವಾಗಿ ಅದೆಷ್ಟೋ ದೂರದಿಂದ ಕಾಣುತ್ತದೆ.

ಗಂಗಾಸಾನಿ ಶಂಭುಲಿಂಗನ ದೇವಸ್ಥಾನದ ಹೊರಗಿನ ಮಹಾದ್ವಾರದ ದೊಡ್ಡ ಕಲ್ಲಿನ ಹೊಸತಿಲದಲ್ಲಿ ಕಾಲಿಟ್ಟಾಗ, ಪವಳಿಯ ಅಗಸಿಯ ನಗಾರಿ ಖಾನೆಯಲ್ಲಿ ಮಧ್ಯಾಹ್ನ ೧೨ ಗಂಟೆಯ ನಗಾರಿಯಾಯಿತು. ಮನಸ್ಸಿನ ಭಾರ ದಿಂದ ಯಾಂತ್ರಿಕವಾಗಿ ಆಕೆ ದೇವಸ್ಥಾನದಲ್ಲಿ ಸಾಗಿದ್ದಳಾದ್ದರಿಂದ ನಗಾರಿಯ ಸಪ್ಪಳ ಆಕೆಗೆ ಕೇಳಲೇ ಇಲ್ಲ. ಆಕೆ ಎಡದ ಕೈಯಲ್ಲೊಂದು ಅರಿಸಿಣ-ಕುಂಕುಮ-ಅಕ್ಕೀಕಾಳ್ಗಳಿಂದ ತುಂಬಿದ ಪಂಚಪಾಳೆಯನ್ನು ಹಿಡಿದಿದ್ದಳು. ಅದರ ಮೇಲೆಯೇ ತುಪ್ಪದಲ್ಲಿ ತೋಯಿಸಿದ ನಾಲ್ಕಾರು ಹೂಬತ್ತಿಗಳಿದ್ದವು. ಮಡಚಿ ನೆಲಕ್ಕೆ ಸಮಾಂತರವಾಗಿ ಹಿಡಿದ ಆ ಮುಂದೋಳಿನ ಮಧ್ಯ ಬಿಲ್ವ ಪತ್ರಿಯ ಬುಟ್ಟಿ ಜೋತಾಡುತ್ತಿತ್ತು. ಬಲಗೈಯಲ್ಲೊಂದು ಬೆಳ್ಳಿಯ ಹಿಡಿ ಕೆಯ ಬಿಳಿಯ ಕೂದಲಿನ ಚವರಿಯಿತ್ತು.

ದೇವಸ್ಥಾನದ ಒಳಗೆ ಹೊಕ್ಕೊಡನೆ, ಅಲ್ಲಿಯ ಪ್ರಶಾಂತ ವಾತಾವರ ಣವೂ ಧೂಪಾರತಿಯ ಧೂಪದ, ಅಲ್ಲಿ ಇಲ್ಲಿ ಚುಚ್ಚಿದ ಊದಿನ ಕಡ್ಡಿಗಳ ಸುವಾಸನೆಯೂ ಆಕೆಯ ಭಾರವಾದ ಮನಸ್ಸಿಗೆ ತಾತ್ಕಾಲಿಕವಾದ ನೆಮ್ಮದಿ ಯನ್ನು ತಂದುವಾದರೂ ಆಕೆಗೆ ಆಗ ಅದು ಸೇರಲಿಲ್ಲ.

ಶಂಭುಲಿಂಗನ ಗುಡಿ ಮುಖ್ಯವಾಗಿ ಮೂರು ಭಾಗವಾಗಿದೆ. ತೀರ ಹೊರಗಿನ ಭಾಗ ಇತ್ತೀಚಿಗಿನದು. ಐವತ್ತು ಅರವತ್ತು ವರ್ಷಗಳ ಹಿಂದೆ ಮುಂಬಯಿಯ ಗುಜರಾತಿ ಹೆಣ್ಣುಮಗಳೊಬ್ಬಳು ಕಟ್ಟಿಸಿಕೊಟ್ಟದು. ಎತ್ತರ ವಾದ ಕಲ್ಲಿನ ಗೋಡೆಗಳು; ಎತ್ತರವಾದ ಕಲ್ಲಿನ ಕಂಬಗಳ ಮೇಲೆ ನಿಂತ ಕಲ್ಲಿನ ಮಾಳಿಗೆ; ಕಲ್ಲಿನವೇ ತೊಲೆಗಳು; ವಿಶಾಲವಾದ ಮಾಡಗಳು; ವಿಶಾಲವಾದ ಕಬ್ಬಿಣದ ಕಂಬಿಗಳಿಲ್ಲದ ಕಿಡಿಕಿಗಳು; ಮಾಳಿಗೆಯ ತಳದ ಕಲ್ಲುಗಳಲ್ಲಿ ನಾನಾಬಗೆಯ ಸುಳುವುಗಳನ್ನೂ ನಾಗರಹಾವುಗಳ ನಾನಾ ಬಗೆಯ ಸುರುಳಿಗಳನ್ನು ಕೊರೆದಿದ್ದಾರೆ. ಎಲ್ಲಿಯೂ ಕಬ್ಬಿಣದ ಕಂಬಿಗಳಿಗೆ

ಜೋತಾಡುವ ಗಂಟೆಗಳ ಸಾಲುಗಳನ್ನೊಳಗೊಂಡ ಕಬ್ಬಿಣದ ಪಟ್ಟಿಗಳಿವೆ; ಉತ್ಸವದ ಸಮಯಗಳಲ್ಲಿ ಇಲ್ಲಿ ಭಕ್ತಜನ ಕಿಕ್ಕಿರಿದು ತುಂಬಿರುತ್ತದೆ. ದೀವಟಿಗೆಗಳ ಹೊಗೆಯಿಂದ ಮಾಳಿಗೆಯ ತಳ ಕಪ್ಪಾಗಿದೆ; ಗೋಡೆಗಳೂ ಕಂಬಗಳೂ ಭಕ್ತಜನರು ಒರಸಿದ ಎಣ್ಣೆಯಿಂದ ಅಲ್ಲಲ್ಲಿ ಜಿಗಿಜಿಗಿಯಾಗಿವೆ.

ಕಟಾಂಜನದ ಬಾಗಿಲೊಂದು ಈ ಮುಂಭಾಗವನ್ನು ದೇವಸ್ಥಾನದ ನಡುವಿನ ಭಾಗದಿಂದ ಬೇರ್ಪಡಿಸುತ್ತದೆ. ಈ ಭಾಗ ಸಣ್ಣದು; ಹಳೆಯದು; ಹೆಚ್ಚು ಕತ್ತಲೆಯುಳ್ಳದ್ದು. ನೂರಾರು ವರ್ಷಗಳಿಂದ ಪ್ರತಿವರ್ಷವೂ ಎರಡು ಸಲ ಹಚ್ಚುವ ಸುಣ್ಣವು ಗೋಡೆಗಳಿಗೆ ಅಂಗೈದಪ್ಪದ ಹಕ್ಕಳೆಯಾಗಿ ಅಂಟಿಕೊಂಡಿದೆ. ಗೋಡೆಗೆ ಹೊಂದಿ ಎಡಬಲಗಳಲ್ಲಿ ದೀವಿಗೆಗಳ ಸಾಲುಗಳಿವೆ. ಮೊನ್ನೆ ಮೊನ್ನೆ ಯಾರೋ ನೆಲಕ್ಕೆ ಸಂಗಮವರಿ ಕಲ್ಲನ್ನು ಹೊಂದಿಸಿಕೊಟ್ಟಿದ್ದಾರೆ; ಮಧ್ಯಭಾಗದ ಹಿಂದುಗಡೆ ನಟ್ಟನಡುವೆ, ಶಂಭುಲಿಂಗನ ಉತ್ಸವಮೂರ್ತಿ ಕಲ್ಲಿನ ಗದ್ದುಗೆಯ ಮೇಲೆ ಮಂಡಿಸಿದೆ; ಚಿನ್ನದ ಆಭರಣ, ರೇಶಿಮೆಯ ವಸ್ತ್ರಗಳಿಂದ ಅಂದವಾಗಿ ಕಾಣುತ್ತಿದೆ; ಉತ್ಸವ ಮೂರ್ತಿಯ ಹಿಂದೆ ದೊಡ್ಡದಾದ ಬೆಳ್ಳಿಯ ಪ್ರಭಾವಳಿಯಿದೆ. ಈ ಪ್ರಭಾವಳಿಯೇ ಗರ್ಭಗುಡಿಯನ್ನು ನಡುವಿನ ಗುಡಿಯಿಂದ ಮರೆಮಾಡುತ್ತಿದೆ. ಹೊರಗೆ ನಿಂತರೆ ಗರ್ಭಗುಡಿಯಾಗಲಿ ಅಲ್ಲಿರುವ ಮೂಲ ದೇವರಾಗಲಿ ಕಾಣುವದಿಲ್ಲ. ಪ್ರಭಾವಳಿಯ ನಡುವಿನ ಸುಳಿಗಳ ಸಂದಿನೊಳಗಿಂದ ಮೂಲಸ್ಥಾನದಲ್ಲಿ ಮಿನುಗುವ ನಂದಾದೀಪಗಳು ಮಾತ್ರ ಕಾಣುವವು. ಈ ಗರ್ಭಗುಡಿ ತೀರ ಸಣ್ಣದು; ಪುರಾತನ ಕಾಲದ್ದು.

ಗಂಗಾಸಾನಿ ಮಂದಗತಿಯಿಂದ ಕಟಾಂಜನದ ಬಾಗಿಲ ವರೆಗೆ ಬಂದಳು. ಬರುವಾಗ ವಾಡಿಕೆಯಾಗಿ ಬಾರಿಸಿ ಬರುತ್ತಿದ್ದ ಗಂಟೆಯನ್ನು ಬಾರಿಸುವದು ಮರೆತೇ ಹೋಯಿತು. ಉತ್ಸವಮೂರ್ತಿಯನ್ನು ದಿಟ್ಟಿಸಿದಳು. ಇಂದಿನ ವರೆಗೆ ಆ ಮೂರ್ತಿಯ ಮುದ್ದಾದ ಬೆಳ್ಳಿಯ ಮುಖದ ಮೇಲಿನ ಮೆಲುನಗೆ ಆಕೆಯನ್ನು ಹುಚ್ಚಳನ್ನಾಗಿ ಮಾಡಿಬಿಡುತ್ತಿದ್ದಿತು; ಆಕೆಯಲ್ಲಿ ಭಕ್ತಿಸುಧೆಯ ಸೆಲೆಯನ್ನು ಒಡೆಸುತ್ತಿದ್ದಿತು. ಈ ದಿನ ಮಾತ್ರ ಆ ನಗೆ ಆಕೆಗೆ ಸೇರಲಿಲ್ಲ. ತನ್ನ ಸಾನ್ನಿಧ್ಯದಲ್ಲಿ ತನ್ನ ಭಕ್ತನೊಬ್ಬನ ಮುಗ್ಧ ಬಾಲಿಕೆಗೆ ಅಸಹ್ಯವಾದ ಅನಾಹುತ ಸಂಭವಿಸಿದ್ದರೂ ಶಂಭುಲಿಂಗ ಏನೂ

ತಿಳಿಯದವನಂತೆ ನಿಶ್ಚಿಂತೆಯಿಂದ ನಗುತ್ತ ಕುಳಿತಿರುವನಲ್ಲ ಎಂದು ಆಕೆ ಸ್ವಲ್ಪ ಅಸಮಾಧಾನಗೊಂಡಳು. ತಾನೇ ಹುಟ್ಟಿಸಿದ ತನ್ನ ಮಕ್ಕಳ ಕುತ್ತಿಗೆ ಹಿಚುಕಿ ಮೋಜಿನ ಆಟ ಆಡುವನಲ್ಲಾ ಎಂದು ಸ್ವಲ್ಪ ರೇಗಿದಳು. ಸೀರೆಯ ಸೆರಗಿನಿಂದ ಕಣ್ಣೊನ್ನೊರಸಿಕೊಂಡು, "ಸ್ವಲ್ಪ ಹೊರಗೆ ಬರತೀರಾ?" ಎಂದು ಮೃದುದನಿಯಿಂದ ಅಂದಳು.

ಒಳಗೆ ಗರ್ಭಗುಡಿಯಲ್ಲಿ ಅಭಿಷೇಕ ಮಾಡುತ್ತ ಕುಳಿತ ಶ್ರೀಕಂಠಶಾಸ್ತ್ರಿಗಳ ಹೃದಯದಲ್ಲಿ ಈ ದನಿ ವಿದ್ಯುತ್ತರಂಗವನ್ನೆಬ್ಬಿಸಿತು. ಅವರ ಬಾಯಿಂದ ಧಾರಾಳವಾಗಿ ಹೊರಹರಿಯುತ್ತಿದ್ದ ಮಂತ್ರದ ಪ್ರವಾಹ ಒಮ್ಮೆಲೇ ನಿಂತಿತು. ನೀರನ್ನು ತುಂಬಿದ ಶಂಖವನ್ನು ಶ್ರೀಕಂಠಶಾಸ್ತ್ರಿಗಳು ಕೆಳಗಿಟ್ಟು, ಉತ್ಸವ ಮೂರ್ತಿಯ ಬೆಳ್ಳಿಯ ಪ್ರಭಾವಳಿಯ ಬಳಿಯಿಂದ ಹೊರಗೆ ಬಂದರು.

ಶ್ರೀಕಂಠಶಾಸ್ತ್ರಿಗಳಿಗೆ ನಾಲ್ವತ್ತು ವರ್ಷಗಳ ಮೇಲೆ ವಯಸ್ಸು ಆಗಿರಬಹುದಾಗಿದ್ದರೂ ಅವರು ಹಾಗೆ ಕಾಣುತ್ತಿರಲಿಲ್ಲ. ಎತ್ತರವಾದ ಆಳು: ಬಣ್ಣ ತೀರ ಕಪ್ಪೂ ಅಲ್ಲ, ಕೆಂಪೂ ಅಲ್ಲ; ಮಾಂಸ ತುಂಬಿದ ಮೈ; ಆದರೂ ಹುರಿ ಕಟ್ಟಿನದಲ್ಲ. ಅಂಗೈ ಅಗಲದ ರೇಶಿಮೆಯಂಚಿನ ಮಡಿ ಧೋತರ ಉಟ್ಟಿದ್ದಾರೆ: ಎಡಗೈಯಲ್ಲಿ ಒದ್ದೆ ಪಂಚೆಯೊಂದನ್ನು ಮುದ್ದೆಮಾಡಿ ಹಿಡಿದಿದ್ದಾರೆ. ಅದಕ್ಕೆ ಅಲ್ಲಲ್ಲಿ ಕುಂಕುಮ ಕೂಡಿದ ಗಂಧ ತಗಲಿದೆ; ಬಲಗೈಯಲ್ಲಿ ಬೆಳ್ಳಿಯ ತೀರ್ಥ ಸವಟನ್ನೊಳಗೊಂಡ ಬೆಳ್ಳಿಯ ಥಾಲಿಯೊಂದಿದೆ; ಇಂದೇ ಕ್ಷೌರ ಮಾಡಿಸಿಕೊಂಡು ಎಣ್ಣೆ ಹೂಸಿ ಸ್ನಾನ ಮಾಡಿದ್ದರಾದ್ದರಿಂದ ತಲೆಯೂ ಮುಖವೂ ಮಿರಿಮಿರಿ ಮಿಂಚುತ್ತಿದೆ; ನೆತ್ತಿಯ ಮೇಲಿನ ಚಂಡಿಕೆಯ ಗಂಟು ಹಿಂಬದಿಗೆ ಜೋತುಬಿದ್ದಿದೆ; ಹಣೆಯ ಮೇಲೆ, ತೋಳು ಮುಂಗೈಗಳ ಮೇಲೆ, ಎದೆ ಪಕ್ಕೆಗಳ ಮೇಲೆ ವಿಭೂತಿ ಧಾಳವಾಗಿ ಕಾಣುತ್ತಿದೆ; ಕೊರಳಲ್ಲಿ ರುದ್ರಾಕ್ಷಿಯ ಮಾಲೆಯೂ, ಬಗಲಲ್ಲಿ ಯಜ್ಞೋಪವೀತವೂ ಎದ್ದು ಕಾಣುತ್ತಿವೆ.

"ಯಾಕೆ ಗಂಗಾ, ದಿನಾ ಘಂಟೇ ಬಾರಸತಿದ್ದಿ; ಇವತ್ತ ಸದ್ದಿಲ್ದ ಬಂದೀದಿ? ಬಂದು ಬಹಳೊತ್ತು ಆತೇನು?" ಥಾಲಿಯನ್ನು ಹಿಡಿದ ಕೈಯ ಮೇಲ್ಭಾಗದಿಂದ ತಮ್ಮ ಎಡದ ಗಲ್ಲವನ್ನು ತಿಕ್ಕುತ್ತ ಅವರೆಂದರು. ಆಕೆಯ ಮುಖದ ಮೇಲೆ ವಾಡಿಕೆಯಾಗಿ ಇರುತ್ತಿದ್ದ ನಗೆಯಾಗಲಿ, ಆ ನಗೆಯ ಪರಿಣಾಮವಾಗಿ ಅವಳ ಕಣ್ಣುಗಳಲ್ಲಿ ಇರುತ್ತಿದ್ದ ತೇಜವಾಗಲಿ ಇರಲಿಲ್ಲ.

ಅವರ ಆ ಪ್ರಶ್ನೆಗೆ ಉತ್ತರವಿಲ್ಲ. ಆಕೆಯೆಂದಳು: "ಸುಭಗಾನ ಗಂಡ ನಿನ್ನೆ ದವಾಖಾನ್ಯಾಗ ತೀರಿಕೊಂಡನಂತ, ನೋಡ್ರಿ ಪಾಪ!"

"ತೀರಿಕೊಂಡನು? ಶಂಕರಭಟ್ಟರು ಬಂದರೇನು?"

"ಹೂಂ, ಮುಂಜಾನೆ ಗಾಡಿಗೆ ಬಂದ್ರು. ಪಾಪ, ಏನು ದುರ್ದೈವರಿ ಆ ಕೂಸಿಂದು? ಒಂದು ಸಾರೇನಾದರೂ ಗಂಡನ ಮನೆಗೆ ಹೋಗಲಿಲ್ಲ; ಸುಖ ಕಾಣಲಿಲ್ಲ!"

ಈ ಸುದ್ದಿ ಶ್ರೀಕಂಠಶಾಸ್ತ್ರಿಗಳ ಮುಖದಲ್ಲಿ ಯಾವ ಬಗೆಯ ವಿಕಾರ ವನ್ನೂ ಹುಟ್ಟಿಸಲಿಲ್ಲ. ಅದನ್ನು ನೋಡಿ ಗಂಗಾಸಾನಿ ಹೆಚ್ಚು ತಳಮಳಿಸಿ ದಳು. ಜಗತ್ತೇ ನಿರ್ದಯದಿಂದ ತುಂಬಿದೆ ಎಂದಳು ಮನದಲ್ಲಿ.

"ಏನಾಗಿತ್ತಂತ?" ಅಂದರು ಅವರು.

"ಕರುಳ ಬ್ಯಾನಿ ಆಗಿತ್ತಂತ." ಎಂದಳಾಕೆ ಉದಾಸೀನಳಾಗಿ.

ಶ್ರೀಕಂಠಶಾಸ್ತ್ರಿಗಳಿಗೆ ಆಕೆಯ ಕಣ್ಣೀರ ಮುಖ ಸೇರಲಿಲ್ಲ. ಟೊಂಕ ದಲ್ಲಿ ಇರಿಸಿದ ಬೆಳ್ಳಿಯ ನಾಸೀಪುಡಿಯ ಡಬ್ಬಿಯಿಂದ ಒಂದು ಚಿಟಿಕಿ ನಸ್ಯ ವನ್ನು ಮೂಗಿನ ಹೊರಳಿಗಳಲ್ಲಿ ಇಟ್ಟುಕೊಂಡು, ಬೊಟ್ಟು ಕೊಡಹಿ, ಚೋಟಾಪಂಜೆಯನ್ನು ಹೊರಳಿಗಳಲ್ಲಿ ತುರುಕಿ ಮೂಗೊರಸಿಕೊಂಡರು. ಯಾವಾಗಲೂ ಆಕೆ ತನ್ನ ಪೂಜೆ ಮುಗಿಸಿಕೊಂಡು ದೇವಸ್ಥಾನದ ಹೊರಗೆ ಹೋಗಿ ಕಣ್ಮರೆಯಾಗುವ ವರೆಗೆ, ಜೋತುಕೊಂಡು ಅಲ್ಲಿಯೇ ನಿಲ್ಲುತ್ತಿದ್ದ ವರು, ಈ ದಿನ ಹೆಚ್ಚಿಗೆ ನಿಲ್ಲದೆ ಒಳಗೆ ಹೋಗಿಬಿಟ್ಟರು, ಆಕೆ ಮುಂದಿಟ್ಟ ಬಿಲ್ವಪತ್ರಿಯ ಬುಟ್ಟಿಯನ್ನು ತೆಗೆದುಕೊಂಡು.

ಗರ್ಭಗುಡಿಯಲ್ಲಿ ಅಭಿಷೇಕದ ಗಂಟೆ ಬಾರಿಸಿತು. ಗಂಗಾಸಾನಿ ದೂರ ದಿಂದ ದೇವರಿಗೆ ಅರಿಸಿಣ ಕುಂಕುಮ ಏರಿಸಿ, ಹೂಬತ್ತಿಯನ್ನು ಹಚ್ಚಿ ಅಕ್ಕೀ ಕಾಳು ಒಗೆದು, ಚವರಿಯನ್ನು ಹಾಕಿದಳು. ಬಾಗಿಲಲ್ಲಿಯ ಧೂಪಾರತಿ ಯೊಳಗಿಂದ ಅಂಗಾರವನ್ನು ಹಚ್ಚಿಕೊಂಡಳು.

೩

ಗಂಗಾಸಾನಿ ಅಚ್ಚ ಪಾತರದವರ ಮನೆತನದಾಕೆ. ಆ ಊರಿಗೆ ಇವರದೊಂದೇ ಮನೆ. ಹಿಂದಿನಿಂದಲೇ ಈ ಮನೆತನ ಆ ಊರಲ್ಲಿ ಸಾಗಿಬಂದಿದೆ. ಗಂಗಾಸಾನಿಯ ಅಜ್ಜಿಯ ತಲೆಯ ವರೆಗೆ ಈ ಮನೆತನಕ್ಕೆ ಶಂಭುಲಿಂಗನ ಬೆಟ್ಟವನ್ನು ಬಿಟ್ಟರೆ ಹೊರಗಿನ ಜಗತ್ತೇ ಗೊತ್ತಿರಲಿಲ್ಲ. ಶಂಭುಲಿಂಗ ಅವರ ಕುಲದೇವತೆಯಷ್ಟೇ ಅಲ್ಲದೆ, ದೇವಸ್ಥಾನದಿಂದ ಅವರಿಗೆ ಒಂದು ಹೊಲವೂ ಇದ್ದಿತು. ಸೋಮವಾರಕ್ಕೊಮ್ಮೆ ಅಷ್ಟಾವಧಾನದ ಕಾಲದಲ್ಲಿ ಆ ಮನೆತನದವರೊಬ್ಬರು ದೇವರ ಮುಂದೆ ನೃತ್ಯ ಮಾಡುತ್ತಿದ್ದರು. ಇದೊಂದು ತಮ್ಮ ಸೇವೆಯೆಂದೂ ಮರ್ಯಾದೆಯ ಬಾಬು ಎಂದೂ ಆ ಜನ ತಲೆತಲೆಯಿಂದಲೂ ಆ ಕೆಲಸ ಸಾಗಿಸಿಕೊಂಡು ಬಂದಿದ್ದರು.

ಗಂಗಾಸಾನಿಯ ತಾಯಿ ಭೀಮಾಸಾನಿ ತನ್ನ ಹರೆಯದಲ್ಲಿ ಒಳ್ಳೇ ಚೆಲುವೆಯೆಂದು ಹೆಸರು ಪಡೆದಿದ್ದಳು. ಗಾಯನದಲ್ಲಿಯೂ, ನೃತ್ಯಕಲೆಯಲ್ಲಿಯೂ ಆಜನ್ಮ ಪರಿಣಿತಳಿದ್ದಳು. ಗಂಗಾಸಾನಿಯ ಅಜ್ಜಿಯ ಮುಪ್ಪಿನ ಕಾಲದಲ್ಲಿ ಮನೆತನದ ಸ್ಥಿತಿ ಸ್ವಲ್ಪ ಕೆಟ್ಟದರಿಂದಲೂ ದೇವಸ್ಥಾನದ ಬಾಬಿನ ಹೊಲದಿಂವ ಅಷ್ಟೇನೂ ಉತ್ಪನ್ನ ಬಾರದೆ ಹೋದದ್ದರಿಂದಲೂ ಗಂಗಾಸಾನಿಯ ಅಜ್ಜಿ ಮಗಳನ್ನು ಕರೆದುಕೊಂಡು ಹೋಗಿ ಧಾರವಾಡದಲ್ಲಿಯೇ ನೆಲಸಿದಳು; ಸ್ವಲ್ಪ ದಿನಗಳಲ್ಲಿಯೇ ಮತ್ತೆ ಊರ್ಜಿತ ಸ್ಥಿತಿಗೆ ಬಂದರು. ಭೀಮಾಸಾನಿ ಧಾರವಾಡದಲ್ಲಿ ಒಂದು ಸುಂದರವಾದ ಮನೆಯನ್ನು ಕಟ್ಟಿಸಿಕೊಂಡಳು; ಮನೆತುಂಬ ಸಾಮಾನು ಮಾಡಿಸಿಕೊಂಡಳು; ಮೈತುಂಬ ಬಂಗಾರ ಮಾಡಿಕೊಂಡಳು; ಬಟ್ಟೆಬರೆಗಳ ಟ್ರಂಕುಗಳು ಜಂತಿಯ ವರೆಗೆ ಅಡಕಲಾಗಿ ನಿಂತವು. ದೇವಭೀರುವಾದುದರಿಂದ ವರುಷಕ್ಕೆ ಒಮ್ಮೆಯೋ ಎರಡು ಸಲವೋ ಉತ್ಸವದ ಸಮಯದಲ್ಲಿ ಶಂಭುಲಿಂಗನ ಬೆಟ್ಟಕ್ಕೆ ಬಂದು, ಸೇವೆ ಸಲ್ಲಿಸಿ ಹೋಗುತ್ತಿದ್ದಳು.

ಭೀಮಾಸಾನಿ ವಿಷಮಜ್ವರದಿಂದ ತೀರಿಕೊಂಡುದು ಗಂಗಾಸಾನಿ ಹದಿನಾರು ವರುಷದ ಹುಡುಗೆಯಿದ್ದಾಗ. ಸಾಯುವ ಮುಂದೆ ಭೀಮಾಸಾನಿಗೆ ಜೀವನದಲ್ಲಿ ಯಾವ ಬಗೆಯ ತಾಪತ್ರಯವೂ ಇಲ್ಲದಿದ್ದರೂ, ಗಂಗಾನ

ಬಗೆಗೆ ಮಾತ್ರ ಆಕೆ ಆಗಾಗ ವ್ಯಸನದಲ್ಲಿ ಬೀಳುತ್ತಿದ್ದಳು. ಹುಡುಗೆ ಚುರುಕು ಬುದ್ಧಿಯುವಳೇನೋ ಹೌದು. ಓದು-ಬರೆಹದಲ್ಲಿಯಾಗಲಿ, ನೃತ್ಯ-ಗಾಯನ ಗಳಲ್ಲಿಯಾಗಲಿ ಅವಳೇನೂ ಹಿಂದೆ ಬಿದ್ದಿರಲಿಲ್ಲ. ಆ ಹುಡುಗೆಯ ಸ್ವಭಾವ ದಲ್ಲಿ ಎದ್ದು ಕಾಣುತ್ತಿದ್ದ ಸರಳತೆ-ಮುಗ್ಧತೆಗಳು ಭೀಮಾಸಾನಿಯಲ್ಲಿ ಮಗಳ ಬಗ್ಗೆ ಅಭಿಮಾನವನ್ನು ಉಕ್ಕಿಸುತ್ತಿದ್ದವಾದರೂ ಎಷ್ಟೋ ಸಲ ಆಕೆಯಲ್ಲಿ ಭೀತಿಯನ್ನು ಉಂಟುಮಾಡುತ್ತಿದ್ದವು. ಅವಳು ಹರೆಯದ ಹೊಸತಿಲದಲ್ಲಿ ಕಾಲಿಟ್ಟ ಮೇಲಂತೂ ಮಗಳ ಭವಿಷ್ಯತ್ತಿಗೆ ಯಾವ ರೂಪ ಕೊಡಬೇಕೆಂಬ ಪ್ರಶ್ನೆ ಆಕೆಯ ತಲೆ ತಿನ್ನಹತ್ತಿದ್ದಿತು. ಆಕೆಯ ಜೀವನ ಸುಗಮವಾಗಿ ಸಾಗುವಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯವೆಂಬುದು ಭೀಮಾಸಾನಿಗೆ ಹೆಜ್ಜೆಹೆಜ್ಜೆಗೆ ನೆನಪಿಗೆ ಬರುತ್ತಿದ್ದಿತು. ಯಾರಿಗಾದರೂ ಆಕೆಯನ್ನು ಮದುವೆ ಮಾಡಿಕೊಟ್ಟು, ಗರತಿಯ ಜೀವನದಲ್ಲಿ ತೊಡಗಿಸಬೇಕೆ? ಅಥವಾ ಮದು ವೆಯ ಬಂಧನದಲ್ಲಿ ಸಿಲುಕಿಸದೇ, ತನ್ನ ಮನೆತನದಲ್ಲಿ ಪರಂಪರೆಯಿಂದ ನಡೆದು ಬಂದ ವೇಶ್ಯಾವೃತ್ತಿಯಲ್ಲಿ ತೊಡಗಿಸಬೇಕೆ? ಸೂಳೆಯ ಸಂಸಾರದ ಸ್ವಾತಂತ್ರ್ಯ, ದ್ರವ್ಯ, ದುಂದುಗಾರಿಕೆ, ನಿಶ್ಚಿಂತೆ ಮೊದಲಾದವುಗಳ ಮೋಹ ವಲ್ಲಿಯೇ ಬೆಳೆದು ಸಂತೃಪ್ತಿ ಹೊಂದಿದ ಅವಳ ದೃಷ್ಟಿಯಲ್ಲಿ ವೇಶ್ಯಾವೃತ್ತಿಯು ಸ್ವಚ್ಛಂದವೃತ್ತಿಯು ಗಂಗೆಯ ಪ್ರವಾಹದಂತೆ; ಗರತಿಯ ಸಂಸಾರ ಕಾಲು ವೆಯ ತೊಡಕಿನಲ್ಲಿ ಕಷ್ಟನಷ್ಟದಿಂದ ಹರಿಯುವ ನೀರಿನ ಪ್ರವಾಹದಂತೆ. ಅಂತೆಯೇ ಆಕೆ ಮಗಳನ್ನು ಯಾರಿಗಾದರೂ ಲಗ್ನಮಾಡಿ ಕೊಡಬೇಕೆಂಬ ವಿಚಾರದತ್ತ ಮೂಗು ಮುರಿಯುತ್ತಿದ್ದಳು. ಆದರೂ, ಗಂಗಾ ವೇಶ್ಯಾ ವೃತ್ತಿಯಲ್ಲಿ ತೊಡಗಿದರೆ, ಅದೆಷ್ಟರಮಟ್ಟಿಗೆ ಸುಖಿಯಾಗುವಳೋ ಎಂದೂ ಅವಳಿಗೆ ಅನುಮಾನ. ಸ್ವಭಾವತಃ ಆ ಹುಡುಗೆ ಆ ದಿಸೆಯಲ್ಲಿ ಜೀವನ ಸಾಗಿಸಲು ಅಸಮರ್ಥಳು ಎಂಬುದು ಆಕೆಗೆ ಕ್ಷಣಕ್ಷಣಕ್ಕೂ ಅನಿಸುತ್ತಿದ್ದಿತು. ಯುವಕರ ಮನಸೆಳೆಯಲು ಅತ್ಯವಶ್ಯಕವಾದ ಕುಟಿಲತೆ ಚಾಪಲ್ಯಗಳ ಅಭಾವ ಮಗಳ ಸ್ವಭಾವದಲ್ಲಿಯ ದೊಡ್ಡ ಕೊರತೆ ಎಂದು ಆಕೆ ಚಿಂತಿಸುತ್ತಿದ್ದಳು. ಗಂಗೆಗೆ ತಿಳುವಳಿಕೆ ಬಂದಂದಿನಿಂದ ತಾಯಿಯ ಬಗೆಗೆ, ತಾಯಿಯ ವೃತ್ತಿಯ ಬಗೆಗೆ ಆಕೆ ಮೌನದಿಂದಲೇ ಗುಪ್ತವಾಗಿಯೇ ತೋರುತ್ತಿದ್ದ ಜುಗುಪ್ಸೆಯ ಸುಳಿವೂ ಭೀಮಾಸಾನಿಗೆ ಹತ್ತದೆ ಇರಲಿಲ್ಲ. ನಾನಾಬಗೆಯ ಜನರು ಏನೂ

ಕೆಲಸವಿಲ್ಲದೆ ತಂಡತಂಡವಾಗಿ ಮನೆಗೆ ಬರುತ್ತಿದ್ದುದು, ಅವರು ಬಂದಾಗೆಲ್ಲ ನಡೆಯುವ ಕಪ್ಪು-ಬಸಿಗಳ ತಾಂಡವನೃತ್ಯ, ಸರಿರಾತ್ರಿಯ ವರೆಗೆ ಮನೆ ತುಂಬ ಝುಗಝುಗಿಸುವ ದೀಪ, ಸುಗಂಧದ್ರವ್ಯಗಳ ಸೂರೆ, ಅವರೊಡನೆ ತಾಯಿಯ ನಗೆಯಾಟ, ಬೆಳಗಾಗುವದರಲ್ಲಿಯೇ ತಾಂಬೂಲರಸದಿಂದ ತುಂಬಿ ಹರಿಯುವ ಪೀಕದಾನಿ—ಇವೆಲ್ಲವೂ ಎಳೆವಯಸ್ಸಿನ ಗಂಗೆಯ ಮನವನ್ನು ಮುದುಡಿಸಿದ್ದವು ಎಂಬುದನ್ನು ಆಕೆ ಎಂದೋ ಕಂಡುಹಿಡಿದಿದ್ದಳು. ಜನರು ಬಂದಾಗೆಲ್ಲ ಅಸಹ್ಯಪಟ್ಟುಕೊಂಡು ಆಕೆ ಅಟ್ಟದ ಮೇಲಿನ ಹಿಂದಿನ ಕೋಣೆ ಯಲ್ಲಿ ಕೂಡುತ್ತಿದ್ದುದೂ ಗೊತ್ತಿತ್ತು. ಆದರೂ ಹುಡುಗಿಗೆ ಅನುಭವ ಸಾಲದ್ದಕ್ಕೆ ಹೀಗೆ ಮಾಡುವಳೆಂದೂ, ಆಕೆಯ ಜೀವನ ಸುಖಮಯವಾಗ ಬೇಕಾದರೆ, ತಾನಿಟ್ಟ ಹೆಜ್ಜೆಯನ್ನೇ ಅವಳೂ ಅನುಸರಿಸುವದೇ ಯೋಗ್ಯ ವೆಂದೂ ಭೀಮಾಸಾನಿ ಕಡೆಗೊಮ್ಮೆ ನಿಶ್ಚಯ ಮಾಡಿದಳು. ಇಂದು ನಾಳೆ ಜುಲುಮೆಯಿಂದಾದರೂ ಮಗಳ ಕಾಲಿಗೆ 'ಗೆಜ್ಜೀ ಕಟ್ಟುವ' ಶಾಸ್ತ್ರವನ್ನು ಮಾಡಬೇಕೆನ್ನುತ್ತಿರುವಾಗಲೇ ಹಿಂದೆ ಹೇಳಿದಂತೆ ಭೀಮಾಸಾನಿ ಆಕಸ್ಮಿಕ ವಾಗಿ ತೀರಿಕೊಂಡಳು.

ಮನೆಯಲ್ಲಿ ಸಂಭವಿಸಿದ ಈ ಅನಾಹುತದಿಂದ ಗಂಗೆಯ ಅಜ್ಜಿ ದಿಙ್ಮೂಢಳಾದಳು. ಎರಡು ವರುಷ ಅಜ್ಜಿ-ಮೊಮ್ಮಗಳು ಇಬ್ಬರೂ ದುಃಖದಲ್ಲಿ ಕಳೆದರು.

ಹದಿನೆಂಟು ವರುಷದವಳಾಗುವ ವರೆಗೆ ಗಂಗೆಗೆ ತನ್ನ ಕುಲದೇವತೆ— ಶಂಭುಲಿಂಗನ ಬೆಟ್ಟಕ್ಕೆ ಹೋಗುವ ಪ್ರಸಂಗವೇ ಬಂದಿರಲಿಲ್ಲ. ತಾಯಿಯ ಮರಣದ ನಂತರ— ಎರಡು ವರುಷದ ತರುವಾಯ— ಗಂಗೆಯ ಅಜ್ಜಿ ಮೊಮ್ಮಗಳೊಡನೆ ಶಂಭುಲಿಂಗನ ಬೆಟ್ಟಕ್ಕೆ ಬಂದಳು.

ಆ ದಿನ ಶಿವರಾತ್ರಿ. ದೊಡ್ಡ ಉತ್ಸವಗಳಲ್ಲೊಂದು. ಭಕ್ತಜನರು ತಂಡತಂಡವಾಗಿ, ನೂರುಗಟ್ಟಲೆ, ಸಾವಿರಗಟ್ಟಲೆ ಬೆಟ್ಟವನ್ನು ನಾಲ್ಕೂ ನಿಟ್ಟಿ ನಿಂದ ಏರುತ್ತಿದ್ದರು. ಉಗಿಬಂಡಿಯಿಂದ ಕೆಲವರು, ಚಕ್ಕಡಿಯಿಂದ ಕೆಲ ವರು, ಕಾಲುನಡಿಗೆಯಿಂದ ಸಾವಿರಾರು ಜನರು, 'ಹರಹರ ಮಹಾದೇವ' ಎಂದು ಒದರುತ್ತ ಶಂಭುಲಿಂಗನಿಗೆ ಸೇವೆ ಸಲ್ಲಿಸಲು ಸಾಗಿದ್ದರು.

ಗಂಗೆ ಈ ಬಗೆಯ ಜನದಟ್ಟಣೆಯನ್ನು ಇಂದಿನ ವರೆಗೆ ನೋಡಿರಲಿಲ್ಲ.

ಆ ಜನದಟ್ಟಣೆ, ಆ ದೇವನಾಮದ ಉದ್ಘೋಷಣೆ, ಆ ಸುಂದರವಾದ ಮಾವಿನ ತೋಪು, ತಿಳಿ ಜಲ, ಶಿಬಿರ ಶಿಬಿರದಲ್ಲಿ ಅಭಿಷೇಕಸೇವೆಯನ್ನು ಸ್ವೀಕರಿಸುತ್ತಿದ್ದ ಮುದ್ದಾದ ಉತ್ಸವಮೂರ್ತಿ, ಆ ಪ್ರಕೃತಿಸೌಂದರ್ಯ— ಎಲ್ಲವೂ ತಿಳಿಯಾದ ಎಳೆಯದಾದ ಗಂಗೆಯ ಮನದ ಮೇಲೆ ಹಿಂದೆಂದೂ ಅನುಭವಿಸದ ಪರಿಣಾಮವನ್ನು ಮಾಡಿದವು. ಭಕ್ತಿರಸವು ಆಕೆಯ ಅಂಗಾಂಗ ದಲ್ಲಿಯೂ ಹೊರಸೂಸಹತ್ತಿತು. ತನಗೆ ಇಲ್ಲಿಯ ವರೆಗೆ ಅಪರಿಚಿತವಾಗಿ ದ್ದರೂ, ತನ್ನ ಪೂರ್ವಜರ ಊರು ಇಷ್ಟು ಸುಂದರವಾಗಿದೆಯಲ್ಲ ಎಂದು ಆನಂದಪಟ್ಟಳು; ತನ್ನ ಕುಲದೇವತೆಯ ವಾಸಸ್ಥಾನ ಇಷ್ಟು ದಿವ್ಯವಾಗಿದೆ ಯಲ್ಲ, ರಮ್ಯವಾಗಿದೆಯಲ್ಲ ಎಂದು ಅಭಿಮಾನಪಟ್ಟಳು; ಇಂಥ ಸುಂದರ ವಾದ, ರಮ್ಯವಾದ, ನಿರ್ಮಲ ವಾತಾವರಣದ ದೇವಸಾನ್ನಿಧ್ಯವನ್ನು ಬಿಟ್ಟು ತನ್ನ ಅಜ್ಜಿ-ತಾಯಂದಿರು ಧಾರವಾಡಕ್ಕೆ ಏಕೆ ಹೋದರು ಎಂಬುದು ಆಕೆಗೆ ತಿಳಿಯಲಿಲ್ಲ.

*  *  *  *

ಶ್ರೀಕಂಠಶಾಸ್ತ್ರಿಗಳನ್ನು ಆಕೆ ಮೊದಲ ಸಲ ಕಂಡದ್ದು— ಅಥವಾ ಅವರು ಆಕೆಯನ್ನು ಮೊದಲು ಸಲ ಕಂಡದ್ದು— ಈ ದಿನವೇ.

ಗಂಗೆಯ ಅಜ್ಜಿ ಮೊಮ್ಮಗಳೊಡನೆ ಶಂಭುಲಿಂಗನಿಗೆ ಹಣ್ಣು-ಕಾಯಿ ಮಾಡಿಸಿ, ಎಲೆ-ಚಂಚಿಯ ಸೇವೆ ಸಲ್ಲಿಸಿ, ದೇವರ ಕೆಲಸ ಮುಗಿದ ಮೇಲೆ ಗುಡಿಯ ಮುಂದಿನ ದೀಪಮಾಲೆಯ ಕಂಬದತ್ತ ಮೊಮ್ಮಗಳನ್ನು ಕರೆದು ತಂದಳು.

ಗುಡಿ ಮತ್ತು ಕಂಬದ ಕಟ್ಟೆಯ ನಡುವಿನ ಭಾಗದಲ್ಲಿ ವಿಸ್ತಾರವಾದ ಕಲ್ಲಿನ ಹಾಸಿಗೆಯ ಮೇಲೆ ಭಕ್ತಜನ ನೆರೆದಿದ್ದಿತು. ಕಟ್ಟೆಯ ತುದಿಗೆ ಶ್ರೀಕಂಠಶಾಸ್ತ್ರಿಗಳು ಒಂದು ಕೃಷ್ಣಾಜಿನವನ್ನು ಹಾಸಿಕೊಂಡು ಭವ್ಯವಾಗಿ ಕುಳಿತುಕೊಂಡಿದ್ದರು; ಕಾಶ್ಮೀರದ ಕೆಂಪು ಶಾಲನ್ನು ಹೊದ್ದುಕೊಂಡಿ ದ್ದರು; ಹಣೆಯ ತುಂಬ ಢಾಳವಾಗಿ ಎರಡು ಬಟ್ಟಿನ ಗಂಧವನ್ನು ಹಚ್ಚಿ ಕೊಂಡಿದ್ದರು; ತಲೆಯ ಹಿಂದೆ ಜೋತಾಡುವ ಚಂಡಿಕೆಯ ಗಂಟಿನಲ್ಲೊಂದು ಬಿಲ್ವಪತ್ರಿಯ ದಲ ನೇತಾಡುತ್ತಿತ್ತು; ಅವರ ಬದಿಯಲ್ಲಿಯೇ ಭಾಂಡಾರ ತುಂಬಿದ ಬೆಳ್ಳಿಯ ಬಟ್ಟಲವಿತ್ತು; ಮುಂದೆ ‘ ವಜ್ರದುಂಡಿ ’ಯ ದುಂಡನ್ನ

ಕಲ್ಲೊಂದು ಇದ್ದಿತು; ಆ ಬದಿಗೆ ಜಲ್ಲಿಯೊಂದರಲ್ಲಿ ಟೆಂಗಿನಕಾಯಿಯ ಹೊಳಿಕೆಗಳು, ತುದಿ ಮುರಿದ ಬಾಳಿಯ ಹಣ್ಣುಗಳು, ಎಲೆಯಡಿಕೆಗಳು, ಊದಿನಕಡ್ಡಿಗಳು ತುಂಬಿದ್ದವು.

ಭಕ್ತಜನರಲ್ಲಿ ಈ ದುಂಡನ್ನ ಕಲ್ಲಿನ ಬಗ್ಗೆ ವಿಶ್ವಾಸ ಬಹಳ; ಅದಕ್ಕೆ 'ದೇವರ ಕಲ್ಲು' ಎಂದು ಹೆಸರು. ಈ ಕಲ್ಲು ಭಕ್ತಜನರ ಸಂದಿಗ್ಧ ಪ್ರಶ್ನೆಗಳನ್ನು, ಅವರ ಬುದ್ಧಿಗೆ ನೀಗಲಾರದ ಒಗಟಗಳನ್ನು ಬಿಡಿಸುತ್ತದೆ. ಭಕ್ತರು ಅದರ ಪೂಜೆ ಮಾಡಿ, ತಮ್ಮ ಮನಸ್ಸಿನಲ್ಲಿಯ ಪ್ರಶ್ನೆಯನ್ನು ಮೌನವಾಗಿಯೇ ಕಲ್ಲಿಗೆ ವಿಶದಪಡಿಸಿ 'ಕೆಲಸ ಆಗುವಂತಿದ್ದರೆ ಹಗುರಾಗಿ ಬಾ, ಇಲ್ಲವಾದರೆ ಒಜ್ಜೆಯಾಗಿ ಬಾ' ಎಂದು ಬೇಡಿಕೊಳ್ಳುವರು. ಪೂಜಾರಿಯು ತನ್ನ ಎರಡೂ ಕೈಗಳಿಂದ ಆ ದುಂಡಿಯನ್ನು ಎತ್ತುವನು; 'ಹಗುರು', 'ಒಜ್ಜೆ' ಎಂಬ ಶಬ್ದಗಳ ಮುಖಾಂತರ ತೀರ್ಮಾನ ಕೊಡುವದು.

ಶ್ರೀಕಂಠಶಾಸ್ತ್ರಿಗಳಿಗೆ ಆ ಮುದಿಕೆಯು ಗೊತ್ತು ಇದ್ದಿತು. ಆಕೆಯನ್ನು ನೋಡಿದೊಡನೆ, ಅವರೆಂದರು: "ನೀನು ಯಾವಾಗ ಬಂದೆವ್ವ?"

ಆಕೆಯೆಂದಳು: "ಇಂದs ಮುಂಜಾನೆ ಬಂದ್ನಿರಿ. ಭಾಳ ದಿನ ಆಗಿತ್ತು, ಸ್ವಾಮಿಯ ದರ್ಶನಾನ ಇದ್ದಿಲ್ಲ, ಅದಕ್ಕ ಬಿಟ್ಟದ್ದು ಬಿಟ್ಟು ಬೆಟ್ಟಕ್ಕ ಹೋಗಿ ಬರೋಣ ಅಂತ ಬಂದೆ."

ಆಕೆ ಹೀಗೆನ್ನುತ್ತಿದ್ದಾಗ, ಶ್ರೀಕಂಠಶಾಸ್ತ್ರಿಗಳ ಮನಸ್ಸೂ ಕಣ್ಣುಗಳೂ ಆಕೆಯ ಪಕ್ಕದಲ್ಲಿಯೇ ನಿಂತಿದ್ದ ಗಂಗೆಯ ಕಡೆಗೆ ಹೋಗಿದ್ದವು. ಗಂಗೆ ಸ್ವಲ್ಪ ನಾಚಿದಳು; ಸೀರೆಯ ಸೆರಗು ಸರಿಪಡಿಸಿಕೊಂಡಳು. ಅವರ ವೇಷ-ಭೂಷಣ, ಅವರ ಸ್ಥಾನ-ಮಾನ, ಅವರ ಬಗ್ಗೆ ಆಕೆಯಲ್ಲಿ ಆದರವನ್ನು ಹುಟ್ಟಿಸಿದವು. ಇವರೊಬ್ಬರು ದೇವರ ಸಾನ್ನಿಧ್ಯದಲ್ಲಿರುವ, ದೇವರ ಪ್ರೀತಿಗೆ ಪಾತ್ರರಾದ ಪೂಜ್ಯ ವ್ಯಕ್ತಿ ಎಂದು ಭಾವಿಸಿದಳು.

ಶ್ರೀಕಂಠಶಾಸ್ತ್ರಿಗಳ ಚಿತ್ತ ಮೊಮ್ಮಗಳ ಕಡೆಗೆ ಹೋದದ್ದನ್ನು ನೋಡಿ, ಆ ಮುದಿಕೆ ಅಂದಳು: "ಈಕಿ ನನ್ನ ಮೊಮ್ಮಗಳು; ಭೀಮಾನ ಮಗಳು."

"ಭೀಮಾಸಾನಿ ಯಾಕ ಬಂದಿಲ್ಲ?"

"ಆಕಿ ತೀರಿಕೊಂಡು ಎರಡು ವರ್ಷ ಆಗ್ಲಿಕ್ಕೆ ಬಂತಲ್ರಿ!" ಎಂದು ಕಣ್ಣೀರು ತಂದಳು ಮುದಿಕೆ.

"ಹೀಂಗೇನು ? ನನಗೆ ಗೊತ್ತಿರಲಿಲ್ಲ, ಬಿಡು" ಎಂದರು ಅವರು. ಹೀಗೆನ್ನುವಾಗ, ಅವರ ಮಾತಿನಲ್ಲಿಯಾಗಲಿ, ಮೊಗದಲ್ಲಿಯಾಗಲಿ ವಿಸ್ಮಯ-ಖೇದಗಳ ಸುಳಿವು ಸಹ ಇರಲಿಲ್ಲ. ಕಣ್ಣಳನ್ನರಳಿಸಿ ಆಗಾಗ ಗಂಗೆಯನ್ನು ಅಡಿಯಿಂದ ಮುಡಿಯ ವರೆಗೆ ನೋಡುತ್ತಿದ್ದರು ಮಾತ್ರ.

ಕೇಳುವದನ್ನು ಕೇಳಿಯಾದ ಮೇಲೆ ಮುದಿಕೆ ಎಂದಳು: "ಧಾರವಾಡದ ಕಡೆಗೆ ಬಂದರೆ, ಮನಿಗೆ ಬಂದು ಹೋಗ್ರಿ ಶಾಸ್ತ್ರಿಗಳೆ!"

"ಓಹೋ, ಬರತೇನವ್ವ!" ಎಂದಂದು ಗಂಗೆಯ ಕಡೆಗೊಮ್ಮೆ ನೋಡಿದರು. ಗಂಗೆ ವಿನಯದಿಂದ, ಭಕ್ತಿಯಿಂದ, ನಸುನಕ್ಕಳು.

ಗಂಗೆಯ ಮೊಗದಲ್ಲಿ ಮಿನುಗಿದ ನಗೆ ತಮಗೆ ಧಾರವಾಡಕ್ಕೆ ಹೋಗಲು ಔತಣ ಎಂದು ಅವರು ಅರ್ಥ ಮಾಡಿಕೊಂಡರು.

* * * *

ಗಂಗಾಸಾನಿಯು ಶ್ರೀಕಂಠಶಾಸ್ತ್ರಿಗಳನ್ನು ಮೊದಲ ಸಲ ನೋಡಿದಂದಿನಿಂದ ಇಂದಿನ ವರೆಗೆ, ಅಂದರೆ ಸುಭಗೆಯ ದುರ್ಭಾಗ್ಯದ ಸಮಾಚಾರನನ್ನು ಆಕೆ ಅವರಿಗೆ ಶಂಭುಲಿಂಗನ ಗುಡಿಯಲ್ಲಿ ಹೇಳಿದ ದಿನದ ವರೆಗೆ—ಒಂಬತ್ತು ಹತ್ತು, ವರ್ಷಗಳ ಅಲ್ಪಾವಧಿಯಲ್ಲಿ— ಅವಳ ಜೀವನ ಯಾವ ಬಗೆಯಿಂದ ರೂಪುಗೊಂಡಿತು ಎಂಬುದು ನೋಡುವಂತಿದೆ:

ಅವಳ ಅಜ್ಜಿಗೆ ಅವಳು ಪರದೇಶಿಯಾದಂದಿನಿಂದ ಆದಷ್ಟು ಬೇಗ ಹುಡುಗೆಯನ್ನು ಯಾವದಾದರೂ ಒಂದು ದಂಡೆಗೆ ಹಚ್ಚಬೇಕೆಂದು ಹಗಲಿರುಳೂ ಅನಿಸುತ್ತಿದ್ದಿತು. ಅವಳನ್ನು ವೇಶ್ಯಾವೃತ್ತಿಗೇ ಹಚ್ಚಬೇಕೆಂದಿದ್ದ ಭೀಮಾಸಾನಿಯ ಮತವನ್ನು ತಾನೂ ಅನುಮೋದಿಸುತ್ತಿದ್ದಳಾದರೂ, ಇತ್ತೀಚೆಗೆ ಗಂಗೆಯು ತನ್ನ ಸಮಾಜದ ಹೆಂಗಸರ ಹೀನವೃತ್ತಿಯನ್ನು ಬಹಿರಂಗವಾಗಿ ಟೀಕಿಸಿದ್ದುದನ್ನು ನೆನೆದು, ತನ್ನ ವಿಚಾರವನ್ನು ಆಕೆಯ ಮುಂದೆ ಇಡಲು ಅಂಜುತ್ತಿದ್ದಳು. ಮನಸ್ಸು ಇತ್ತಂಡವಾಗಿ, ಏನೂ ತೋಚದೆ, ದೇವರ ಹೇಳಿಕೆಯಾದರೂ ಏನಿರುವದೆಂಬುದನ್ನು ತಿಳಿದುಕೊಳ್ಳುವದಕ್ಕಾಗಿಯೋ ಆ ಸಲ ಆಕೆ ಮೊಮ್ಮಗಳೊಡನೆ ಬೆಟ್ಟಕ್ಕೆ ಹೋಗಿದ್ದಳು. ದೇವರ ಕಲ್ಲನ್ನು ಎತ್ತಿಸಿ ನೋಡಿದಾಗ ಮೊಮ್ಮಗಳನ್ನು ವೇಶ್ಯಾವೃತ್ತಿಗೆ ಹಚ್ಚಬೇಕೆಂದು ಉತ್ತರ ಬಂದುದನ್ನು ಅವಳು ತಿರುಗಿ ಧಾರವಾಡಕ್ಕೆ ಬಂದಾಗ

ಮೊಮ್ಮಗಳೆದುರಿಗೆ ಹೇಳಿದಾಗ ಗಂಗೆ ಅಜ್ಜಿಯ ಮಾತನ್ನು ನಂಬಲಿಲ್ಲ: ಸಿಡಿಮಿಡಿಗೊಂಡಳು; ಅತ್ತು ಕರೆದಳು. ಕಡೆಗೆ ತನ್ನ ಸುಖ-ದುಃಖದ ಸಲು ವಾಗಿ ಅವಳೇನೂ ಚಿಂತಿಸುವ ಕಾರಣವಿಲ್ಲವೆಂದೂ, ತನ್ನ ಹೊಣೆಯನ್ನು ತನಗೇ ಬಿಟ್ಟುಗೊಟ್ಟು ನಿಶ್ಚಿಂತೆಯಿಂದ ಇರಬೇಕೆಂದೂ ಹೇಳಿದಳು ಮುದಿ ಕೆಗೆ. ಮುದಿಕೆ ಮುಂದೆ ಆ ಮಾತನ್ನೇ ಎತ್ತಲಿಲ್ಲ. ಆದರೆ ಗಂಗೆಯ ಮನಸ್ಸು ಮಾತ್ರ ದಿನದಿನವೂ ಚಂಚಲವಾಗಹತ್ತಿತು. ಅತ್ತಿತ್ತ ಹರಿಯ ಹತ್ತಿತು. ತಾಯಿ ತೀರಿದಂದಿನಿಂದ ಮನೆ ಭಣಭಣವಾಯಿತು. ಓದು ಮುಗಿದವ್ವರಿಂದ ಮನಸ್ಸು ಭಣಭಣವಾಯಿತು. ತಾರುಣ್ಯದ ಪರಿಪಕ್ವತೆಯ ಮೂಲಕ ಏಕಾಕಿನಿಯಾಗಿರುವದು ನಿರಸವೆನಿಸಹತ್ತಿತು. ತನ್ನ ಸಮಾಜದ ಪರಿಚಿತ ಅಪರಿಚಿತ ತರುಣರ ಚಿತ್ರ ಅವಳ ಮನಸ್ಸಿನ ಕಣ್ಣು ಮುಂದೆ ಹಾಯ ಹತ್ತಿದವು. ಮದುವೆಯ ವಿಚಾರದ ಮಧ್ಯಮಧ್ಯೆ ಮನೆತನದ ಪರಂಪರೆ ಯನ್ನು ಮುಂದುವರಿಸುವ ವಿಚಾರವೂ ತಲೆದೋರದೆ ಇರಲಿಲ್ಲ. ಆದರೆ, ಆ ವಿಚಾರ, ಆ ಬಗೆಯ ಬಾಳುವೆ ಹೇಯುವೆನಿಸುವದೂ ತಪ್ಪಲಿಲ್ಲ.

* * * *

ಗಂಗೆಯನ್ನು ಕಂಡಂದಿನಿಂದ, ಹಿಂದೆ ಎಂದೋ ನಾಲ್ಕಾರು ಸಲವೇ ನೋಡಿದ ಧಾರವಾಡದ ಬಗ್ಗೆ, ಶ್ರೀಕಂಠಶಾಸ್ತ್ರಿಗಳ ಉತ್ಸುಕತೆ ಹೆಚ್ಚಾಗ ಹತ್ತಿತು. ತಮ್ಮ ಮನೆತನದ ಸಂಬಂಧ ಅಥವಾ ದೇವಸ್ಥಾನದ ಸಂಬಂಧ ಅಥವಾ ತಮ್ಮ ಸಂಚಾರದ ಸಂಬಂಧ ಅವರ ಕೆಲಸ ಏಕಾಏಕಿ ಧಾರವಾಡ ವಲ್ಲಿ ಹೆಚ್ಚಹತ್ತಿದವು! ವಾರದಲ್ಲಿ ಒಂದು ಸಲವಾದರೂ ಧಾರವಾಡಕ್ಕೆ ಹೋಗಿಬರಹತ್ತಿದರು. ಕಷ್ಟಪಟ್ಟು ಗಂಗೆಯ ಮನೆಯನ್ನೂ ಗೊತ್ತು ಹಚ್ಚಿ ದರು. ಶಂಭುಲಿಂಗನ ಬಗ್ಗೆ ಗಂಗೆಯಲ್ಲಿದ್ದ ಭಕ್ತಿ, ಶಂಭುಲಿಂಗನ ಅರ್ಚ ಕರು ಎಂದು ಶ್ರೀಕಂಠಶಾಸ್ತ್ರಿಗಳಲ್ಲಿದ್ದ ಅವಳ ಪೂಜ್ಯಬುದ್ಧಿ, ಆಕೆಯ ಸ್ವಭಾ ವದ ಒಂದು ಮಹತ್ವದ ಅಂಶವಾದ ವಿನಯ—ಇವುಗಳ ಮೂಲಕ ಗಂಗೆಯ ಮನೆಯಲ್ಲಿ ಅವರಿಗೆ ಸಾಕಷ್ಟು ಆತಿಥ್ಯ ದೊರೆಯಿತು. ಪರಿಚಯವನ್ನು ಬೆಳೆಯಿಸಿಕೊಳ್ಳುವ ಕಲೆಯನ್ನು ಚೆನ್ನಾಗಿ ಸಾಧಿಸಿಕೊಂಡಿದ್ದ ಅವರಿಗೆ ಭಾವನಾಪ್ರಧಾನಳಾದ ಅವಳನ್ನು ತಮ್ಮ ವರ್ಚಸ್ಸಿನ ಅಳವಿನಲ್ಲಿ ತಂದು ಕೊಳ್ಳಲೂ ಅವರಿಗೆ ತೊಂದರೆಯಾಗಲಿಲ್ಲ. ಕೆಲವೇ ದಿನಗಳಲ್ಲಿ ಶ್ರೀಕಂಠ

ಶಾಸ್ತ್ರಿಗಳೆಂದರೆ ಶಂಭುಲಿಂಗನ ಜೀವಂತ ಮೂರ್ತಿ ಎನ್ನುವ ಮಟ್ಟಿಗೆ ಅವಳು ಅವರ ವಾಗ್ಝರಿ, ವೇಷ-ಭೂಷಣ, ವೈದಿಕ ಆಡಂಬರ, ಮುಂತಾದವುಗಳಿಗೆ ಮನಸೋತಳು. ದಿನಗಳೆದಂತೆ, ಅವರ ಇವಳ ಬಳಕೆ ಬೆಳೆದಂತೆ, ಶ್ರೀಕಂಠ ಶಾಸ್ತ್ರಿಗಳು ಗಂಗೆಯ ಮನವನ್ನು ಸದಾ ಆವರಿಸಿದರು. ಅವಳ ಹೃತ್ಪಟಲ ದಲ್ಲಿ ಅದೇ ಮಸುಮಸುಕಾಗಿ ಮೂಡಹತ್ತಿದ ಒಂದೆರಡು ಯುವಕರು ಅವಳ ಕನಸಿನಲ್ಲಿಯೂ ಕಾಣದಾದರು. ಅವಳು ಜೀವನದ ಸಂಕೇತಕ್ಕೆ ಸೋತು ಶ್ರೀಕಂಠಶಾಸ್ತ್ರಿಗಳಿಗೆ ತನ್ನ ಹೃದಯದಲ್ಲಿ ಸ್ಥಾನ ಕೊಟ್ಟಳು. ಹಿಂದು ಮುಂದು ಹೆಚ್ಚಿಗೆ ವಿಚಾರ ಮಾಡದೆ, ಅವರು ಶಂಭುಲಿಂಗನ ಪ್ರತಿರೂಪ ವೆಂಬ ಭಾವನೆಯಿಂದ ತನ್ನ ದೇಹವನ್ನು ಅವರಿಗೆ ಅರ್ಪಣ ಮಾಡಿದಳು.

ಧಾರವಾಡಕ್ಕೆ ಮೇಲಿಂದ ಮೇಲೆ ಓಡಾಡುವದು ಶ್ರೀಕಂಠಶಾಸ್ತ್ರಿಗಳಿಗೆ ಬಹಳ ಅನಾನುಕೂಲದ ಕೆಲಸವಾಯಿತು ದುಡ್ಡಿನ ಪೆಟ್ಟೂ ಬಡಿಯಹತ್ತಿತು. 'ಗಂಗೆ ಶಂಭುಲಿಂಗನ ಬೆಟ್ಟದಲ್ಲಿಯೇ ವಾಸಿಸಿದರೆ, ಎಷ್ಟು ಅನುಕೂಲ!' ಎಂದು ಆಶಿಸಿದರು. ಆದರೆ ಆ ಆಸೆ ಈಡೇರುವದೆಂತು? ಧಾರವಾಡದ ಲ್ಲಿಯೇ ಹುಟ್ಟಿ ಬೆಳೆದಾಕೆಗೆ ಹಳ್ಳಿಯ ಜೀವನ ಮನಸ್ಸಿಗೆ ಬಂದೀತೇ? ಮೇಲಾಗಿ ತಾವಾಗಿಯೆ ಅವಳನ್ನು ಕೇಳುವದೆಂತು? ಒಂದು ವೇಳೆ ಅವಳು ಒಪ್ಪಿಕೊಂಡರೂ, ಅಲ್ಲಿಗೆ ತಾವೇ ಅವಳನ್ನು ಕರೆದುಕೊಂಡು ಹೋದರೆ, ಅವಳೊಡನೆ ಇದ್ದ ತಮ್ಮ ಅನೈತಿಕ ಸಂಬಂಧ ಗುಟ್ಟಾಗಿ ಉಳಿಯುವ ದಾದರೂ ಹೇಗೆ?— ಇಂಥವೇ ಪ್ರಶ್ನೆಗಳು ಅವರ ತಲೆ ತಿನ್ನಹತ್ತಿದವು. ಅವರಿಗೊಂದು ಹಂಚಿಕೆಯೂ ಹೊಳೆಯಿತು. ಆ ಹಂಚಿಕೆಯನ್ನು ಗುಪ್ತ ವಾಗಿಯೇ ಕಾರ್ಯರೂಪಕ್ಕಿಳಿಸಿದರು:

ಶಂಭುಲಿಂಗನ ಅಷ್ಟಾವಧಾನದ ಕಾಲದಲ್ಲಿ ಗಂಗೆಯ ಮನೆತನದವರು ನೃತ್ಯಸೇವೆ ಮಾಡುತ್ತಿದ್ದುದು ಅವರಿಗೆ ಗೊತ್ತಿದ್ದಿತು. ಅದರ ಪ್ರತಿಫಲವಾಗಿ ಅವರಿಗೆ ದೇವಸ್ಥಾನದಿಂದ ಒಂದು ಜಮೀನು ಇನಾಮಾಗಿ ಇದ್ದುದೂ ಗೊತ್ತಿದ್ದಿತು. ದೇವಸ್ಥಾನದ ಆಡಳತೆಗಾರರಿಗೆ, ಗಂಗೆಯ ಅಜ್ಜಿಯ ವಿರುದ್ಧ ನೃತ್ಯದ ಚಾಕರಿಯನ್ನು ಅವಳು ಈಗ ಬಿಟ್ಟುಬಿಟ್ಟಿರುವದಾಗಿಯೂ, ಆ ಚಾಕರಿಯ ಸಲುವಾಗಿಯೇ ಇದ್ದ ಉಂಬಳಿಯ ಹೊಲವನ್ನು ಸರಕಾರದವರು ಸ್ವಾಧೀನಪಡಿಸಿಕೊಂಡು ಬೇರೆಯವರನ್ನು ನಿಯಮಿಸುವದಾಗಿಯೂ, ಸರ

ಕಾರಕ್ಕೆ ಅರ್ಜಿ ಕೊಡಲು ಸೂಚಿಸಿದರು. ಅವರು ಹಾಗೆ ಮಾಡಿದಾಗ ತಾಲೂಕ ಕಚೇರಿಯ ಕಾರಕೂನರಿಗೆ ಕೈ ಬೆಚ್ಚಗೆ ಮಾಡಿ, ಕಚೇರಿಯಿಂದ ಧಾರವಾಡಕ್ಕೆ ಒಂದು ನೋಟೀಸನ್ನು ಹೊರಡಿಸಿದರು— ದೇವಸ್ಥಾನ ನೃತ್ಯ ಸೇವೆಗಾಗಿಯೇ ಹಾಕಿಕೊಟ್ಟ ಇನಾಮನ್ನು, ಆ ಸೇವೆನ್ನು ಮೊದಲಿನಂತೆ ಯೋಗ್ಯ ಕಾಲದಲ್ಲಿ ನಿಯಮಿತತನದಿಂದ ಸಾಗಿಸದಿದ್ದರೆ, ಫಾರಫೀಟು ಮಾಡುವದರಲ್ಲಿ ಬರುವದು— ಎಂದು.

ನೋಟೀಸು ಮುಟ್ಟಿದಂದಿನಿಂದ ಅಜ್ಜಿ-ಮೊಮ್ಮಗಳಿಬ್ಬರೂ ಪೇಚಿಗೊಳಗಾದರು. ವಕೀಲರ ಸಲಹೆ ಕೇಳಿದರು. ಅವರು ಹಾಗೆ ನೋಟೀಸು ಕೊಟ್ಟದು ಸಹಜವಾದುದೆಂದೂ, ಹೊಲವನ್ನು ಉಳಿಸಿಕೊಳ್ಳಬೇಕಾದರೆ, ಯಾರಾದರೂ ಒಬ್ಬರು ಅಲ್ಲಿಗೆ ಹೋಗಿ ನೃತ್ಯಸೇವೆ ಮಾಡಲು ಅಲ್ಲಿಯೇ ವಾಸಿಸಬೇಕೆಂದೂ ಹೇಳಿದರು.

ಗಂಗೆಯು ಶ್ರೀಕಂಠಶಾಸ್ತ್ರಿಗಳ ದಾರಿ ನೋಡಹತ್ತಿದಳು. ಎರಡೇ ದಿನಗಳಲ್ಲಿ ಸವಾರಿ ಹಾಜರಾಯಿತು. ತಮಗೆ ಏನೂ ಗೊತ್ತಿಲ್ಲದವರಂತೆ, ನೋಟೀಸಿನ ಸುದ್ದಿಯನ್ನು ಕೇಳಿದೊಡನೆ, ಸರಕಾರದ ಮೇಲೆ ಸಿಟ್ಟಿಗೆದ್ದಂತೆ ನಟನೆ ಮಾಡಿದರು.

ಒಂದು ವಾರದ ವರೆಗೆ ವಿಚಾರ ಮಾಡಿ ಮಾಡಿ, ಕಡೆಗೆ ಧಾರವಾಡದ ತಮ್ಮ ಮನೆಯನ್ನು ಬಾಡಿಗೆ ಕೊಡುವುದಾಗಿಯೂ, ಮನೆಯಲ್ಲಿದ್ದ ತಾಯಿಯ ಹೆಚ್ಚಿನ ಬಂಗಾರವನ್ನು ಮಾರಿ ಬಂದ ಹಣವನ್ನು ಬ್ಯಾಂಕಿನಲ್ಲಿ ಇಡುವದಾಗಿಯೂ, ಬೆಟ್ಟಕ್ಕೆ ಹೋಗಿ ಅಲ್ಲಿಯೇ ನೆಲಸುವದಾಗಿಯೂ ಆಕೆ ನಿಶ್ಚಯ ಮಾಡಿದಳು. ಮೊದಮೊದಲು ಧಾರವಾಡವನ್ನು ಬಿಡುವದು ಕೆಟ್ಟೆನಿಸಿದರೂ, ತನ್ನ ಊರಾದ ತನ್ನ ಕುಲದೇವತೆಯ ಪವಿತ್ರಸ್ಥಾನವಾದ ತನ್ನ ಸ್ವಾಮಿ ಎಂದು ನಿಶ್ಚಯಿಸಿಕೊಂಡಿದ್ದ ಶ್ರೀಕಂಠಶಾಸ್ತ್ರಿಗಳ ಊರಾದ ಶಂಭುಲಿಂಗನ ಬೆಟ್ಟದಲ್ಲಿಯ ವಾಸ ಆಕೆಗೆ ಸಮಾಧಾನವನ್ನು ಕೊಟ್ಟಿತು.

* * * *

ಇಂದು ಆಕೆ ಹದಿನೆಂಟು ವರುಷದ, ಜೀವನದ ಅನುಭವ ಎಳ್ಳಷ್ಟೂ ಇಲ್ಲದ ಗಂಗೆಯಲ್ಲ. ತಾರುಣ್ಯದ ಅನಿರ್ವಚನೀಯ ಶಕ್ತಿಯ ಸೆಳವಿನಿಂದ ಪಾರಾಗಿ ಮುಂದೆ ಸಾಗಿದ ಇಪ್ಪತ್ತೆಂಟು ವರುಷದ ಗಂಗಾಸಾನಿ. ಗಿರಿಕಂದರ

ಗಳಲ್ಲಿ ನುಸುಳಿ, ಜಿಗಿಯುತ್ತ ನೆಗೆಯುತ್ತ ಮುಂದೆ ಮುಂದೆ ಸಾಗಿ, ಹಿಂದು ಮುಂದು ನೋಡದೆ ಕೆಳಗೆ ಧುಮುಕಿದ ಜಲಪಾತವಲ್ಲ. ಪೆಟ್ಟು ತಿಂದು ಮುಂದೆ ಬಂದು ಸಮಪಾತಳಿಯಲ್ಲಿ ಗಂಭೀರವಾಗಿ, ವಿಶಾಲವಾಗಿ ಹರಿಯುವ ಮಂದವಾಹಿನಿ. ಈ ಹತ್ತು ವರುಷಗಳ ಬೆಟ್ಟದ ಜೀವನ ಅವಳನ್ನು ಅದೆಷ್ಟೋ ಅನುಭವಿಕಳನ್ನಾಗಿ ಮಾಡಿದೆ. ಹಳ್ಳಿಯ ಜೀವನಕ್ಕೆ ಒಗ್ಗುವಂತೆ ತನ್ನಲ್ಲಿಯೇ ತಾನು ಮಾರ್ಪಾಡು ಮಾಡಿಕೊಂಡಿದ್ದಾಳೆ. ತನ್ನ ಜೀವಾಳವೆಂದು ತಿಳಿದು ಕೊಂಡಿದ್ದ ಶ್ರೀಕಂಠಶಾಸ್ತ್ರಿಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ್ದಾಳೆ. ಒಮ್ಮೆ ಯಲ್ಲ ಹತ್ತು ಸಲ ಅಸಮಾಧಾನ ಪಟ್ಟಿದ್ದಾಳೆ. ಆದರೂ ಅಗ್ನಿನಾರಾಯಣನ ಸಾಕ್ಷಿಯಾಗಿ ಅಲ್ಲದಿದ್ದರೂ ತನ್ನ ಆತ್ಮದ ಸಾಕ್ಷಿಯಾಗಿ, ಶಂಭುಲಿಂಗನ ಪ್ರತಿ ನಿಧಿಯೆಂದು, ಒಮ್ಮೆ ಅವರನ್ನು ನಂಬಿದ ಮೇಲೆ ತೀರಿತು. ಯಾರಲ್ಲಿ ಕುಂದು-ಕೊರತೆಗಳಿಲ್ಲ ?— ಎಂದು ಮತ್ತೆ ನಿತ್ಯದ ಜೀವನ ಸಾಗಿಸುತ್ತಾಳೆ.

೪

ಅಮಂಗಲವಾದ ಸುದ್ದಿಯನ್ನು ತಾನಾಗಿಯೇ ಸುಭಗೆ ಮುಟ್ಟಿಸುವದು ಯೋಗ್ಯವಲ್ಲವೆಂದು ಗಂಗಾಸಾನಿ, ಗುಡಿಗೆ ಹೋಗಿ ಬಂದೊಡನೆ ಸುಭಗೆಯ ಮನೆಗೆ ಹೋಗಿರಲಿಲ್ಲ. ಸ್ವಲ್ಪ ಹೊತ್ತು ತಡೆದು, ಶಂಕರಭಟ್ಟರು ಮನೆಗೆ ಬಂದಿರಬಹುದೆಂದು ಭರವಸೆಯಾದ ಮೇಲೆ ಅತ್ತ ಹೊರಟಳು.

ಆಗಲೇ ಸುದ್ದಿ ಎಲ್ಲೆಡೆಗೆ ಹಬ್ಬಿದ್ದಿತು. ಶಂಕರಭಟ್ಟರ ಮನೆಗೆ ಜನ ಒಂಡುಗಟ್ಟಿಗೊಂಡು ಹೋಗುತ್ತಿದ್ದಿತು. ಮನೆಯಿಂದ ಹೊರಗೆ ಬರುತ್ತಿದ್ದ ಹೆಂಗಸರ ಕಣ್ಣುಗಳು ದುಃಖದಿಂದ ಕೆಂಪಡರಿದ್ದವು. ಯಾರು ನೋಡಿದರೂ, ಸುಭಗೆಯಂಥ ಹಸುಗೂಸಿಗೆ ಈ ಬಗೆ ಆಗಬಾರದಿತ್ತೆಂದು ಹಳಹಳಿ ಪಟ್ಟರು.

ನಡುಮನೆಯಲ್ಲಿ ಜನ ಓಡಾಡಲು ದಾರಿಬಿಡದಂತೆ ಕುಳಿತುಕೊಂಡಿದ್ದಿತು. ಶಂಕರಭಟ್ಟರು ಅದೇ ತಂದ ಒದ್ದೆಯ ಗಂಟು ಬೀಸುವ ಕಲ್ಲಿನ ಮೇಲೆ ಹಾಗೆಯೇ ಕುಳಿತಿದ್ದಿತು. ಆ ಬದಿಯ ಮೂಲೆಯಲ್ಲೊಂದು ಅರ್ಧ ಕಟೆದ ನಾಗರ ಹಾವಿನ ಮೂರ್ತಿಯ ಕಲ್ಲು ಬಿದ್ದಿದ್ದಿತು. ಬದಿಯಲ್ಲಿಯೇ ಸುತಿಗೆಯೂ ಉಳಿಯೂ ಹಾಗೆಯೇ ಬಿದ್ದಿದ್ದವು. ಇತ್ತ ಕಡೆಗೆ ತಲೆಬಾಗಿಲ

ಎದುರಿಗೆ, ಸಣ್ಣ ಮಣೆಯ ಮೇಲೆ ಮಣ್ಣಿನ ಮೂಟಾದ ಗಣಪತಿಯೊಂದು ಬರಿಯ ಬೆಣ್ಣೆ-ಬಾಳಪ್ಪವನ್ನು ಬಳೆದುಕೊಂಡು ಕುಳಿತಿದ್ದಿತು. ಬದಿಯಲ್ಲಿಯೇ ನಾಲ್ಕಾರು ಬಣ್ಣದ ಚಿಪ್ಪುಗಳೂ, ಸಣ್ಣ ಬಟ್ಟಲೊಂದರಲ್ಲಿ ನೀರೂ ಕುಂಚ ಗಳೂ ಇದ್ದವು. ಎರಡು ದಿನಗಳಿಂದ ಹಾಗೆಯೇ ಬಿದ್ದುದರಿಂದ ಚಿಪ್ಪಿನಲ್ಲಿಯ ಬಣ್ಣ ಒಣಗಿ ಹೆಪ್ಪುಗಟ್ಟಿದ್ದಿತು; ಮೇಲೆ ಧೂಳ ಕೂತಿದ್ದಿತು. ಗಣಪತಿಯ ಬಿಳಿಯ ಬಣ್ಣವೂ ಧೂಳದಿಂದ ಸ್ವಲ್ಪ ಮಸುಕಾಗಿದ್ದಿತು; ಇಲ್ಲಿಯ ವರೆಗೆ ಆಗಾಗ ಅದರ ಮೇಲೆ ಹೊಚ್ಚುತಲಿದ್ದ ಅರಿವೆಯೊಂದು ಕಟಕಟಿಯಾಗಿ ಬದಿ ಯಲ್ಲಿಯೆ ಬಿದ್ದಿತ್ತು. ಮನೆ, ಆಡಂಬರದ ಯಾವ ಲಕ್ಷಣಗಳು ಇಲ್ಲದಿದ್ದರೂ ಸ್ವಚ್ಛವಾಗಿತ್ತು. ಬೆಳ್ಳಗಿನ ಗೋಡೆಗಳ ಮೇಲೆ ಅಲ್ಲಲ್ಲಿ ಅಂದವಾಗಿ ಬರೆದ ಸಂಸ್ಕೃತ ವಾಕ್ಯಗಳಿಂದಲೂ, ಗಣಪತಿಯ ಮಾಡದ ಸುತ್ತಲೂ ತೆಗೆದ ಬಣ್ಣ ಬಣ್ಣದ ಸುಳುವುಗಳಿಂದಲೂ, ಆ ನಡುಮನೆಗೆ ಒಂದು ಬಗೆಯ ಶೋಭೆ ಯಿದ್ದಿತು. ಅಡಿಗೆಯ ಮನೆಯ ಎಡಬದಿಗೆ ಗೋಡೆಗೆ ಹೊಂದಿ ಹಾಕಿದ ಕಟ್ಟಿಗೆಯ ಹಳೆಯ ಪಲ್ಲಂಗದ ಮೇಲೆ ಹರವಿದ ಹುಲ್ಲಿನ ಚೇಪೆಯ ಮೇಲೆ, ಹಾಸಿಗೆಯ ಸುರಳಿಗೆ ಆತುಕೊಂಡು, ಗಾಢವಾದ ವಿಚಾರದಲ್ಲಿ ಮಗ್ನರಾದವ ರಂತೆ ಶ್ರೀಕಂಠಶಾಸ್ತ್ರಿಗಳು ಕುಳಿತುಕೊಂಡಿದ್ದರು. ಆ ಮೂಲೆಯಲ್ಲಿ ಬಚ್ಚಲ ಮನೆಯ ಬಾಗಿಲೆದುರಿನ ಕಂಬಕ್ಕೆ ಹೊಂದಿ ಬಿದ್ದಿದ್ದ ಜೋಳದ ಚೀಲದ ಮೇಲೆ ಶಂಕರಭಟ್ಟರು ತುದುಗುಂಡಿಯಿಂದ ಕುಳಿತುಕೊಂಡಿದ್ದರು. ಅವರ ಕಣ್ಣಗಳಲ್ಲಿ ಒಂದೇ ಸವನೆ ನೀರಿನ ಒರತೆ ಹರಿಯುತ್ತಿದ್ದಿತು. ಅಡಿಗೆಯ ಮನೆ-ಬಚ್ಚಲ ಮನೆಗಳ ನಡುವಿನ ಕೋಣೆಯಲ್ಲಿ ಸುಭಗೆ ನೆಲದ ಮೇಲೆಯೇ ಗೋಡೆಯ ಕಡೆಗೆ ಮೋರೆ ಮಾಡಿ, ತನ್ನ ಎಡದ ತೋಳಿಗೆ ಗಲ್ಲವನ್ನಿರಿಸಿ ಮಲಗಿಕೊಂಡಿದ್ದಳು. ತಂದೆ ತನ್ನ ದುರ್ಭಾಗ್ಯದ ಸುದ್ದಿಯನ್ನು ತಂದಾಗ ಅಡಿಗೆಯ ಮನೆಯಲ್ಲಿ ಭಕ್ಕರಿಯನ್ನು ಬಡೆಯುತ್ತಿದ್ದಳಾದ್ದರಿಂದ, ಬಲಗೈ ಯಲ್ಲಿಯ ಒಣಗಿ ಕಟಕಟಿಯಾದ ಹಿಟ್ಟು ಹಾಗೆಯೇ ಇದ್ದಿತು. ಆಕೆ ಮೌನ ವಾಗಿಯೇ ಮಲಗಿಕೊಂಡಿದ್ದರೂ, ದುಃಖಿಸಿ ದುಃಖಿಸಿ ಬಿಕ್ಕುತ್ತಿದ್ದುದು ಹೊರಗೆ ಕುಳಿತ ಹೆಣ್ಣುಮಕ್ಕಳ ಕಣ್ಣುಗಳನ್ನು ಮೇಲಿಂದ ಮೇಲೆ ಹಸಿಯಾಗಿ ಮಾಡುತ್ತಿದ್ದಿತು. ಸುಭಗೆ ಅದೇ ತಾನೆ ಹಸುತನದ ಸರಳತೆ ಅಜ್ಞಾನ ಅನ ನುಭವಗಳ ಹೊಸತಿಲವನ್ನು ದಾಟಿ ಪ್ರಮದಾವಸ್ಥೆಯಲ್ಲಿ ಹೆಜ್ಜೆ ಇಡುತ್ತಿದ್ದಳು.

ತಾನು ಮದುವೆಯಾದುದರ ಕಲ್ಪನೆಯೇನೋ ಇದ್ದಿತು. ಆದರೆ ಅವಳ ಲಗ್ನದ ಕಲ್ಪನೆ ಮಂಗಳಸೂತ್ರ ಕಟ್ಟಿಕೊಳ್ಳುವಿಕೆ, ಮೂಗು ಚುಚ್ಚಿಕೊಳ್ಳುವಿಕೆ, ಕಚ್ಚೆ ಹಾಕಿಕೊಳ್ಳುವಿಕೆ, ಒಬ್ಬ ನಿರ್ದಿಷ್ಟ ಪುರುಷನಿಗೆ 'ಹೆಂಡತಿ'ಯಾಗಿರುವಿಕೆ ಮುಂತಾದಬಾಹ್ಯವಾದ ಬದಲಾವಣೆಗಳಿಂದಲೇ ಮರ್ಯಾದಿತವಾಗಿತ್ತು. ಗಂಡ-ಹೆಂಡಂದಿರ— ಗಂಡು-ಹೆಣ್ಣಿನ— ನಡುವಿನ ಸಂಬಂಧದ ಗುಟ್ಟು ಆ ಹಸುಳೆಯ ಕಲ್ಪನೆಗೆ ತಾಗಿರಲಿಲ್ಲ. ಅವಳ ಹೃದಯದಲ್ಲಿ ಹೆಣ್ಣುತನ ಅದೇ ತಾನೆ ಅಂಕುರೊಡೆಯುಹತ್ತಿದ್ದಿತು. ಹೃದಯದಲ್ಲಿಯ ಹೆಣ್ಣುತನದ ನಿಶ್ಚಲ ಪಾತಳಿ ಯಲ್ಲಿ ಪ್ರೀತಿಯ ಶೃಂಗಾರಭಾವನೆಗಳ ತರಂಗಗಳು ಇನ್ನೂ ಮೂಡಿರಲಿಲ್ಲ. ಅಂತೆಯೇ ತನ್ನ ಗಂಡ ತೀರಿದುದು ಎಂಥ ಅನಾಹುತ ಎಂಬುದರ ನಿಜವಾದ ಸಂಪೂರ್ಣವಾದ ಕಲ್ಪನೆ ಆಕೆಯ ಮನದಲ್ಲಿ ಆಗ ನಿಚ್ಚಳವಾಗಿ ಮೂಡಲಿಲ್ಲ. ಗಂಡ ಎಂಬ ವ್ಯಕ್ತಿಯನ್ನು ನೋಡಿದುದು ಮದುವೆಯ ಒಂದೆರಡು ದಿನ ಗಳಲ್ಲಿಯೇ. ಅಂತೆಯೇ ಅವಳ ಇಂದಿನ ದುಃಖ ಹೃದಯದ ಆಳವನ್ನು ಭೇದಿಸಿ ಮೇಲೆ ಬಂದುದಲ್ಲ. ಆದರೂ ಇದೊಂದು ದುರ್ಘಟನೆ ಎಂಬ ತಿಳುವಳಿಕೆ ಆ ಎಳೆಮನಸ್ಸನ್ನು ದುಃಖದ ಮಡುವಿನಲ್ಲಿ ಕೆಡಹಿತು. ಇಂದಿ ನಿಂದ ತನಗೆ ವಿಧವೆಯೆನ್ನುವರಲ್ಲ ಎಂದು ಅವಳು ಎದೆಯೊಡೆದಳು. ತನ್ನ ಭವಿಷ್ಯತ್ತಿನ ಸ್ಥಿತಿಗತಿಗಳನ್ನು ಅಳೆಯುವ ಶಕ್ತಿ ಅವಳಲ್ಲಿರದಿದ್ದರೂ, ತಂದೆ ಗೋಳಿಟ್ಟು ಅಳುತ್ತಿದ್ದುದೂ, ಮನೆಗೆ ಹಿಂಡುಗಟ್ಟಲೆ ಜನ ಬಂದು ಕಣ್ಣೀರಿ ಡುತ್ತಿದ್ದುದೂ, ಅಂದಿನ ಆ ಪ್ರಸಂಗದ ಗಾಂಭೀರ್ಯವನ್ನೂ ಭೀಕರತೆ ಯನ್ನೂ ಆಕೆಯ ಮನಸ್ಸಿನ ಮೇಲೆ ಮೂಡಿಸಿದವು. ಕಗ್ಗತ್ತಲೆಯ ದಟ್ಟ ವಾದ ಕಾನನದಲ್ಲಿ ಮಳೆಗಾಳಿಯ, ಸಿಡಿಲ್ಮಿಂಚಿನ ಆರ್ಭಟಗೆ ಅಂಜಿ ದಿಕ್ಕು ಗಾಣದಾದ ಜಿಂಕೆಯ ಮರಿಯಂತೆ ಹೆದರಿ ಕಕ್ಕಾವಿಕ್ಕಿಯಾದಳು. ಅಂತೆಯೇ ಕಂಡದ್ದು ಕಾಣದಂತಾಯಿತು. ಕೇಳಿದ್ದು ಕೇಳದಂತಾಯಿತು.

ಹಿತ್ತಲಿನಲ್ಲಿ, ಹಿಂಡುವ ಹೊತ್ತು ಮೀರಿ ಹೋಗಿದ್ದರೂ ಯಾರೂ ಅತ್ತ ಲಕ್ಷ್ಯಗೊಡದ್ದರಿಂದ, ಆಕಳಕರು ಒಂದೇಸವನೆ ಒದರಹತ್ತಿತು; ಕೆಚ್ಚಲು ಬಿಗಿದು ನಿಂತ ಆಕಳು ಮಗಳ ದನಿಗೆ ಉತ್ತರವೀಯಹತ್ತಿತು. ಸುಭೆಗೆಗೆ ಆಕಳ ಕರುವಿನ ಈ ಆರ್ತಧ್ವನಿಯಲ್ಲಿ ಆಕಳಿನ ಅಂತಃಕರಣ ಪೂರ್ಣವಾದ ಪ್ರತ್ಯುತ್ತರದಲ್ಲಿ ಇಂದು ಹೊಸದೊಂದು ಅರ್ಥ ಕಾಣಹತ್ತಿತು.

ಒಮ್ಮೆಲೇ ಬಹಳ ದಿನಗಳ ಹಿಂದೆಯೇ ಮಡಿದು ಮರೆಯಾಗಿದ್ದ ತನ್ನ ತಾಯಿಯ ನೆನಪಾಯಿತು. ಅವಳ ಚಿತ್ರ ಕಣ್ಣ ಮುಂದೆ ಬಂದು ನಿಂತಿತು. ಕರುಳಿನ ತಾಯಿಯು ಈ ಸಮಯದಲ್ಲಿ ಬದಿಯಲ್ಲಿರಬೇಕೆನಿಸಿತು.

"ಸುಭಗಾ" ಎಂದು ನಡುಮನೆಯಿಂದ ಗಂಗಾಸಾನಿಯ ಧ್ವನಿ ಬಂತು. ಆ ಮೂರು ಅಕ್ಷರಗಳನ್ನು ಉಚ್ಚರಿಸುವ ಆ ಧ್ವನಿಯಲ್ಲಿ ಕಂಪನ, ಅಕ್ಷರ-ಅಕ್ಷರಕ್ಕೂ ಹೊರಸೂಸುವ ಕಾರುಣ್ಯ ಸುಭಗೆಗೆ ಆ ಕ್ಷಣದಲ್ಲಿ, ತಾಯಿಯನ್ನು ಕಳೆದುಕೊಂಡಿದ್ದರಿಂದ ಉಂಟಾದ ಕೊರತೆಯನ್ನು ತುಂಬಿಕೊಟ್ಟಂತೆ ಎನಿಸಿತು.

ಆಕೆ "ಗಂಗಕ್ಕಾ!" ಎಂದು ಹೊರಗೆ ಧಾವಿಸಿ, ತಾನು ವೈಲಿಗೆ ಯಾಕೆ, ಅವಳನ್ನು ಮುಟ್ಟಕೂಡದು, ಎಂಬ ಪರಿವೆಯೂ ಇಲ್ಲದೆ, ಆಕೆಯ ತೊಡೆಯಲ್ಲಿ ತನ್ನ ಮುಖವನ್ನು ಹುದುಗಿಸಿ ಮಲಗಿಕೊಂಡಳು. ಅವಳ ದುಃಖಕ್ಕೆ ಮತ್ತೆ ಮತ್ತೆ ಉಕ್ಕು ಬರಹತ್ತಿತು.

ಗಂಗಾಸಾನಿ ಅವಳ ಕೂದಲಿನ ಮೇಲೆ, ಬೆನ್ನ ಮೇಲೆ, ಕೈಯಾಡಿಸಿ ಸಂತೈಸಹತ್ತಿದಳು: "ಅಳಬ್ಯಾಡ ಕೂಸಃ. ಅತ್ತುಅತ್ತು ಯಾಕ ಹಣ್ಣು ಆಗತೀ. ಯಾರ ಕೈಯಾಗ ಏನದ....ಇದೇನ ಶಂಕ್ರಭಟ್ಟರ, ನೀವೂ ಅತಕೋತ ಕೂತ್ರಕೂಸು ಎದೀ ಒಡಕೋತಃದ. ನಿಮ್ಮಂಥ ತಿಳಿದೋರಃ ಹಿಂಗ ಮಾಡಿದ್ರ ಸಣ್ಣ ಹುಡಿಗೀ ಗತೀ ಏನು? ನೀವು ಅತ್ರೇನು ನಿಮ್ಮ ಅಳಿಯಾ ತಿರುಗಿ ಬರತಾನ?" ಎನ್ನುತ್ತಲೇ ತನ್ನ ಎರಡೂ ಕಣ್ಣುಗಳನ್ನು ಪಿಳುಕಿಸಿ ನೀರಿನಿಂದ ತುಂಬಿದ ಕಣ್ಣುಗಳನ್ನು ತೆರವು ಮಾಡಿದಳು.

ಅಡಿಗೆಮನೆಯ ಹೊಸತಿಲದ ಒಳಗೆ ತನ್ನ ಕೂಸನ್ನು ಮೊಲೆಗೆ ಅಂಟಿಸಿಕೊಂಡು ಕುಳಿತಿದ್ದ ರಾಧಕ್ಕ— ಶ್ರೀಕಂಠಶಾಸ್ತ್ರಿಗಳ ಹೆಂಡತಿ— ಎಂದರು: "ಗಂಗಾಸಾನಿ, ನೀನರ ಹೇಳವ್ವ ಸುಭಗಾಗ. ನೀರು ಕಾಸಿಗೊಂಡು ಬಂದೀನಿ. ನೀರು ಹಾಕಿಸಿಗೊಂಡು ಒಂದು ತುತ್ತು ಅನ್ನಾ ಹೊಟ್ಯಾಗ ಹಾಕಿಕೊಳ್ಳಲಿ. ಎಷ್ಟಂತ ಅಳೋದದ. ಸುಮ್ಮನೆ ನೀರು ಆರಲಿಕ್ಕೆ ಹತ್ತೇದ."

ಗಂಗಾಸಾನಿ ಸುಭಗೆಯನ್ನು ಜುಲುಮೆಯಿಂದ ಹಿತ್ತಲಿಗೆ ಕರೆದು ಕೊಂಡು ಹೋದಳು.

೩

ಶಂಕರಭಟ್ಟರ ಜಗತ್ತೆಂದರೆ ಶಂಭುಲಿಂಗನ ಬೆಟ್ಟವೇ. ಬೆಟ್ಟವನ್ನು ಬಿಟ್ಟು ಕೆಳಗಿಳಿಯುವದು, ಬೇರೂರಿಗೆ ಹೋಗುವದು, ಅತಿ ವಿರಲ; ವರುಷದಲ್ಲಿ ಎರಡು ಸಲವೊ, ಮೂರು ಸಲವೊ. ಮೊದಲಿನಿಂದಲೂ ಹೀಗೆಯೇ. ತಂದೆಯನ್ನು ಬೇಗ ಕಳೆದುಕೊಂಡ ಅವರಿಗೆ ತಾಯಿಯೇ ತಂದೆಯಾಗಿದ್ದಳು. ತಾಯಿ ಜೀವಂತ ಇರುವ ವರೆಗೆ ಮಗನನ್ನು ಅವಳು ಕೂಸಿನಂತೆಯೇ ಜೋಪಾನ ಮಾಡಿದ್ದಳು. ಬೆಟ್ಟದಲ್ಲಿಯೇ ಮೂರು-ನಾಲ್ಕು ಇಯತ್ತೆ ಕನ್ನಡ ಕಲಿತು, ಆ ಮೇಲೆ ಅಲ್ಲಿಯೇ ವೈದಿಕ ವಿದ್ಯೆ ಸುರುವು ಮಾಡಿದರು. ಆ ವಿದ್ಯೆ ಲಗ್ನವಾಗುವ ವರೆಗೆ ಸಾಗಿ ಮುಂದೆ ಮುಕ್ತಾಯವಾಯಿತು. ಆದರೂ ಅವರು ಕಲಿತುದನ್ನೆಲ್ಲ ಸುವ್ಯವಸ್ಥೆಯಿಂದ ಕಲಿತಿದ್ದರು.

ಶಂಕರಭಟ್ಟರಿಗೆ ಮೊದಮೊದಲು ಆಸ್ತಿ ಚೆನ್ನಾಗಿಯೇ ಇದ್ದಿತು. ಆದರೆ ಅವರ ಉದರನಿರ್ವಾಹವೆಲ್ಲ ಪೂರ್ವಾರ್ಜಿತ ಆಸ್ತಿಯಿಂದಲೇ ಸಾಗಬೇಕಾಗಿದ್ದುದರಿಂದ, ಇದ್ದ ಆಸ್ತಿ ಸಾವಕಾಶವಾಗಿ ಸವೆಯಹತ್ತಿದ್ದಿತು. ತಾಯಿ ಅವರನ್ನು ದೊಡ್ಡವರನ್ನಾಗಿ ಮಾಡುವದಕ್ಕಾಗಿ ಒಂದೆರಡು ಹೊಲ ಮಾರಿದ್ದಳು. ಮುಂದೆ ಅವರ ಮದುವೆಗಾಗಿ ಒಂದು ಹೊಲ ಹೋಯಿತು. ಹೀಗೆಯೇ ಒಂದೊಂದಾಗಿ ಹೊಲಗಳು ಕೈಬಿಟ್ಟು ಈಗ ಶಂಕರಭಟ್ಟರು ಉಳಿದ ಅಲ್ಪ ಸ್ವಲ್ಪ ಉತ್ಪನ್ನದ ಸಹಾಯದಿಂದಲೇ ಜೀವನ ಸಾಗಿಸುತ್ತ ಬಂದಿದ್ದರು.

ಶಂಕರಭಟ್ಟರು ಸ್ವಭಾವತಃ ಸರಳಜೀವಿಗಳು. ದೇವರು-ದಿಂಡರಲ್ಲಿ ನಿಷ್ಠೆಯುಳ್ಳವರು. ಸಂಸಾರವೆಂಬುದೆಲ್ಲ ದೇವರ ಆಟ ಎಂದು ಅವರ ತತ್ವ. ಅಂತೆಯೇ, ತಾಯಿ ಸತ್ತುದು, ಮದುವೆಯಾದ ಎಂಟು ಹತ್ತು ವರುಷಗಳಲ್ಲಿಯೇ ಮುತ್ತಿನಂತಹ ಇಬ್ಬರು ಗಂಡಸುಮಕ್ಕಳು ಸತ್ತುದು, ಆಮೇಲೆ ಈ ದುಃಖವನ್ನು ಸಾವರಿಸಿಕೊಳ್ಳುವಷ್ಟರಲ್ಲಿಯೇ ನಾಲ್ಕು ವರುಷದ ಸುಭಗೆಯನ್ನು ಪರದೇಶಿಯನ್ನಾಗಿ ಮಾಡಿ ಹೆಂಡತಿ ಕೈಬಿಟ್ಟು ಹೋದುದು— ಈ ಎಲ್ಲ ಸಂಕಷ್ಟಗಳು ಶಂಭುಲಿಂಗನ ಇಚ್ಛೆಯ ಮೇರೆಗೆಯೇ ನಡೆದವು ಎಂದೂ ಅವೆಲ್ಲ ತಮ್ಮ ಪೂರ್ವಜನ್ಮದ ಕೃತಿಗಳ ಪ್ರತಿಫಲವೆಂದೂ ಭಾವಿಸಿ, ಮಾತ್ರ

ವಿಯೋಗದಿಂದ, ಪುತ್ರವಿಯೋಗದಿಂದ, ಪತ್ನಿವಿಯೋಗದಿಂದ ಬೆಂದು ನಿರ್ವಿಣ್ಣರಾಗಿದ್ದರಾದರೂ ಶಂಭುಲಿಂಗನಲ್ಲಿಯೇ ಅಚಲ ನಿಷ್ಠೆಯನ್ನಿಟ್ಟು, ಅವದ ಸೇವೆಯಲ್ಲಿಯೇ ನಿರತರಾಗಿ ಬಂದಿದ್ದರು.

ಹೆಂಡತಿ ಸ್ವರ್ಗಸ್ಥಳಾದಂದಿನಿಂದ ಉಂಟಾದ ನಿರಾಶೆಯಲ್ಲಿ ತನ್ನ ಸಣ್ಣ ಮಗು, ಸುಭಗೆಯೊಬ್ಬಳೇ ತನ್ನ ಜೀವನಸರ್ವಸ್ವ ಎಂಬ ಭಾವನೆಯಿಂದ ಅವಳನ್ನು ಬೆಳೆಯಿಸುತ್ತ ಬಂದಿದ್ದರು. ತಾಯಿಯು ಇಲ್ಲದುದರಿಂದ ಅವಳಿಗಾಗಬಹುದಾದ ಜೀವನಾಭಾವಗಳೆಲ್ಲವನ್ನೂ ತಮ್ಮ ಕಲ್ಪನೆಯಿಂದಲೇ ಅಳೆದು ತಿಳಿದು, ಅವಳ ಬೆಳವಣಿಗೆಗೆ, ಸುಖಕ್ಕೆ, ಯಾವ ಬಗೆಯಿಂದಲೂ ಆತಂಕಗಳು ಬಾರದಂತೆ ನೋಡುವದರಲ್ಲಿಯೇ ಹಗಲಿರಳು ಮನಸ್ಸು ಹಾಕುತ್ತಿದ್ದರು. ಅವಳ ಉಡಿಗೆ-ತೊಡಿಗೆ, ತಿಂಡಿ ತಿನಿಸು, ಸ್ವಚ್ಛತೆ, ಅಚ್ಚುಕಟ್ಟುತನ, ಬೇನೆ-ಬೇಸರಿಕೆ ಮುಂತಾದವುಗಳೇ ಅವರ ಜೀವನಸಮಸ್ಯೆಗಳು; ಅವುಗಳನ್ನು ಬಿಡಿಸುವದರಲ್ಲಿಯೇ ಅವರ ಏಕಮೇವ ಅಭಿರುಚಿ; ಸಾರ್ಥಕ್ಯ.

ಶಂಕರಭಟ್ಟರು ಆಜನ್ಮ ಕಲಾವಂತರು. ಆದರೆ ಆ ಕಲಾಪ್ರವೃತ್ತಿಗೆ ಸಾಕಷ್ಟು ವಿಕಾಸಸೌಕರ್ಯವಿಲ್ಲದುದರಿಂದ ಇದ್ದ ಕಲೆಗಳೆಲ್ಲವೂ ಅಂಕುರಾವಸ್ಥೆಯಲ್ಲಿಯೇ ಉಳಿದಿದ್ದವು. ಬಾಡಿ ಒಣಗಿ ಮಾತ್ರ ಹೋಗಿರಲಿಲ್ಲ. ಅವರು ಕಲಿತದ್ದು ನಾಲ್ಕೇ ಇಯತ್ತೆಗಳಾಗಿದ್ದರೂ, ಭಾರತ ಜೈಮಿನಿಗಳನ್ನು ಸುಶ್ರಾವ್ಯವಾಗಿ ಓದುತ್ತಿದ್ದರು. ಯಥಾಶಕ್ತಿ ಅರ್ಥ ಮಾಡಿ ಹೇಳುತ್ತಿದ್ದರು. ಬಾಲಬೋಧ ಲಿಪಿಯನ್ನಾಗಲಿ, ಕನ್ನಡ ಲಿಪಿಯನ್ನಾಗಲಿ, ಮುತ್ತಿನಂತೆ ಬರೆಯುತ್ತಿದ್ದರು. ಉತ್ಥಾನದ್ವಾದಶಿಯ ದಿನ ಊರಲ್ಲಿಯ ಎಲ್ಲ ಬ್ರಾಹ್ಮಣರ ತುಳಸಿಯ ಕಟ್ಟೆಗಳ ಬಣ್ಣ-ಸಾರಣೆಗಳೂ, ಹಂದರ-ತೋರಣಗಳೂ ಇವರಿಂದಲೇ. ಚಿತ್ರಕಲೆಯಲ್ಲಿ ತಲೆಯಿದೆ; ಶಂಭುಲಿಂಗನ ಅಗಸೆಯ ಬಾಗಿಲ ಎಡಬಲದ ಮೋಡಗಳಲ್ಲಿಯ ಕಲ್ಲಿನ ಮಾರುತಿ-ಗಣಪತಿಗಳನ್ನು ಕಟೆದವರು ಇವರೇ. ಕಟ್ಟಿಗೆಯ ಕೆಲಸವನ್ನು ಸಹ ಅವರು ಚೆನ್ನಾಗಿ ಮಾಡುವರು. ವರ್ಷಾನುವರ್ಷ ನಾಗರಪಂಚಮಿಯ ನಾಗಪ್ಪ, ಮಣ್ಣೆತ್ತಿನ ಅಮಾವಾಸ್ಯೆಯಲ್ಲಿಯ ಮಣ್ಣಿನ ಎತ್ತುಗಳು, ಗಣಪತಿಗಳು, ಚಂಗಳಿಕೆವ್ವ— ಎಲ್ಲವನ್ನೂ ಊರಿಗೆಲ್ಲ ಪೂರೈಸುವವರು ಶಂಕರಭಟ್ಟರೇ.

ತಾಯಿಯಿಂದ ಹಾವಿನ, ಚೋಳಿನ, ಮುಡದೋಷದ, ಆಲೀಗುಳ್ಳೆಯ

ಮಂತ್ರಗಳನ್ನು ಕಲಿತುಕೊಂಡಿದ್ದರು. ಸಣ್ಣ ಪುಟ್ಟ ರೋಗಗಳನ್ನು ಕಂಡು ಹಿಡಿಯುವದು, ಗಿಡಮೂಲಿಕೆಯ ಔಷಧೋಪಚಾರ ಮಾಡುವದು ಮುಂತಾದವುಗಳಲ್ಲಿಯೂ ಅವರು ತಲೆ ಹಾಕಿದ್ದರು.

ಅವರು ಊರಲ್ಲಿ ಎಲ್ಲರಿಗೂ ಬೇಕಾಗಿದ್ದರು; ಎಲ್ಲರೂ ಅವರಿಗೆ ಬೇಕಾಗಿದ್ದರು; ಅವರಿಂದ ಒಂದಿಲ್ಲ ಒಂದು ರೀತಿಯಿಂದ ಸಹಾಯ ಹೊಂದದ ಜನರಿದ್ದಿಲ್ಲ; ಅವರಿಗೆ ಸಹಾಯ ಮಾಡಲು ಯಾರೂ ಹಿಂದೆ ಮುಂದೆ ನೋಡುತ್ತಿರಲಿಲ್ಲ; ಮಿತಭಾಷಿಗಳು; ಸ್ವಲ್ಪ ಬಾಯಿಸತ್ತವರೂ ಹೌದು; ಬಾಯಿಗೆ ಬಾಯಿ ಹತ್ತುವದು, ಜಗಳವಾಡುವುದು, ಎಂದರೆ ಅವರ ವೈಜಾನ್ಮನ್ನುವದು. ಅವರ ಸರಳತೆ-ಔದಾರ್ಯಗಳ ದುರುಪಯೋಗ ಮಾಡಿಕೊಂಡು ಅವರನ್ನು ಮೋಸಗೊಳಿಸಿದ ಜನರೂ ಉಂಟು. ಅಂತೆಯೇ ಜನರು ಅವರಿಗೆ ಆಗಾಗ 'ಭೋಳಾಶಂಕರ' ಎಂದೂ ಚೇಷ್ಟೆ ಮಾಡುವರು.

ಗಂಗಾಸಾನಿಗೆ ಶಂಕರಭಟ್ಟರಲ್ಲಿ ಬಹಳ ವಿಶ್ವಾಸ; ಅವರ ಬಗ್ಗೆ ಬಹಳ ಆದರ. ಈಕೆಯ ನಡಾವಳಿ, ದೇವನಿಷ್ಠೆ, ಔದಾರ್ಯ, ಗಳಿಬಿಳಿ—ಮುಂತಾದವುಗಳ ಮೂಲಕ ಅವರಾದರೂ ಈಕೆಯನ್ನು ಆದರಿಸುತ್ತಿದ್ದರು. ಈಕೆಯ ಮಧುರಕಂಠ, ಶಾಸ್ತ್ರೋಕ್ತ ಗಾಯನ ಪದ್ಧತಿ, ನೃತ್ಯಕಲೆ—ಇವೆಲ್ಲವುಗಳನ್ನು ಮನಮುಟ್ಟಿ ಮೆಚ್ಚಿದ್ದರು. ಇವರ ಮನೆಯಲ್ಲಿ ಆಕೆಯ ಬಳಕೆ, ಸಲಿಗೆ, ಬಹಳ. ತಾಯಿಯನ್ನು ಕಳೆದುಕೊಂಡ ಸುಭಗೆಯನ್ನು ಕಂಡರೆ ಗಂಗಾಸಾನಿ ಬಿದ್ದು ಸಾಯುವಳು; ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ತಾಸುಗಟ್ಟಲೆ ಹರಟೆ ಹೊಡೆಯುವಳು; ಹೇಳಲು ಹಗುರಾದ ಸಣ್ಣ ಪುಟ್ಟ ಹಾಡುಗಳನ್ನು ಕಲಿಸಿಕೊಡುವಳು; ಹುಡಿಗೆಗೆ ಮನೆಯಲ್ಲಿ ಬಹಳ ಕೆಲಸವಾದಾಗ ತಾನು ಮಾಡಬಹುದಾದ ಎಲ್ಲ ಕೆಲಸವನ್ನೂ ಮಾಡಿಕೊಡುವಳು; ಇದನ್ನೆಲ್ಲ ನೋಡಿ ಶಂಕರಭಟ್ಟರು "ಗಂಗಾಸಾನೀ, ನೀನು ನನ್ನ ತಂಗಿಯಾಗಿದ್ದರೆ ಎಷ್ಟು ಚೆನ್ನಾಗಿತ್ತು!" ಎನ್ನುವರು.

ಹೂವಿನಂತೆ ಜೋಪಾನ ಮಾಡಿದ ಸುಭಗೆಯ ಮದುವೆಯನ್ನು ಅಷ್ಟು ಬೇಗನೆ ಮಾಡುವ ಮನಸ್ಸು ನಿಜವಾಗಿಯೂ ಶಂಕರಭಟ್ಟರಿಗೆ ಇರಲಿಲ್ಲ. ಹೆಂಡತಿಯನ್ನು ಕಳೆದುಕೊಂಡಂದಿನಿಂದ ಮನೆಯೆಲ್ಲ ಭಣಭಣವೆನ್ನುತ್ತಿರುವ ಸಮಯದಲ್ಲಿ, ಎರಳೆಯ ಮರಿಯಂತೆ ಮನೆತುಂಬ ಆಡುವ ಸುಭಗೆ ಮನೆ

ಗೊಂದು ಅಲಂಕಾರವಿದ್ದಂತೆ ಇದ್ದಳು. ಲಗ್ನವಾದ ಕ್ಷಣವೇ ಅವಳು ಹೆರವರ ಸೊತ್ತಾಗುವಳೆಂದೂ, ಗಂಡನ ಮನೆಯವರು ಅವಳನ್ನು ಯಾವ ಕ್ಷಣಕ್ಕಾದರೂ ಕರೆದುಕೊಂಡು ಹೋಗಬಹುದೆಂದೂ, ಆಗ ಆ ಮನೆಯಲ್ಲಿ ಹೆಂಡತಿ-ಮಕ್ಕಳಿಲ್ಲದೇ ತಾವೊಬ್ಬರೇ ಗೂಗೆಯಂತೆ ಕಾಲ ಕಳೆಯಬೇಕಾಗುವ ದೆಂದೂ, ಅವರು ಹೆದರಿದ್ದರು. ಆದರೂ ಎಷ್ಟೆಂದರೂ ಹೆಣ್ಣು ಹೆರವರ ಸೊತ್ತೇ. ಇಂದಿಲ್ಲ ನಾಳೆ ಅವಳು ಎರಡನೆಯವರ ಮನೆಗೆ ಹೋಗಲೇ ಬೇಕು. ಕಟ್ಟೆಯ ಕಲ್ಲನ್ನೊಮ್ಮೆ ಕಟ್ಟೆಗೆ ಕೂಡಿಸಿಬಿಟ್ಟರೆ, ದೊಡ್ಡದೊಂದು ಚಿಂತೆ ದೂರಾಗುವದು— ಎಂದೆಂದು ಲಗ್ನದ ಕಡೆಗೆ ಮನಸ್ಸು ಹಾಕಿದ್ದರು. ಧರ್ಮನಿಷ್ಠರಾದ ಅವರ ದೃಷ್ಟಿಯಲ್ಲಿ ಮಗಳನ್ನು ಎಂಟನೆಯ ವರುಷದ ಲ್ಲಿಯೇ ಧಾರೆಯೆರೆದು ಕೊಡದ್ದು ದೊಡ್ಡ ಅಪರಾಧವೂ ಆಗಿದ್ದಿತು. ಆದುದ ರಿಂದಲೇ ಮಗಳು ಮೈನೆರೆಯುವದರಲ್ಲಿಯೇ ಗಡಿಬಿಡಿ ಮಾಡಿ, ಕಷ್ಟಬಟ್ಟು ಹುಡುಕಿ ಹುಡುಕಿ ವರನನ್ನು ನಿಶ್ಚಯಿಸಿ ಮದುವೆಯ ಕೆಲಸವನ್ನು ಸಾಂಗ ವಾಗಿ ವಿಜೃಂಭಣೆಯಿಂದ ನೆರವೇರಿಸಿದ್ದರು. ಗಂಗಾಸಾನಿ ಮೊದಮೊದಲು ಅಷ್ಟು ಬೇಗನೆ ಆ ಹಸುಗೂಸಿನ ಕೈಗೆ ಬೇಡಿಗಳನ್ನು ಹಾಕಬಾರದಾಗಿ ಅವ ರನ್ನು ಪರಿಪರಿಯಿಂದ ಬೇಡಿಕೊಂಡಿದ್ದಳಾದರೂ, ಶ್ರೀಕಂಠಶಾಸ್ತ್ರಿಗಳ ವರ್ಚ ಸ್ಸಿಗೆ ಒಳಗಾದ ಶಂಕರಭಟ್ಟರ ದೃಢನಿಶ್ಚಯಕ್ಕೆ ತಲೆವಾಗಿ, ಮನೆಯ ಯಜಮಾನಿಯಂತೆ ತಿಂಗಳುಗಟ್ಟಲೆ ಲಗ್ನಕ್ಕೆ ಸೌರಿಸಿ, ಲಗ್ನದಲ್ಲಿಯೇ ತನ್ಮಯಳಾಗಿ, ಲಗ್ನಸಮಯದಲ್ಲಿ ಹೃತ್ಪೂರ್ವಕವಾಗಿ ಮದುಮಕ್ಕಳನ್ನು ಹರಸಿದ್ದಳು. ಅವಳ ಕೈಯಲ್ಲಿಯ ಮಂತ್ರಾಕ್ಷತೆಗಳು ಮದುಮಕ್ಕಳ ತಲೆಯ ಮೇಲೆ ಉದುರಿದಾಗ, ಅವಳ ಅಂತರಾಳದ ಹೆಣ್ತರುಳು 'ತಾಯಿಯನ್ನು ಕಳೆದುಕೊಂಡ ಪರದೇಶಿ ಎಲ್ಲಿಯಾದರೂ ಸುಖದಿಂದ ಇರಲಿ' ಎಂದು ಕಣ್ಣಳೊಳಗಿಂದ ಎರಡು ಹಸಿಮುತ್ತುಗಳನ್ನು ಉದುರಿಸಿದ್ದಿತು.

## ೬

ಸುಭಗೆಯ ದುರದೃಷ್ಟದ ಸುದ್ದಿಯಿಂದ ಬೆಟ್ಟದ ಕಲುಕಿದ ಜೀವನ ಪ್ರವಾಹವು, ದಿನ-ದಿನಗಳೂ ಉರುಳಿ ಹೋದಂತೆ, ಮತ್ತೆ ತಿಳಿಯಾಗಿ,

ಪ್ರಶಾಂತವಾಗಿ, ಉಲ್ಲಸಿತವಾಗಿ ಹರಿಯಹತ್ತಿತು. ಶಂಕರಭಟ್ಟರೊಬ್ಬರು ಮಾತ್ರ, ತಮ್ಮ ಮಗಳ ಸುಖದ ಮೊಗ್ಗೆ ಹೂವಾಗದೆಯೇ ಕಳಚಿ ಬಿದ್ದು, ಅವಳ ದೈವವನ್ನು ಮುಕ್ಕಮಾಡಿದುದಕ್ಕೆ, ಹಗಲಿರುಳು ಕೊರಗಹತ್ತಿದ್ದರು. ಆ ಚಿಂತೆ ಅವರನ್ನು ಬೆನ್ನುಬಿಡದೆ ಮಿದುಳನ್ನೂ ಹೃದಯಕುಸುಮನ್ನೂ ಕಡಿಯಹತ್ತಿತು. ಚಿಂತೆಯಿಂದ ಪಾರಾಗಲು ಶಂಭುಲಿಂಗನ ಪೂಜೆಯಲ್ಲಿಯೋ, ಪುರಾಣ-ಪಾರಾಯಣಗಳಲ್ಲಿಯೋ ಹೊಲಗೆಲಸದಲ್ಲಿಯೋ ಇವೆಲ್ಲವೂ ಇಲ್ಲದಾಗ, ತಮಗೆ ಬರುತ್ತಿದ್ದ ಕೈಗಾರಿಕೆಯ ಕೆಲಸದಲ್ಲಿಯೋ ಕಾಲ ಕಳೆಯುತ್ತಿದ್ದರು.

ಒಮ್ಮೆ ಶಂಕರಭಟ್ಟರು ನಡುಮನೆಯಲ್ಲಿ ಶ್ರೀಕಂಠಶಾಸ್ತ್ರಿಗಳಿಗಾಗಿ ತಯಾರಿಸುತ್ತಲಿದ್ದ ಕಟ್ಟಿಗೆಯ ಖುರ್ಚಿಯೊಂದರ ಕಾಲುಗಳನ್ನು ಜಂತ್ರಕ್ಕೆ ಹಚ್ಚಿದ್ದರು. ನೆರೆಮನೆಯ ಅಗಸರ ಸಂಗನು ತನ್ನ ಎರಡೂ ಕಾಲ್ಗಳನ್ನು ಜಂತ್ರದ ಚೌಕಟ್ಟಿಗೆ ಮೀಟಿ ಅದರ ತೊಗಲಿನ ಹುರಿಯನ್ನು ಎರಡೂ ಕೈಗಳಿಂದ ಜಗ್ಗುತ್ತಿದ್ದನು.

ಖುರ್ಚಿಯ ಕಾಲು ಗಿರಿಗಿರಿ ತಿರುತಿರುಗಿದಂತೆ, ಶಂಕರಭಟ್ಟರ ಕೈಯಲ್ಲಿಯ ಉಳಿಯ ಮೊನೆ ತಿರುಗುವ ಕಾಲಿಗೆ ಮುಟ್ಟಿ ಮುಟ್ಟಿದಂತೆ, ಕಾಡು ಕಟ್ಟಿಗೆಯಲ್ಲಿ ಗೆರೆಗಳು, ಬಳೆಗಳು, ಗೋಲಗಳು ಒಡಮೂಡಿದಂತೆ, ಶಂಕರಭಟ್ಟರ ಮನವು ಅರಳುತ್ತಿದ್ದಿತು; ಅರಳಿದ ಮನ ಮೊಗವನ್ನು ಹಿಗ್ಗಿಸುತ್ತಿದ್ದಿತು; ಕಣ್ಣುಗಳನ್ನು ಅರಳಿಸುತ್ತಿದ್ದಿತು. ನಡುನಡುವೆ ಕೆಲಸದಲ್ಲಿ ತೊಡಗಿದ ಸುಭಗೆ ಕಣ್ಮುಂದೆ ಹಾಯ್ದಾಗ, ಅವಳ ಭಣಗುಟ್ಟುವ ಕೊರಳು-ಹಣೆಗಳನ್ನು ನೋಡಿದಾಗ, ಮತ್ತೆ ಮನ ಮುದುಡುತ್ತಿದ್ದಿತು.

ದಣಿದ ಸಂಗನು ಒಂದು ನಿಮಿಷ ಕೆಲಸ ನಿಲ್ಲಿಸಿ ಅಂಗಿಯ ಕಿಸೆಯೊಳಗಿಂದ ಬಾಡಿದ ಅರ್ಧ ವೀಳೆಯ ಎಲೆಯನ್ನೂ ಒಂದು ಅಡಿಕೆಯ ಚೂರನ್ನೂ ಹೊರಗೆ ತೆಗೆದು, ಕೈಯ ಹಚ್ಚೆರಳಿನಿಂದ ಬದಿಯಲ್ಲಿಯೇ ಬಿದ್ದ ಒಡಕು ಕನ್ನಡಿಯ ಸುಣ್ಣದ ಡಬ್ಬಿಯೊಳಗಿಂದ ಸುಣ್ಣ ತೆಗೆದುಕೊಂಡ. ಶಂಕರಭಟ್ಟರೆಂದರು :

“ ಸಾಕಾತೇನಪಾ ಸಂಗಪ್ಪ ? ಯಾಕೋ, ಕಣ್ಣ್ಯಾಕೊ ಭಾಳ ಕೆಂಪಾಗ್ಯಾವ ? ”

"ಕಣ್ರೀ ? ಹೌದ್ರಿ; ನಿನ್ನೆ ರಾತ್ರಿ ನಿದ್ದೀನ ಆಗಿಲ್ಲ. ಹುಬ್ಬಳ್ಳಿಗೆ ಹೋಗಿದ್ವಿರಿ, ನಾನೂ ಶಟ್ರ ಶಂಕ್ರೆಪ್ಪಾ ಅವರೂ ಕೂಡಿ, ನಾಟಗಾ ನೋಡಾಕ."

"ಯಾವ ನಾಟಗೋ ?"

"ಗದಿಗಿನ ಕಂಪ್ನಿ ಬಂದೈತಲ್ರಿ, ಗೊತ್ತಿಲ್ರೆ ನಿಮುಗ? ನಿನ್ನೆ ಪಾದಕಾ ಪಟ್ಟಾಭಿಷೇಕಾ ಇಟ್ಟಿದ್ರು. ಅಲಾಲಾ, ಏನು ಜನಾನ್ರಿ ಅದು! ರೊಕ್ಕಾ ಹೀರಿಬಿಟ್ಟಾ ನೋಡ್ರಿ. ನಮ್ಮೂರಿಂದಾನೂ ಬಾಳ ಜನ ಹೋಗಿತ್ರಿ! ನಾಟಕಾ ಅನಬೇಕು— ಅದಕ ನೋಡ್ರಿ. ಏನು ಪಡದೇ, ಏನು ಡ್ರೆಸ್ಸು, ಏನು ವಸ್ತ್ರಾ....ಛೇ ಯಾದ್ರಾಗೂ ತಗಿಯಾಂಗಿಲ್ನೋಡ್ರಿ....ಆ ಹುಡ್ಗ ಬರತನ ಪಾಲ್ಟು ಮಾಡಿದಾವಾ ಫಸ್ಟು ನೋಡ್ರಿ....ಅವ ರಥಾ ಹತಿಗೊಂಡು ಮನೀಗೆ ಬರತಿಗೆ ರಾಮು ಅಡವಿಗೆ ಹೋಗ್ಯಾನ ಅಂತ ಕೇಳಿದ ಕೂಡ್ಲೇ, ಕೈಕೇ ಸೋಗು ಮಾಡಿದನ್ನ ಫಜೀತೀ ಮಾಡಿ ಬಿಟ್ಟಾ ಅವ. ರಾಮುನ್ನ ಹುಡಕಾಕ ಅಂತ ಅಡಿವ್ಯಾಗೆಲ್ಲ ಹಾಡು ಹೇಳಿಕೊಂತ ಅಳ್ಳಿಕ್ಕೆ ಹತ್ತಿದ್ರ ನೋಡಾಕ ಬಂದವರೆಲ್ಲಾ ಗೋಳ್ಯಾಡಾಕ ಹತ್ತಿದ್ರು ನೋಡ್ರಿ!"

ರಸಿಕರಾದ ಶಂಕರಭಟ್ಟರಿಗೆ ಸಂಗನ ವೃತ್ತಾಂತನಿವೇದನ ರುಚಿಸಿತು. ಉಸುಕಿನ ಹಾಳಿಯಿಂದ ಜಂತ್ರಕ್ಕೆ ಹಿಡಿದ ಖುರ್ಚಿಯ ಕಾಲನ್ನು ತಿಕ್ಕಿತಿಕ್ಕಿ ನುಣುಪು ಮಾಡುತ್ತ ಅವರೆಂದರು :

"ಇನ್ನೂ ಎಷ್ಟು ದಿನ ಇರತದ, ಸಂಗಪ್ಪ, ಅದು ?"

"ನಾಟಕದ ಮ್ಯಾನೇಜರಿ ಭಾಳ ಹರೇಮಿ ಅದಾನಂತ್ರಿ. ಇದೇ ಕಡೀ ಆಟ ಕಡೀ ಆಟ ಅಂತಾನ ಹದಿನೈದು ದಿನ ಒಂದ ಸವನ ಅದ ನಾಟಗಾನ ಆಡಾಕ ಹತ್ಯಾನ. ಆದ್ರ ತಿಕೀಟ ಸಿಗಾಂಗಿಲ್ಲ. ನಮುಗೆಲ್ಲರಿಗೂ ಶ್ಯಾನಬೋಗ್ರ ಶಿವಪ್ಪನೋರು ತಲೀಗೆ ನಾಕು ನಾಕು ಆಣೆ ಹೆಚ್ಚಿಗೆ ಕೊಟ್ಟು 'ಬ್ಲ್ಯಾಕು' ಮಾಡಿ ತಂದ್ರು."

"ಹಂಗಾರ ಇನ್ನೊಮ್ಮೆ ಹೋಗಿ ಬರೋಣ ನಡೀ ಸಂಗಪ್ಪ, ನಾನೂ ಬರತೀನಿ. ನಾಳೆ ಹೋಗೋಣೇನು ಹುಬ್ಬಳ್ಳಿಗೆ ?"

"ಅಂದಂಗ ನಿಮುಗೊಂದು ಮಾತು ಹೇಳೋದು ಮರೆತಿನ್ರಿ. ನಿನ್ನಿನ ನಾಟಗಾ ಶಿವಪ್ಪನೋರಿಗೂ ಶಂಕ್ರಪ್ಪಗೂ ಎಲ್ಲಾರಿಗೂ ಪಟಾಯಿಸಿತು. ಅವರೂನೂ ಪಾದಕಾಪಟ್ಟಾಬಿಷೇಕ ನಾಟಗಾನ ಕಟ್ಟಿ ಈ ಊರಾಗ ಒಮ್ಮೆ ಆಡಬೇಕು ಅಂತಾ ಮಾಡ್ಯಾರ. ನಿಮ್ಮನ್ನ ಕೇಳಾಕ ಬರ್ಗೋರದಾರ ನಾಟಗಾ

ಕಲಸತೀರೇನು ಅಂತ. ಆಯಿತಾರ ಮತ್ತ ಎಲ್ಲಾರೂ ಕೂಡಿ ಹೋಗೋರ ದಾರ ನಿಮನ್ನೂ ಕರಕೊಂಡು. ಶಿವಪ್ಪನೋರು ರಾಮನ ಪಾಲ್ಟು ಮಾಡ ತಾರಂತ; ಶಂಕ್ರೆಪ್ಪ ದಶರತ ಆಗಾಕ ತಯಾರದಾನ; ಮಾಸ್ತರು ಕೈಕಿ ಆಗ ತಾರಂತ; ಅವರಿಗೊಪ್ಪತೈತಿ ನೋಡ್ರಿ; ದನಿ'ನೂ ನೆಟ್ಟಗೈತಿ. ಮತ್ತ ಜೋಸರ ಶೀನೂ ಭರತಾಗಾಕ ಲಾಯಿಕು ಅದಾನ. ಶಂಕ್ರಭಟ್ರು, ನಾಟಗಾ-ಪಾಟಗಾ ಮಾಡಿದ್ರು ಈ ಪಟ್ಟು ನನ್ನ ಬಿಡಬ್ಯಾಡ್ರಿ."

ಶಂಕರಭಟ್ಟರು ಹಿಂದೆ—ಬಹಳ ದಿನಗಳ ಹಿಂದೆ— ಊರ ತರುಣರಿಗೆ ಬೈಲಾಟಗಳ ಕತೆಗಳನ್ನು ಕಲಿಸಿ ಆಡಿಸಿದ್ದುದು ಊರ ತುಂಬ ವಿದಿತವಿದ್ದಿತು. ನಿನ್ನೆಯ ದಿನದ ನಾಟಕ ನೋಡಿದ ತರುಣರೆಲ್ಲರೂ ಹುರುಪುಗೊಂಡಿದ್ದರು. ಹೇಗಾದರೂ ಮಾಡಿ ಶಂಕರಭಟ್ಟರಿಗೆ ಗಂಟು ಬಿದ್ದು ಅದೇ ನಾಟಕವನ್ನು ತಾವೂ ಕೂಡಿಸಬೇಕೆಂದು ಎಲ್ಲರೂ ನಾಟಕ ಬಿಟ್ಟ ಮೇಲೆ ಹುಬ್ಬಳ್ಳಿಯ ಸ್ಟೇಶನ್ನಿನಲ್ಲಿ ಚಹ ಕುಡಿಯುವಾಗಲೇ ನಿಶ್ಚಯ ಮಾಡಿಕೊಂಡಿದ್ದರು.

ಸಂಗಪ್ಪನ ಹರಟೆ ಶಂಕರಭಟ್ಟರ ತಲೆಯಲ್ಲಿ ಹೊಸದೊಂದು ಗುಂಗನ್ನು ತುಂಬಿತು. ಸುಭಗೆಯು ವಿಧವೆಯಾದಂದಿನಿಂದ ಅವರಿಗೆ ರಾತ್ರಿ ಬೇಗ ನಿದ್ರೆಯೇ ಹತ್ತುತ್ತಿರಲಿಲ್ಲ. ಸರಿರಾತ್ರಿಯಾದಂತೆ ಹಾಸಿಗೆಯ ಮೇಲೆ ಹೊರಳಿ ಹೊರಳಿ ಬೇಜಾರಗೊಳ್ಳುತ್ತಿದ್ದರು; ಚಿಂತೆಯಿಂದ ವಿಹ್ವಲಗೊಳ್ಳುತ್ತಿದ್ದರು. ಎಷ್ಟೋ ಸಲ ಬೆಳ್ಳಿ ಮೂಡಿದ ಮೇಲೆ ಹೊರಗೆ ಹೋಗಿ ಬಂದು ನಸುಕಿನಲ್ಲಿ ಸ್ವಲ್ಪ ಜಂಪು ಹತ್ತಿಸಿಕೊಂಡದ್ದೂ ಉಂಟು.

ಊರ ಹುಡುಗರಲ್ಲಿ ನಾಟಕ ಕಟ್ಟಬೇಕೆಂಬ ಉಮೇದಿ ತುಂಬಿ ಕೊಂಡಂತೆ ತೋರುತ್ತದೆ. ಬೈಲಾಟವನ್ನು ಕಟ್ಟಿ ಕಲಿಸಿ ನಾಲ್ಕು ಜನ ಸೈ ಅನ್ನುವಂತೆ ಆಡಿಸಿ ತೋರಿಸಿದವರಿಗೆ ನಾಟಕವೇನೂ ಬಹಳ ಜಾಣತನದ, ಶ್ರಮದ, ಕೆಲಸವಾಗಲಿಕ್ಕಿಲ್ಲ. ಬಹಳವಾದರೆ, ಮೊದಲ ಸಲ, ಆ ಕಲೆಯಲ್ಲಿ ಅನುಭವವುಳ್ಳ, ಬಲ್ಲಿದನ ಸಹಾಯ ಕೋರುವ ಪ್ರಸಂಗ ಬಂದೀತು. ಸ್ವಲ್ಪ ರೂಢಿಯಾದರೆ ಅದೇನು ಅಂಥ ದೊಡ್ಡ ಕಲೆ? ಇದರಿಂದ ಇರುಳಿನಲ್ಲಿ ಮನಸ್ಸು ತಾಲೀಮಿನ ಕೆಲಸದಲ್ಲಿ ತೊಡಗಬಹುದು. ಚಿಂತೆಯನ್ನು ಮರೆ ಯಲು ಅವಕಾಶ ಸಿಗಬಹುದು. ಸುಭಗೆಗೆ ಸಹ ಒಂದು ಬಗೆಯಿಂದ ಮನ ರಂಜನೆಯಾಗಬಹುದು. ಈ ವಿಚಾರಗಳು ಶಂಕರಭಟ್ಟರ ಮನಸ್ಸಿಗೆ

ನಾಟಿದವು. ಯಾವದೊಂದು ಗುಂಗು ಶಂಕರಭಟ್ಟರಲ್ಲಿ ಮನೆಮಾಡಿತೆಂದರೆ, ಅದು ಬೇಗ ಹೊರಗೆ ಹಾರಿ ಹೋಗುವದು ಕಠಿಣ. ಅದರ ಬೆನ್ನು ಹತ್ತಿ ತತ್‍ಕ್ಷಣ ಕಾರ್ಯಪ್ರವೃತ್ತರಾಗುವದು ಅವರ ಸ್ವಭಾವ.

೭

ವರ್ಷಕ್ಕೊಂದು ಸಲ ಜೇಷ್ಠ ಶುದ್ಧ ಪೌರ್ಣಿಮೆಯ ದಿನ ಶಂಭುಲಿಂಗನು ರಾಕ್ಷಸರ ಸಂಹಾರಕ್ಕಾಗಿ ಯುದ್ಧಕ್ಕೆ ಹೊರಡುವದು ಹಿಂದಿನಿಂದ ನಡೆದು ಬಂದ ಪೌರಾಣಿಕ ಸಾಂಪ್ರದಾಯ. ಆ ದಿನ ಶಂಭುಲಿಂಗನು ತನ್ನ ಸೇನಾ ಸನ್ನದ್ಧನಾಗಿಯೇ ಯುದ್ಧಕ್ಕೆ ಹೊರಡುವನು. ಈ ದೇವರ ಭಕ್ತವರ್ಗವೇ ಅವನ ಸೇನಾಗಣ. ಈ ಸೇನಾಗಣವು ಒಂದು ವಿಶಿಷ್ಟವಾದ ಉಡುಪನ್ನು ಧರಿಸುವದು; ಹಿಂಬಡದ ವರೆಗೆ ಜೋತು ಬಿದ್ದ ಉದ್ದನ್ನ ಕೋರಿಯ ಅಂಗಿ; ಆ ಕಂಬಳಿಯ ಅಂಗಿಯ ಬೆನ್ನ ಮೇಲೆ ಬಿಳಿಯ ತ್ರಿಶೂಲಾಕಾರ; ತಲೆಯ ಮೇಲೆ ಮುರಿಗೆ-ಮುರಿಗೆಯಾಗಿ ಸುತ್ತಿದ ಮುಂಡಾಸದ ಪೆಂಡೆ; ಎಡದ ಬಗ ಲಲ್ಲಿ ಜೋತಾಡುವ ಕೃಷ್ಣಾಂಜನದ ಕಕ್ಕಸ; ಅದರಲ್ಲಿ ದೇವರ ಭಂಡಾರ; ಅದರ ಮೂಲೆ-ಮೂಲೆಗೆ ಸಣ್ಣ ಸಣ್ಣ ಗಂಟೆ-ಗೆಜ್ಜೆಗಳು; ಹೆಗಲ ಮೇಲೆ ಹಿತ್ತಾಳಿಯ ಸರಪಳಿಗಳಿಂದ ಜೋತಾಡುವ ಡೋಣಿ, ಗಂಟೆಗಳು; ಎಡದ ಕೈಯಲ್ಲಿ ಉದ್ದನ್ನ ಕಬ್ಬಿಣದ ತ್ರಿಶೂಲ; ಬಲದ ಕೈಯಲ್ಲಿ ಡಮರುಗ. ಈ ಸೇನಾನಿಯು ಹಣೆಯ ಮೇಲೆ ಗಂಧದ ಅಡ್ಡಗೆರೆ ಕೊರೆದುಕೊಂಡಿರುವನು; ಮೇಲೆ ಹಣೆಯ ತುಂಬ ಭಂಡಾರವನ್ನೂ ಬಡಿದುಕೊಂಡಿರುವನು. ಈ ಕಾಲಾಳಿಗೆ ಒಗ್ಗಯ್ಯ ಎಂದೂ ಹೆಸರು.

ಪೌರ್ಣಿಮೆ ಒಂದು ತಿಂಗಳಿರುತ್ತಲೇ ದಂಡು ತಂಡ-ತಂಡವಾಗಿ ದೇಶದ ಮೂಲೆ-ಮೂಲೆಯಿಂದ ಬೆಟ್ಟಕ್ಕೆ ಬರಹತ್ತುವದು. ಹಗಲು ರಾತ್ರಿ ದೇವರ ಗುಡಿಯ ಬಾಗಿಲು ಕಾಯುವದು. ಬೆಳ್ಳಿ ಮೂಡುವ ವರೆಗೆ ಈ ವಗ್ಗಯ್ಯಗಳು ಗುಡಿಯ ಪವಳಿಯಲ್ಲಿ ಗುಂಪು-ಗುಂಪುಗಟ್ಟಿಕೊಂಡು, ದುಂಡಗೆ ಕುಳಿತು ಡಮರು-ಗಂಟೆಗಳ ತಾಳ-ಮೇಳದೊಡನೆ ಶಂಭುಲಿಂಗನ ಸೋಬಾನ

ಹೇಳುವರು. ಬೆಳ್ಳಿ ಮೂಡಿದಾಕ್ಷಣ ಇವರೆಲ್ಲರೂ ವಿಶ್ರಮಿಸುವರು. ಆಗ ಪಹರೆಯ ಗೊರವನು ಗುಡಿಯ ಸುತ್ತಲೂ ಪಹರೆ ಮಾಡುವನು.

ಹೊರಗಿನಿಂದ ಬರುವ ದಂಡು ಪೌರ್ಣಿಮೆಯ ಸುಮಾರಕ್ಕೇ ವೇಳೈಸುವದಾದರೂ, ಜೇಷ್ಠ ಶುದ್ಧ ಪ್ರತಿಪದೆಯಿಂದಲೇ ಬೆಟ್ಟದ ಜನರು ಗುಡಿಯ ಬಾಗಿಲು ಕಾಯಹತ್ತುವರು.

ಆ ದಿನ ರಾತ್ರಿ ಶಂಭುಲಿಂಗನ ಮಂಗಳಾರತಿಯ ಸನ್ನೆಯ ನಗಾರಿಯಾದ ಕ್ಷಣವೇ ಸಂಗಪ್ಪ ಗಡಿಬಿಡಿಯಿಂದ ವಗ್ಗಯ್ಯನ ಪೋಷಾಕು ಹಾಕಿಕೊಂಡು ಗುಡಿಯ ಬಾಗಿಲು ಕಾಯಲು ಹೊರಟ. ಹೋಗುವಾಗ ದಾರಿಯಲ್ಲಿಯೇ ಕೂಗಿ ಕೂಗಿ ಮಾಸ್ತರು, ಶಾನಬೋಗರ ಶಿವಪ್ಪನವರು, ಶೆಟ್ಟರ ಶಂಕ್ರಪ್ಪ, ಜೋಯಿಸರ ಸೀನೂ ಮೊದಲಾದವರನ್ನು ಶಂಕರಭಟ್ಟರು ಎಲ್ಲರಿಗೂ ಗುಡಿಗೆ ಬರುವದಾಗಿ ಹೇಳಿರುವರೆಂದೂ ನಾಟಕದ ಬಗ್ಗೆ ಮಾತುಕತೆಯಾಡುವದಿದೆಯೆಂದೂ ಹೇಳಿ ಎಬ್ಬಿಸಿಕೊಂಡು ಹೊರಟ. ಮಂಗಳಾರತಿಯ ನಂತರ ಗುಡಿಯು ಬೀಗಮುದ್ರೆಯಾದ ಮೇಲೆ, ಶಿವಪ್ಪನವರ ಹೇಳಿಕೆಯ ಪ್ರಕಾರ ಒಂದೆರಡೇ ಸೋಬಾನಗಳನ್ನು ಹೇಳಿ, ಬಾಗಿಲು ಕಾಯುವ ಶಾಸ್ತ್ರ ಮುಗಿಸಿದರು. ಆಮೇಲೆ ನಾಟಕದ ಸಂಬಂಧಿ ಚರ್ಚೆ ಸುರುವಾಯಿತು: ಎರಡು ನಿಮಿಷ ಎಲ್ಲೆಡೆ ಶಾಂತತೆ ಪಸರಿಸಿತು. ಪಾಲಕಿಯನ್ನಿಟ್ಟ ಕಟ್ಟೆಯ ತುದಿಗೆ ಹೆಗಲ ಮೇಲೆ ಧೋತರದ ಚುಂಗನ್ನು ಹೊದ್ದುಕೊಂಡು ಕುಳಿತ ಮಾಸ್ತರರು ತಲೆಯ ಮೇಲಿನ ಗಾಂಧಿಯ ಟೊಪ್ಪಿಗೆಯನ್ನು ಕೆಳಗಿಟ್ಟು, ಕ್ರಾಪಿನ ಮೇಲೆ ಕೈಯಾಡಿಸಿಕೊಂಡು ಏನನ್ನೋ ಹೇಳುವವರಿದ್ದರು. ಶೆಟ್ಟರ ಶಂಕ್ರಪ್ಪ ಮಾಡದಲ್ಲಿಯ ಜಿಗಿಜಿಗಿಯಾದ ಪಣತಿಯ ಮಿಣಿಮಿಣಿ ಉರಿಯುವ ದೀಪಕ್ಕೆ ಬೀಡಿಯನ್ನು ಹಚ್ಚುತ್ತಲಿದ್ದ. ಅಷ್ಟರಲ್ಲಿ ಮುಂಡಾಸವನ್ನು ತಲೆಗಿಂಬಾಗಿರಿಸಿಕೊಂಡು ನೆಲದ ಫರಸಿಯ ಮೇಲೆ ಅಡ್ಡಾಗಿದ್ದ ಸಂಗಪ್ಪ ಕಿಸಕ್ಕನೆ ನಕ್ಕ. ಅವನ ನಗು ಎಲ್ಲರನ್ನೂ ಗೊಳ್ಳೆಂದು ನಗಿಸಿತು. ಅವನು ನಗುತ್ತಲೇ ಎಂದ: "ಗೌಳೇರ ಎಲ್ಲವ್ವನ್ನ ನೋಡಿದ ಕೂಡಲೆ ನನಗ ನಾಟಗದಾಗಿನ ಆ ಮಂಥರೀ ನೆನಪಾಗತೈತಿ. ಆಕೀನೂ ಈಕೀ ಹಾಂಗ ಬಾಚಾರದಾಳು. ಮಂಥರೀ ಪಾಲ್ಟು ಸುಮ್ಮಕ ಎಲ್ಲವ್ವಗs ಕೊಟ್ಟಬಿಡಬೇಕು!" ಎನ್ನುವದೊಂದೇ ತಡ ಮತ್ತೊಮ್ಮೆ ಎಲ್ಲರಿಗೂ ನಗೆಯು ಸರುವುಗಟ್ಟಿ ಬಂದಿತು.

ಶಂಕರಭಟ್ಟರು ಸಂಗಪ್ಪನ ಚೇಷ್ಟೆಯನ್ನು ಕಿವಿಯ ಮೇಲೆ ಹಾಕಿಕೊಳ್ಳದೇ ಗಂಭೀರವಾಗಿ ಸುರುವು ಮಾಡಿದರು :

" ನನಗಽ ಆ ನಾಟಕಾ ನೋಡಿದಾಗಿನಿಂದಽ ಅದನ್ನಽ ನಾವೂ ಕಟ್ಟಿ ಆಡೇ ತೀರಬೇಕು ಅನಸಲಿಕ್ಕೆ ಹತ್ತೇದ. ಆದರಽ ಬೈಲಾಟ ಕಟ್ಟ್ಯುದಕಽ ನಾಟಕಾ ಕಟ್ಟ್ಯುದಕಽ ಬಿಡತಽದ. ಅದಕ್ಕಂತಽನಽ ಸ್ವಲ್ಪ ಹಿಂದ ಮುಂದ ನೋಡಲಿಕ್ಕೆ ಹತ್ತೇನಿ."

" ನಿನ್ನ ಮನಸಿನ್ಯಾಗ ಏನು ಹೆದ್ರಿಕಿ ಅದ ಅಂಬೋದು ತಿಳೀತು ಬಿಡು ಶಂಕ್ರಣ್ಣಾ. ಪಡದ್ಯಾ ಡ್ರೆಸ್ಸು-ಗಿಸ್ಸು ಬೇಕಾಗತಾವ ಅಂತೀ ಹೌದಲ್ಲೊ? ಅವನೆಲ್ಲ ತರೋದು ನನ್ನ ಕೂಡಿತು." ಎಂದ ಶಾನಭೋಗ ಶಿವಪ್ಪ.

" ಇಷ್ಟಽ ಅಲ್ಲೇನಪ. ಸುರು ಆಗಽತ್ಲೇ ಒಂದು ಕಾಲು-ಪೀಯಾನು ಬೇಕು. ಅದನ್ನೂ ಹ್ಯಾಂಗರ ಮಾಡ್ಯೇವು ಅನ್ನು. ಹ್ಯಾಂಗಾರೂ ದೊಡ್ಡ ಹುಣ್ವೀ ಬಂದಽದ. ಹುಣ್ವೀ ತಲೀಮ್ಯಾಲೆ ನಾವೂ ತಲೀಗೆ ಐವ್ವೈದು ರುಪಾಯಿ ಹಾಕೋಣ. ಪ್ಯಾಟ್ಯಾನ ಜನರ ಕೈಯಾಗೂ ಹಣ್ಣೂ-ಕಾಯಿ ಮಾರಿದ ಹಣ ಇರತಽದ. ಅವರೂ ಪಟ್ಟೀ ಕೊಡಲಿಕ್ಕೆ ಹಿಂದ ಮುಂದ ನೋಡಲಿಕ್ಕಿಲ್ಲ. ನನಗ ದೊಡ್ಡ ಹೆದರಿಕೀ ಅಂದ್ರ, ನಾಟಕದಾನ ಹಾಡಿಂದು. ಅದಕ್ಕೆ ಏನಿಲ್ಲೆಂದ್ರೂ ಸ್ವಲ್ಪರ ಸಂಗೀತಜ್ಞಾನ ಇದ್ದೋರು ಬೇಕು. ನಮ್ಮ ಮೂಡಲ ಪಾಯ ಅಲ್ಲಿ ಹ್ಯಾಂಗ ನಡದೀತು ?"

ಶಂಕರಭಟ್ಟರ ಮಾತು ಸಭೆಯ ಹುರುಪನ್ನು ಸ್ವಲ್ಪ ಕುಗ್ಗಿಸಿತು. ಎಲ್ಲರೂ ಒಬ್ಬರೊಬ್ಬರ ಮೋರೆ ನೋಡಹತ್ತಿದರು. ಸ್ವಲ್ಪ ಹೊತ್ತು ಶಾಂತತೆ. ಆಮೇಲೆ ಮಾಸ್ತರರು ಬಾಯಿ ಹಾಕಿದರು: " ಶಂಕ್ರಭಟ್ಟರಽ ನೀವು ಮನಸು ಮಾಡಿದ್ರ ನಿಮಗ ಏನೂ ಅಸಾಧ್ಯ ಇಲ್ಲ. ಆದರೂ ನೀವು ಹೇಳಿದಾಂಗ ಸಂಗೀತ ಬಲ್ಲೋರು ಒಬ್ರು ಬೇಕು. ಹ್ಯಾಂಗಾರೂ ಇನ್ನ ಎಂಟು-ಹತ್ತು ದಿನ ಪರಿಸಿ ಕೂಡತಽದ; ಏನೂ ಮಾಡಲಿಕ್ಕೆ ಆಗೋದಿಲ್ಲ. ಅಷ್ಟರಾಗ ಮಲ್ಲಾಡದಾಗ ಬಾಳೀಹಣ್ಣು ಕಾಯಿ ತರಲಿಕ್ಕೆ ಹೋದ ಜನಾನೂ ಬರತಾರ. ಹುಣ್ವೆ ಮರುದಿನ ಬಿಟ್ಟದ್ದು ಬಿಟ್ಟು ದುಡ್ಡು ಕೂಡಿಸೋಣ; ಎಲ್ಲಾರೂ ಕೂಡಿ ಹುಬ್ಬಳ್ಳಿಗೆ ಹೋಗಿ ಪೇಟೀ ತರೋಣ. ಬೇಕಾರ ಇವತ್ತ ಪಾರ್ಟಿ ಹಂಚಿಗೊಂಡು ನಮ್ಮ ನಮ್ಮ ಮಾತು ಬಾಯಿಪಾಟು ಮಾಡಲಿಕ್ಕೆ ಹತ್ತೋಣ.

ಇದೆಲ್ಲ ಆಗೋದ್ರಾಗ ಹದಿನೈದು-ಇಪ್ಪತ್ತು ದಿನ ಹೋಗತಾವ. ಅಷ್ಟರಾಗ ನಾವೂ ನೀವೂ ಕೂಡೇ ಹುಡ್ಕಿ ಯಾರನಾರ ಪದಾ ಕಲಸಾಕ ಕರಕೊಂಡು ಬರೋಣ—" ಶಟ್ಟಿ ಶಂಕರಪ್ಪ ನಡುವೆ ಬಾಯಿ ಹಾಕಿ ಮಾತನ್ನು ಮುಂದು ವರಿಸಿದ : "ತಿಂಗಳು-ಎರಡು ತಿಂಗಳ ಮಟ್ಟಿಗೆ ಬೇಕಾರ ಯಾರನಾರ ಸಂಬಳಾ ಕೊಟ್ಟಾದರೂ ತರೋಣ, ಅದರಾಗೇನೈತಿ. ನಾಟಗ ಚಲೋ ಕೂತ್ರ ಶಿವಾಗದ ಜಾತ್ರ್ಯಾಗ ಟಿಕೇಟಿಟ್ಟು ಆಡಿದ್ರ, ಖರ್ಚು ಮಾಡಿದ್ದೆಲ್ಲ ಹಿರದು ಬೀಳತೈತಿ, ಯಾಕ್ರಿ ಮಾಸ್ತರ ?"

"ಹೋ, ಆಗದೇ ಏನ್ರಿ. ಮೊನ್ನೆ ನಮ್ಮ ಕಾನ್‌ಫರನ್ಸಿನಾಗ ನಮ್ಮ ಯೋಳನೇತ್ತಾದ ಹುಡುಗ್ರಿಂದ ಸಂಭಾಷಣಾ ಮಾಡಿಸಿದ್ರ ನಮ್ಮ ಏ. ಓ. ಸಾಹೇಬ್ರೂ ಡೆಪುಟಿ ಸಾಹೇಬ್ರೂ ಹೌದು ಹೌದು ಅಂದ್ರು. ಸಂಗೀತ ಮಾಸ್ತರು ಸಿಗೋತನಕಾ ಬೇಕಾರ ನಾ ಅಷ್ಟರ ಮಟ್ಟಿಗೆ ಪದಾ ಕೂಡಸ ತೇನಿ." ಎಂದು ಅಂದು, ಮಾಸ್ತರರು ಅರೆನಿಮಿಷದ ನಂತರ ತಮಗೆ ಸಂಗೀತ ದಲ್ಲಿ ಗತಿಯಿದೆಯೆಂಬುದನ್ನು ತೋರಿಸುವ ಉದ್ದೇಶದಿಂದ, ಗಂಟಲವನ್ನು ಸರಿಪಡಿಸಿ, ಗುಣುಗುಟ್ಟಹತ್ತಿದರು.

ಕಡೆಗೆ ಆ ದಿನವೇ ನಾಟಕವನ್ನು ಸುರುವು ಮಾಡುವದಾಗಿಯೂ, ಮುಂದೆ ಪರಸ್ಥಳದಿಂದ ಯಾರನ್ನಾದರೂ ಹಾಡುಗಳನ್ನು ಕಲಿಸಲು ತರುವ ದಾಗಿಯೂ ನಿಶ್ಚಯವಾಯಿತು. ಯಾವ ಪಾರ್ಟನ್ನು ಯಾರಿಗೆ ಕೊಡ ಬೇಕೆಂಬ ಬಗ್ಗೆ ಚರ್ಚೆಯಾಗಿ, ಜಗಳವಾಗಿ ಕಡೆಗೆ ಎಲ್ಲವನ್ನು ಹಂಚುವ ದಾಯಿತು. ಸಂಗಪ್ಪನಿಗೆ ದಾಸಿಯ ಪಾರ್ಟು ಸಿಕ್ಕಿದ್ದಕ್ಕೆ ಅವನಿಗೆ ಹೇಳ ಲಾರದಷ್ಟು ಹಿಗ್ಗು. ಕಲ್ಲಿಯ ಮೀಸೆಯ ಅಕ್ಕಸಾಲೀ ರುದ್ರಪ್ಪನಿಗೆ ದಶರಥನ ಪಾರ್ಟು ಕೊಟ್ಟರೆ, ಒಳ್ಳೆ ಒಪ್ಪುವದೆಂಬ ಸಂಗಪ್ಪನ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು.

ಪಾರ್ಟು ಹಂಚುವದಾದ ಮೇಲೆ ಪಾರ್ಟಿನ ಯಾದಿಯನ್ನೂ 'ಪಾದುಕಾಪಟ್ಟಾಭಿಷೇಕ'ದ ಪುಸ್ತಕವನ್ನೂ ದೇವರ ಹೊಸತಿಲ ಮೇಲಿ ಟ್ಟರು. ಜೋಯಿಸರ ಶೀನೂ ಮನೆ-ಮನೆಯಿಂದ ಅರಿಸಿಣ-ಕುಂಕುಮ ತುಪ್ಪದ ದೀಪ ತಂದನು. ಸಂಗಪ್ಪ ಓಡಿಹೋಗಿ ಕಿರಾಣೀ ಅಂಗಡಿಯ ಬರಮುಕ್ಕ ನನ್ನು ಎಬ್ಬಿಸಿ ಒಂದು ಟೆಂಗಿನಕಾಯಿಯನ್ನೂ ಎರಡು ಸೇರು ಮಂಡಕ್ಕಿ

ಯನ್ನೂ ಉದ್ಧರಿ ತಂದನು. ಹೊತ್ತಿಗೆಯ ಪೂಜೆಯನ್ನು ಶಂಕರಭಟ್ಟರೇ ಮಾಡಿದರು. ಉಳಿದವರೆಲ್ಲರು ದುಂಡಗೆ ಕುಳಿತು, ಗಂಟೆಗಳ ನಾಲಿಗೆಯನ್ನು ಗಂಟೆಗೆ ಕಟೆಯುತ್ತ, ಡಮರುಗದ ಮೇಲೆ ಬೆರಳುಗಳಿಂದ ತಾಳಕ್ಕೆ ಸರಿಯಾಗಿ ಬಡೆಯುತ್ತ, ತಾವು ಹಿಂದೆ ಬೈಲಾಟದಲ್ಲಿ ಕಲಿತು ಅರ್ಧಮರ್ಧ ಮರೆತ ಗಣೇಶನ ಸ್ತುತಿಯನ್ನು ಹೇಳಿದರು.

ಆಮೇಲೆ ಅಗಸಾಲೀ ರುದ್ರಪ್ಪ ಕಾಯಿ ಒಡೆದು, ಖೊಬ್ಬರಿಯ ಚೂರು ಮಾಡಿ ಮಂಡಕ್ಕಿಯಲ್ಲಿ ಕೂಡಿಸಿ, ಎಲ್ಲರಿಗೂ ಪನಿವಾರ ಹಂಚಿದನು.

## ೮

"ಗಂಗಕ್ಕಾ, ಏನು ಮಾಡ್ತೀಯೇ, ಊಟಾತೇನು ?" ಎನ್ನುತ್ತ ಸುಭಗೆ ಒಂದು ದಿನ ಪಡಸಾಲೆಯ ಇಕ್ಕಿದ ಬಾಗಿಲನ್ನು ತೆರೆದು ಮನೆಯ ಒಳಹೊಕ್ಕಳು; ತಿರುಗಿ ಬಾಗಿಲ ಹಾಕಿಕೊಂಡಳು.

"ಬಾ, ಕೂಸು, ಕೂತಗೋ, ಈಗ ಬಂದೆ. ಇವತ್ತ ಸೋಮಾರ; ಪಲ್ಲಕ್ಕಿ ಸೇವಾ, ಮಾಡೋದದ, ಎಲೀ ಚಂಚೀ ದಸಿಂದ ಬಣ್ಣಾದ ಅಡಕೀ ಮಾಡತೇನಿ. ಕೂತಗೋ, ಆಗೇ ಹೋತು." ಎಂದು ಉತ್ತರ ಕೊಟ್ಟಳು. ಒಳಗಿನಿಂದಲೇ ಗಂಗಾಸಾನಿ. ಆಕೆ ಶಂಭುಲಿಂಗನ ಪಲ್ಲಕ್ಕಿಯ ಉತ್ಸವದ ಸಮಯದಲ್ಲಿ ದೇವರ ಮುಂದೆ ಇಡಲು ಎಲಿಯಡಕೆಗಳನ್ನು ಅಣಿಮಾಡು ತ್ತಿದ್ದಳು. ಸುಭಗೆ ತನ್ನ ಕೈಯಲ್ಲಿಯ ಹೆಣಿಕೆಯ ದಾರದ ಉಂಡಿಯನ್ನೂ ಸೂಜನ್ನನ್ನೂ ಕೆಳಗೆ ಇಟ್ಟುಕೊಂಡು ಪಡಸಾಲೆಯಲ್ಲಿ ಹಾಸಿದ ಜಮಖಾನಿಯ ಮೇಲೆ ಕುಳಿತುಕೊಂಡಳು. ಮನೆಯಲ್ಲಿಯೇ ಹಾಕಿಕೊಂಡು ಬಂದಿದ್ದ ಅಡಿಕೆಯ ಹೋಳನ್ನು ನುರಿಸುತ್ತ ಆಕೆ ತನ್ನ ದೃಷ್ಟಿಯನ್ನು ನಾಲ್ಕೂ ಕಡೆಗೆ ಚಲ್ಲಿದಳು. ಗಂಗಾಸಾನಿಯು ಪ್ರತಿನಿತ್ಯವೂ ತನ್ನ ಪಡಸಾಲೆಯನ್ನು, ಅದು ಸಣ್ಣದಿದ್ದು ಅಚ್ಚುಕಟ್ಟಾಗಿ ಇಡುವ ಬಗ್ಗೆ ಲಕ್ಷ್ಯಗೊಡುತ್ತಿದ್ದದು ಸುಭಗೆಗೆ ಹೊಳೆಯದಿರಲಿಲ್ಲ. ಒಂದೆಡೆ ಗೋಡೆಯ ಎರಡು ಗೂಟಗಳಿಗೆ ಹಗ್ಗ ಕಟ್ಟಿ ತಾನು ದಿನಂಪ್ರತಿ ಉಪಯೋಗಿಸುತ್ತಿದ್ದ ಸೀರೆ-ಪತ್ತಲಗಳನ್ನು

ಮಡಚಿ ಜೋತುಬಿಟ್ಟಿದ್ದಳು. ಬಡಿಯಲ್ಲಿಯೇ ಗೋಡೆಯ ಕಂಬದಲ್ಲಿ ಬಡಿದ ಮಳೆಗೆ ದೇವರ ಉತ್ಸವದ ಸಮದಲ್ಲಿ ನೃತ್ಯ ಮಾಡುವಾಗ ಕಾಲಿಗೆ ಕಟ್ಟುವವ ಗೆಜ್ಜೆಯ ಸರ ಜೋತಾಡುತ್ತಲಿದ್ದವು. ಆ ಕಡೆಗೆ ತೆರೆದ ಕಿಡಿಕಿಯ ಕೆಳಗಡೆಗೆ ಒಂದು ಕಂಬಳಿಹಾಸಿ ಅದರ ಮೇಲೆ ಸುತ್ತಿದ ಗಾದಿಗಳನ್ನು ಇಟ್ಟಿದ್ದಳು. ಕಿಡಿಕಿಯ ಎಡಗಡೆಯ ಗೂಟದಲ್ಲಿ ವೀಣೆಯೊಂದು ತನ್ನ ಚೀಲದಲ್ಲಿ ಹುದುಗಿಕೊಂಡು ನೇತಾಡುತ್ತಿತ್ತು. ಮತ್ತೊಂದು ಗೋಡೆಯ ಮೇಲಿನ ನಿಲುವುಗನ್ನಡಿ, ಗಣೇಶನ ಮಾಡದಲ್ಲಿಯ ಎಣ್ಣೆ-ಹಣಿಗೆಗಳು ನಾಗೊಂದಿಗೆಯ ಮೇಲಿನ ತಬಲ-ಢಕ್ಕೆಗಳನ್ನು ಬಿಟ್ಟರೆ, ಸುಭಗೆಗೆ ಆ ಪಡಸಾಲೆಯಲ್ಲಿ ಮತ್ತೇನೂ ಕಾಣುತ್ತಿರಲಿಲ್ಲ. ಈ ಎಲ್ಲ ಸಾಮಾನುಗಳು ಎಂದೂ ತಮ್ಮ ಸ್ಥಳಗಳನ್ನು ಬದಲಿಸಿದ್ದುದು ಸುಭಗೆಗೆ ನೆನಪಿಗೆ ಬರಲಿಲ್ಲ. ಒಂದು ಕಡ್ಡಿ-ಕಸರೂ ಉಳಿಯದಂತೆ ಸ್ವಚ್ಛವಾಗಿ ಕಸಗೂಡಿಸಿದ ನೆಲ, ಎಲ್ಲೆಲ್ಲಿಯೂ ಪಸರಿಸಿದ ಶಾಂತತೆ, ಬಣ್ಣದ ಅಡಕೆಗಾಗಿ ಅದೇ ಅರೆದಿದ್ದ ಯಾಲಕ್ಕಿಯ ಸುವಾಸನೆ— ಇವೆಲ್ಲ ಸುಭಗೆಗೆ ಅನಂದವನ್ನು ತಂದವು. ಕಾಲ್ಗಳನ್ನು ಚಾಚಿ ಒಂದರ ಮೇಲೊಂದು ಹಾಕಿಕೊಂಡು, ಗೋಡೆಗೆ ಆತು, ಕೈಗಳನ್ನು ಎದೆಯ ಮೇಲೆ ಕಟ್ಟಿ ಕಣ್ಗಳನ್ನು ಮತ್ತೆ ಮತ್ತೆ ಹೊರಳಿಸಿ ಸಮಾಧಾನಪಟ್ಟಳು. ಕಂಬದ ಮೊಳೆಗೆ ಜೋತಾಡುತ್ತಿದ್ದ ಗೆಜ್ಜೆಗಳ ಮೇಲೆ ಆಕೆಯ ದೃಷ್ಟಿ ಬಿದ್ದಾಗ ಆಕೆಯ ಹೃದಯದಲ್ಲಿ ಒಂದು ಬಯಕೆಯ ತರಂಗವೆದ್ದಿತು. ಅಷ್ಟರಲ್ಲಿ ಗಂಗಾಸಾನಿ ಕೆಲಸ ಮುಗಿಸಿಕೊಂಡು ಕೈ ತೊಳೆದುಕೊಂಡು ಅಂದೇ ತಿಕ್ಕಿ ತುಂಬಿದ ಎಲೆಯಡಿಕೆಯ ಡಬ್ಬಿಯನ್ನು ತಗೆದುಕೊಂಡು ಹೊರಗೆ ಬಂದಳು; ಎಲೆಯಡಿಕೆ ಹಾಕಿಕೊಂಡಳು.

ಆಕೆ ಹತ್ತಿರ ಕೂತೊಡನೆ ಸುಭಗೆ ಗೆಜ್ಜೆಯ ಸರಗಳ ಕಡೆಗೆ ಮತ್ತೊಮ್ಮೆ ಕಣ್ಣು ಹೊರಳಿಸಿ ಮುಗುಳುನಗೆಯಿಂದ ಅಂದಳು :

"ಗಂಗಕ್ಕಾ, ಭಾಳದಿನದಿಂದ ನಿನಗ ಒಂದು ಮಾತು ಕೇಳಬೇಕು ಅಂತ ಮಾಡೇನಿ, ಕೇಳ್ಯಾ ?"

ಸುಭಗೆಯ ಮುಗುಳುನಗೆ, ನಗೆಯಿಂದ ಅರಳಿದ ಮೊಗ, ಬಿರಿದ ಕಣ್ಣು, ಮಿನುಗುವ ಕೆಂಪು ತುಟಿಗಳ ಹಿಂದೆ ಹೊಳೆವ ಹಲ್ಗಳ ಸಾಲಿನ

ಮಾಟಾದ ಮುಂಭಾಗ—ಇವೆಲ್ಲ ಗಂಗಾಸಾನಿಗೆ ಮುದ್ದುಮುದ್ದಾಗಿ ಕಂಡವು. ಆಕೆಯೆಂದಳು:

"ಅದೇನವ್ವ, ಭಾಳ ದಿನದಿಂದ ಮುಚ್ಚಿ ಇಟಗೊಂಡು ಕೂತದ್ದು?"

"ನನಗೆ ನೃತ್ಯ ಕಲಿಬೇಕು ಅಂತ ಅದ, ಕಲಸ್ತೀ ಏನು?"

"ಓಹೋ, ಕಲಿಯಲ್ಲ ಯಾರ ಬ್ಯಾಡಾ ಅಂತಾರ! ಒಳ್ಳೇ ಆನಂದ ದಿಂದ ಕಲಸ್ತೇನಿ."

ಸುಭಗೆ ಆಗಲೇ ಆಕೆಯಿಂದ ಸಂಗೀತದ ಜ್ಞಾನವನ್ನು ತಕ್ಕಮಟ್ಟಿಗೆ ಮಾಡಿಕೊಂಡಿದ್ದಳು. ಗಂಗಾಸಾನಿಯಾದರೂ ಆಕೆಯಲ್ಲಿ ಕಲೆಗಳ ಸೆಲೆ ಆನುವಂಶಿಕವಾಗಿ ಬಂದುದನ್ನು ಕಂಡುಕೊಂಡಿದ್ದಳು.

"ನನಗ ಕಲಸೋದು ಯಾರ ಮುಂದೂ ಹೇಳಬ್ಯಾಡ ಮತ್ತ."

"ಅದರಾಗೇನದನs, ಸುಭಗಾ? ಅದೇನು ಕಳವs? ಅನ್ಯಾಯs?"

"ಸುಮ್ಮನs ಅಂದೆ. ಕತ್ತಿ ಆಗಿ ಕುಣಿಯೋದು ಕಲೀತದ ಅಂತ ಅಂದಾರು ಅಂತ!" ಎಂದು ಸುಭಗೆ ನಕ್ಕಳು.

"ನೃತ್ಯಾನೂ ಒಂದು ಕಲಾ, ಸುಭಗಾ. ಅದು ಒಂದು ಹುಡುಗರು ಆಡೋ ಆಟ ಅಲ್ಲ. ಹಿರಿಯರಾದರೇನು ಕಲೀಬಾರದೂ ಅಂತ ಹೇಳೇದೇನು?"

"ಮಂದಿ—ಗಂಗಕ್ಕ—ಕಸೂತಿ ಹಾಕಿದರ ಹೆಸರು ಇಡೋದಿಲ್ಲ; ರಂಗೋಲಿ ಹಾಕಿದರ ಹೆಸರಿಡೋದಿಲ್ಲ; ಆರತೀ ಬರದರ ಹೆಸರಿಡೋದಿಲ್ಲ. ಆದ್ರ ನೃತ್ಯಕ್ಕ ಯಾಕ ಹೆಸರಿಡತಾರ? ಬ್ರಾಂಬ್ರು ನೃತ್ಯ ಮಾಡಬಾರದಂತ ಹೌದs, ಗಂಗಕ್ಕ?"

ಸುಭಗೆಯ ಸರಳತೆಯ ಮುಗ್ಧತೆಯ ಮಾತು ಗಂಗಾಸಾನಿಗೆ ನಗೆ ತರಿಸಿತು. ಆಕೆ ಸುಭಗೆಯ ಪ್ರಶ್ನೆಗಳಿಗೆ ಉತ್ತರ ಕೊಡಬಹುದಾಗಿತ್ತಾದರೂ, ಆ ಸಮಸ್ಯೆ ಅವಳ ಬಾಲಬುದ್ಧಿಗೆ ನಿಲುಕದ ವಿಷಯವೆಂದು ತಿಳಿದು, ಅವಳ ಮಾತಿನ ಕಡೆಗೆ ಲಕ್ಷ್ಯ ಕೊಡದವಳಂತೆ ನಟಿಸಿ, ಗೆಜ್ಜೆಯ ಸರಗಳನ್ನು ತಂದು ಸುಭಗೆಯ ಕಾಲಿಗೆ ಕಟ್ಟಿದಳು; ನಾಗೊಂದಿಗೆಯ ಮೇಲಿನ ತಬಗಳನ್ನು ಕೆಳಗಿಳಿಸಿಕೊಂಡಳು.

ಒಂದು ತಾಸಿನ ವರೆಗೆ, ಆಗಾಗ ತಾನು ಕುಣಿಕುಣಿದು ತೋರಿಸಿ, ಆಗೊಮ್ಮೆ ಈಗೊಮ್ಮೆ ಅವಳೊಡನೆಯೂ ಕುಣಿದು ಅವಳ ಹಾವಭಾವ ಅಂಗ-ಭಂಗಿಗಳನ್ನು ತಿದ್ದಿ, ಸುಭಗೆಗೆ ನೃತ್ಯಕಲೆಯ ಮೊದಲನೆಯ ಪಾಠವನ್ನು ಕೊಟ್ಟಳು. ಸುಭಗೆಯು ಮೊದಮೊದಲು ನಾಚಿದಳಾದರೂ, ಗಂಗಾಸಾನಿಯ ನಿರೀಕ್ಷಣೆಯನ್ನು ಮೀರಿ ಆ ಕಲೆಯಲ್ಲಿ ಅಭಿರುಚಿಯನ್ನೂ ಯೋಗ್ಯತೆಯನ್ನೂ ತೋರಿಸಿದ್ದಕ್ಕೆ ಗಂಗಾಸಾನಿಗೆ ಇಲ್ಲದ ಆನಂದವಾಯಿತು.

ಕಡೆಗೆ ಗಂಗಾಸಾನಿಯು ತಬಲಗಳನ್ನು ಮುಂದೆ ಇಟ್ಟುಕೊಂಡು, “ ಸುಭಗಾ, ಈ ಸರತಿ ನಾನು ಹಾಡು ಹೇಳತಾ ತಬಲಾ ಬಾರಸತೀನಿ; ನೀನು ಕುಣಿ ನೋಡೋಣ; ನಾನೇನೂ ನಡುವ ನಿನ್ನ ತಡಿಯೋದಿಲ್ಲ; ಹೂ ಸುರುವು ಮಾಡು, ನೋಡೋಣ. ” ಎಂದು ತಬಲಾ ಢಕ್ಕೆಗಳನ್ನು ಸರಿಮಾಡಿಕೊಂಡಳು.

ಪ್ರತಿನಿತ್ಯ ತಡವಾಗಿ, ಸಂಜೆಯ ಮುಂದೆ, ಗಂಗಾಸಾನಿಯ ಮನೆಯ ಕಡೆಗೆ ಒಡಹಾಯುವ ಪರಿಪಾಠವಿಟ್ಟುಕೊಂಡಿದ್ದ ಶ್ರೀಕಂಠಶಾಸ್ತ್ರಿಗಳು ಈ ದಿನ ಅಕಸ್ಮಾತ್ತಾಗಿ ಸ್ವಲ್ಪ ಮೊದಲೇ ಇತ್ತ ಬಂದರು. ಮನೆಯ ಹತ್ತಿರ ಬಂದಾಗ, ತಲೆಬಾಗಿಲು ಮುಂದೆ ಮಾಡಿದ್ದರೂ ಗಂಗಾಸಾನಿಯು ತಬಲದ ತಾಳದೊಂದಿಗೆ ಹಾಡುತ್ತಿದ್ದುದು ಕೇಳಿಸಿತು. ಈ ಸಮಯದಲ್ಲಿ ಅವಳು ಹಾಡುತ್ತ ಬಾರಿಸುತ್ತ ಕುಳಿತುಕೊಳ್ಳುತ್ತಿದ್ದುದು ವಾಡಿಕೆಯ ವಿಷಯವಾದ್ದರಿಂದ, ಅವರು ಧ್ವನಿಯನ್ನು ಕಿವಿಯಲ್ಲಿ ಹಾಕಿಕೊಳ್ಳುತ್ತ ಮುಂದೆ ಸಾಗಿದರು. ಒಮ್ಮೆಲೆ ತಬಲದ ತಾಳ-ಮೇಳದಲ್ಲಿ ಗೆಜ್ಜೆಗಳ ಸಪ್ಪಳವೂ ಕೇಳಲು ಅವರಿಗೆ ಆಶ್ಚರ್ಯವಾಯಿತು. ಯಾರೋ ಕುಣಿಯುತ್ತಿದ್ದುದೂ ಅವರು ಮನೆಯ ಸನಿಯಕ್ಕೆ ಬಂದಬಂದಂತೆ ನಿಚ್ಚಳವಾಯಿತು. ಗಂಗಾಸಾನಿಯೇ ಕುಣಿಯುತ್ತ ತಬಲ ಬಾರಿಸುತ್ತಿದ್ದುದು ಸಾಧ್ಯವಿಲ್ಲವಷ್ಟೇ? ಮತ್ತೆ ಯಾರಾದರೂ ಒಳಗೆ ಇರಲೇಬೇಕು ಎಂದು ಸಂಶಯಪಟ್ಟರು; ವಿಕಾರಗೊಂಡರು. ಬಾಗಿಲವನ್ನು ತೆಗೆಯಲು ನೇರವಾಗಿ ಮುಂದೆ ಹೋಗದೆ, ತೆರೆದ ಕಿಡಿಕಿಯಲ್ಲಿ ದೂರದಿಂದ, ಕಾಣದಂತೆ, ಇಣಿಕಿನೋಡಿದರು.

ಶ್ರೀಕಂಠಶಾಸ್ತ್ರಿಗಳು ಆಗ ಕಂಡ ಚಿತ್ರ ಅವರನ್ನು ಮುಗ್ಧರನ್ನಾಗಿ

ಮಾಡಿತು. ಹುಳುಹುಳು ನೋಡಿದರು; ಕಣ್ತುಂಬ ನೋಡಿದರು; ದಿಟ್ಟಿಸಿ ನೋಡಿದರು; ತಿರುತಿರುಗಿ ನೋಡಿದರು.

ಸುಭಗೆಯು ಆಳವಾದ ಆಳು, ನೀಳವಾದ ತೋಳು, ಬಾಚಿ ಕಟ್ಟಿದ ಬುಚುಡ, ಕುಣಿತದ ಸಲುವಾಗಿ ಕಟ್ಟಿಕೊಂಡಿದ್ದ ಸೆರಗಿನಡಿಯಲ್ಲಿ ಉಬ್ಬಿ ಒಡೆದು ಕಾಣುವ ಎದೆ, ತಾಲಬದ್ಧವಾಗಿ ನೆಲದಲ್ಲಿ ಪುಟಿಯುವ ಪಾದಗಳು, ಅತ್ತಿಂದಿತ್ತ ತೆರೆಯಂತೆ ತೇಲಿತೇಲಿ ಅಂತರದಲ್ಲಿಯೇ ಸುಳಿದಾಡುವ ಹಸ್ತಗಳು, ಜೇಡದ ಕಾಲುಗಳಂತೆ ಅಂಕಡೊಂಕಾಗಿ, ಒಂದು ಕ್ಷಣ ಕಂಪಿಸುತ್ತ, ಇನ್ನೊಂದು ಕ್ಷಣ ಬಾಗುತಲಿದ್ದ ಕೈಬೆರಳುಗಳು, ಬೆರಳುಗಳ ಬೆನ್ನು ಹತ್ತಿ ಸಂಚಲಿಸುತ್ತಲಿದ್ದ ಕಣ್ಣಾಲಿಗಳು, ನೃತ್ಯದಲ್ಲಿಯೇ ತಲ್ಲೀನಳಾಗಿ, ತನ್ನನ್ನೇ ತಾನು ಮರೆದು, ಆನಂದಾತಿರೇಕದ ಫಲವಾಗಿ ಮುಖದಲ್ಲಿ ಹೊರಸೂಸುವ ಮೃದುಹಾಸ— ಇವೆಲ್ಲ ಶ್ರೀಕಂಠಶಾಸ್ತ್ರಿಗಳಲ್ಲಿ ಹೊಸತಾದ ವಿದ್ಯುತ್ತರಂಗಗಳನ್ನೆಬ್ಬಿಸಿದುವು. ಮೊನ್ನೆ ಮೊನ್ನೆ ತಮ್ಮ ತೋಳಿನ ಮೇಲೆಯೇ ಆಡಿ, ತಮ್ಮ ಕಣ್ಣು ಮುಂದೆಯೇ ಬೆಳೆದ ಈ ಹುಡಿಗೆ ಅದೆಷ್ಟು ದೊಡ್ಡವಳಾಗಿ ಕಾಣುತ್ತಿದ್ದಾಳೆ! ಏನಿದು ಹೆಂಗಸರ ಬೆಳವಣಿಗೆ!—ಎಂದುಕೊಂಡರು ಮನದಲ್ಲಿಯೇ.

ಸುಭಗೆಯ ಚಿತ್ತ ಕಿಡಿಕಿಯ ಎದುರಿನ ಗೋಡೆಗೆ ನೇತಾಡುತ್ತಿದ್ದ ನಿಲವುಗನ್ನಡಿಯ ಕಡೆಗೆ ಬಿತ್ತು. ಕನ್ನಡಿಯಲ್ಲಿ ಕಿಡಕಿಯ ಕಬ್ಬಿಣ ಕಂಬಿಗಳ ಪ್ರತಿಬಿಂಬದ ಹಿಂದೆ ಶ್ರೀಕಂಠಶಾಸ್ತ್ರಿಗಳ ಮುಖದ ಮೇಲ್ಭಾಗದ ಪ್ರತಿಬಿಂಬವನ್ನು ಕಂಡಳು; ಬೆಚ್ಚಿದಳು. ಕಿಡಿಕಿಯ ಕಡೆಗೆ ಮುಖ ಹೊರಳಿಸಿದಳು; ನಾಚಿದಳು; ಕುಣಿತ ನಿಲ್ಲಿಸಿ ಗಂಗಾಸಾನಿಗೆ ಹೇಳದೆ ಕೇಳದೆ ಹಿತ್ತಲ ಬಾಗಿಲ ಕಡೆ ಓಡಿಹೋದಳು. ಕಾಲಲ್ಲಿ ಕಟ್ಟಿದ ಗೆಜ್ಜೆಗಳ ಇಂಚರವೂ ಅವಳನ್ನು ಹಿಂಬಾಲಿಸಿತು. ಕ್ಷಣದಲ್ಲಿ ಹಿತ್ತಲಬಾಗಿಲು ತೆಗೆದು ಮತ್ತೆ ದೊಪ್ಪೆಂದು ಹಾಕಿಕೊಂಡಿತು.

ಒಂದು ಕ್ಷಣ ಗಂಗಾಸಾನಿಗೆ ಏನೂ ತಿಳಿಯಲಿಲ್ಲ. ಶ್ರೀಕಂಠಶಾಸ್ತ್ರಿಗಳನ್ನು ಕಂಡಾಗ ಆಕೆ ನಸುನಕ್ಕು "ಕೂಸಿನ ಆಟಾ ಕೆಡಿಸಿದಿರಿ" ಎಂದಳು. ಅವರು ಮನದಲ್ಲಿಯೇ 'ಕೂಸೆ?' ಎಂದು ಅಂದರು.

ಗಂಡ ತೀರಿದಂದಿನಿಂದ ಇತ್ತೀಚೆಗೆ ಕಳೆದ ಆರೇಳು ತಿಂಗಳುಗಳಿಂದ ಸುಭಗೆ ಮನೆ ಬಿಟ್ಟು ಹೊರಗೆ ಬೀಳುವದು ತೀರ ವಿರಲ. ಹೊರಗೆ ಬಿದ್ದರೂ, ಅವಳು ಹೋಗುತ್ತಿದ್ದುದು ಗಂಗಾಸಾನಿಯ ಮನೆಗೆ ಅಷ್ಟೇ. ಅದೂ ಇತ್ತೀಚೆಗೆ. ಆಕೆ ವಿಧವೆಯಾದುದರಿಂದ ಮನೆಯಲ್ಲಿ ಅಡುಗೆಯನ್ನು ಶಂಕರ ಭಟ್ಟರೇ ಮಾಡುತ್ತಿದ್ದರು. ತಮಗೆ ತಮ್ಮ ದೇವರಪೂಜೆಗೆ ಬೇಕಾಗುವ ನೀರನ್ನು ಅವರೇ ತಂದುಕೊಳ್ಳುತ್ತಿದ್ದರು. ಹೊರಗೆಲಸವನ್ನು ಮಾತ್ರ ಸುಭಗೆ ನೋಡಿಕೊಳ್ಳುತ್ತಿದ್ದಳು. ತನ್ನ ಬಳಕೆಗೆ ಬೇಕಾಗುವ ನೀರನ್ನು ತರುವದಾಗಲೀ ತನ್ನ ಬಟ್ಟೆಗಳನ್ನು ಒಗೆದುಕೊಂಡು ಬರುವದಾಗಲೀ ತಾನೇ ಮಾಡಿಕೊಳ್ಳುತ್ತಿದ್ದಳು. ತನ್ನ ವೈಧವ್ಯದ ಮೂಲಕ ಉಳಿದ ಬ್ರಾಹ್ಮಣ ಸಮಾಜವು ಎಲ್ಲಿ ಅಸಹ್ಯಪಟ್ಟುಕೊಳ್ಳುವದೋ ಎಂದು ಆಕೆ ಎರಡನೆಯ ಯವರ ಮನೆಗೆ ಹೋಗಲು ಸಂಕೋಚಪಟ್ಟುಕೊಳ್ಳುತ್ತಿದ್ದಳು.

ಆದರೆ ಗಂಗಾಸಾನಿಯೆಂದರೆ ಆಕೆಗೆ ಪಂಚಪ್ರಾಣ. ಗಂಗಾಸಾನಿ ಯಾದರೂ ಅಷ್ಟೇ. ಹಗಲಿನ ಬಹುಭಾಗವನ್ನು ಗಂಗಾಸಾನಿ ಸುಭಗೆ ಯೊಡನೆಯೇ ಕಳೆಯುವಳು. ಅವಳೊಡನೆ ಹರಟೆ ಹೊಡೆಯುವಳು; ಅವಳ ಕೆಲಸದಲ್ಲಿ ಸಹಾಯ ಮಾಡುವಳು; ಅವಳ ಆರೋಗ್ಯ ಸ್ವಚ್ಛತೆಗಳ ಕಡೆಗೆ ಲಕ್ಷ್ಯ ಕೊಡುವಳು; ಆಗಾಗ ಆಕೆಗೆ ಓದು-ಬರೆಹದ ರೂಢಿ ಮಾಡಿಸಲು ಹವಣಿಸುವಳು. ಇತ್ತೀಚೆಗೆ ಅದೆಷ್ಟೋ ರಾಗಗಳನ್ನೂ ಹಾಡುಗಳನ್ನೂ ಕಲಿಸಿದ್ದಾಳೆ ಅವಳಿಗೆ. ಸುಭಗೆ ಮೈಚಳಿ ಬಿಟ್ಟು ಓಡಾಡಹತ್ತಿದಂದಿನಿಂದ ಮಧ್ಯಾಹ್ನದ ಸಮಯದಲ್ಲಿ ಸುಭಗೆಯೇ ಗಂಗಾಸಾನಿಯ ಮನೆಗೆ ಹೋಗಿ ಕೂಡುತ್ತಿದ್ದುದೂ ಉಂಟು.

ಇತ್ತೀಚೆಗೆ ಶ್ರೀಕಂಠಶಾಸ್ತ್ರಿಗಳು ಶಂಕರಭಟ್ಟರ ಮನೆಗೆ ಹೋದದ್ದು ತೀರ ವಿರಳವಾಗಿ. ಅವರಿಬ್ಬರ ನಡುವೆ ಏನಾದರೂ ಮನಸ್ತಾಪವಾಗಿ ತ್ತೆಂದಲ್ಲ; ಶ್ರೀಕಂಠಶಾಸ್ತ್ರಿಗಳಿಗೆ ಅವರ ಮನೆಗೆ ಹೋಗದಷ್ಟು ಬೇರೆ ಕೆಲಸ ವಿದ್ದಿತೆಂದೂ ಅಲ್ಲ. ಸುಭಗೆಯ ಗಂಡ ತೀರಿದಂದಿನಿಂದ ಅವರಿಗೆ ಶಂಕರ ಭಟ್ಟರಲ್ಲಿ ಹೋಗಲು ಸ್ವಲ್ಪ ಸಂಕೋಚ ಉಂಟಾಗುತ್ತಿದ್ದಿತು. ನೋಡಾ

ನೋಡಾ ಬಡಕನಾದ ಹುಡುಗನಿಗೆ ಸುಭಗೆಯನ್ನು ಗಂಟುಹಾಕುವದರಲ್ಲಿ ತನ್ನ ಕೈವಾಡವಿದ್ದುದೂ ಶಂಕರಭಟ್ಟರಿಂದ ಕೊಡಿಸಿದ ವರದಕ್ಷಿಣೆಯಲ್ಲಿಯ ಕೆಲವೊಂದು ಅಂಶವನ್ನು ತಾವು ಎತ್ತಿ ಹಾಕಿದ್ದುದರ ಸುದ್ದಿ ಶಂಕರಭಟ್ಟರ ಕಿವಿಗೆ ಮುಟ್ಟದ್ದಿತೆಂದು ಅವರಿಗೆ ತಿಳಿದಿದ್ದುದೂ ಈಗ ಶಂಕರಭಟ್ಟರಿಗೆ ತಮ್ಮನ್ನು ನೋಡಿ ನೆನಪಾದರೆ ಅವರಿಗೆ ಇನ್ನೂ ಹೆಚ್ಚು ಕೆಡಕೆನಿಸ ಬಹುದೆಂದು ಅವರು ಆದಷ್ಟು ದೂರ ಇರುತ್ತಿದ್ದರು. ಶಂಕರಭಟ್ಟರಲ್ಲಿ ಹಬ್ಬ ಹುಣ್ಣಿವೆಗಳಾದರೆ ಅವರೇ ಬ್ರಾಹ್ಮಣರಾಗಿ ಹೋಗುತ್ತಿದ್ದರು. ಆದರೆ ಮಗಳ ವೈಧವ್ಯವಾದಂದಿನಿಂದ ಅವರು ಹಬ್ಬ-ಹುಣ್ಣಿವೆಗಳನ್ನು ನಿಲ್ಲಿಸಿಬಿಟ್ಟಿದ್ದರು. ಎಂದಾದರೂ ಅವರಲ್ಲಿಗೆ ಹೋದರೂ ಸುಭಗೆ ಕಣ್ಣಿಗೆ ಬೀಳುತ್ತಿರಲಿಲ್ಲ. ಅಂತೆಯೇ ಈ ದಿನ ಸುಭಗೆಯನ್ನು ನೋಡಿದಾಗ, ಆವಳ ನಿಲುವಿನಲ್ಲಿ, ರೂಪದಲ್ಲಿ, ಬಣ್ಣದಲ್ಲಿ, ಕಳೆಯಲ್ಲಿ ಅದೆಷ್ಟೋ ನವೀನತೆಯನ್ನು ಕಂಡರು. ಆಕೆಯ ಕುಣಿಯುವ ಭಂಗಿ, ಮಣಿಯುವ ಅಂಗಾಂಗಗಳ ಚಲನವಲನ— ಇವೆಲ್ಲವೂ ಆಕೆಯ ಲಾಲಿತ್ಯಕ್ಕೆ ಬೇರೆ ಬೇರೆ ಬೆರಗನ್ನು ಕೊಡುತ್ತಿದ್ದುದನ್ನು ಕಂಡರು.

ಶ್ರೀಕಂಠಶಾಸ್ತ್ರಿಗಳು ಗಂಗಾಸಾನಿಯ ಮನೆಯಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ಅವರು ನಿಲ್ಲಲೂ ಬಂದಿರಲಿಲ್ಲ. ಮನೆಯಲ್ಲಿ ಹೆಂಡತಿ ಸಂಜೆಯ ಮುಂದಿನ ಚಹದ ಸಲುವಾಗಿ ಒಲೆ ಹೊತ್ತಿಸಿಕೊಂಡು ಕುಳಿತಿದ್ದಳು. ಡಬ್ಬಿಯಲ್ಲಿ ಚಹಾದ ಪುಡಿ ಇರಲಿಲ್ಲ. ಪುಡಿ ತೀರಿದೆಯೆಂದು ವರದಿ ಬಂದೊಡನೆ ಶ್ರೀಕಂಠಶಾಸ್ತ್ರಿಗಳು 'ಆಯತ ವೇಳೆಯ ವರೆಗೆ ಸುಮ್ಮನೆ ಕುಳಿತಿ ಯೇಕೆ?' ಎಂದು ಹೆಂಡತಿಯ ಮೇಲೆ ಸಿಡಿಹಾಯ್ದು, ಟೊಂಕದಲ್ಲಿ ಒಂದು ದುಡ್ಡಿನ ಹೊರತು ಏನೂ ಇಲ್ಲದುದನ್ನು ನೆನೆದು ಗಂಗಾಸಾನಿಯ ಹತ್ತಿರ ಚಿಲ್ಲರೆ ಏನಾದರೂ ಇದ್ದರೆ ಬಳಿದುಕೊಂಡು ಹೋಗಲು ಬಂದಿದ್ದರು. ತಮ್ಮಲ್ಲಿ ನಾಸಿಯ ಪುಡಿಯೂ ತೀರಿದ್ದಿತು.

ದುಡ್ಡನ್ನು ಪಡೆದುದಾಯಿತು. ಪುಡಿಯನ್ನೂ ನಸ್ಯವನ್ನೂ ತಂದುದೂ ಆಯಿತು. ಚಹವೂ ಆಯಿತು. ಇವೆಲ್ಲ ಕಾರ್ಯಗಳು ಯಾಂತ್ರಿಕವಾಗಿಯೇ ಮುಗಿದವು. ಮನಸ್ಸು ಅಸ್ತವ್ಯಸ್ತವಾಗಿತ್ತು. ಸುಭಗೆಯ ಚಿತ್ರ ಮನಸ್ಸಿನಲ್ಲಿ ಮೂಡಿ ಮೂಡಿ ಮಾಯವಾಗಿ ಮತ್ತೆ ಮೈದೋರುತ್ತಿತ್ತು. ಒಮ್ಮೆ ಅವಳ

ಕಾಲ್ಗೆಜ್ಜೆಯ ನಿನಾದ, ಇನ್ನೊಮ್ಮೆ ಅವಳ ಗುಲಾಬಿಯ ಮೆರಗು ಪಡೆದ ಕೆಂಪು ಮೈಬಣ್ಣ ಮತ್ತೊಮ್ಮೆ ಆಕೆಯ ನಗೆ, ಆಕೆ ತಮ್ಮನ್ನು ನೋಡಿ ಓಡಿಹೋದುದರ ಮಾಟ— ಎಲ್ಲವೂ ಮತ್ತೆ ಮತ್ತೆ ಅವರಿಗೆ ಅವಳ ನೆನಪು ತರುತ್ತಿದ್ದುವು.

ಅವರಿಗೆ ಮನೆಯಲ್ಲಿ ನಿಲ್ಲಲು ಮನಸ್ಸಾಗಲಿಲ್ಲ; ಗುಡಿಯ ಕಡೆಗೆ ಹೊರಟರು.ದೀವಟಿಗೆಗಳಿಂದ ಸುರಿದ ಎಣ್ಣೆಯಿಂದ ಜಿಗಿಜಿಗಿಯಾದ ಪರಸಿಯ ಮೇಲೆ ಅತ್ತಿಂದಿತ್ತ ಸುಳಿದಾಡಿದರು. ಗುಡಿಯ ಮುಂದಿನ ಪವಳಿಯ ಗೋಡೆ ಯಲ್ಲಿದ್ದ ಕಿಂಡಿಯಲ್ಲಿ ಹಣೆಯಿಕ್ಕಿ ನಿಂತುಕೊಂಡರು. ಅಲ್ಲಿ ಅವರ ಕಣ್ಣಿಗೆ ಬಿದ್ದ ಆ ನೋಟ, ಆ ಗುಡ್ಡದ ಇಳುಕಲು, ಇಳುಕಲಿನಿಂದ ಆಚೆಯ ಆ ಗಿಡಗಂಟಿಗಳು, ಮೆಲ್ಲಮೆಲ್ಲಗೆ ಗುಡ್ಡಗಳನ್ನಡರುವ ಆ ದನಕರುಗಳು, ದೂರ ಕೊರಕಲದಲ್ಲಿ ಕಪ್ಪಾಗಿ ಮಸುಮಸುಕಾಗಿ, ಮೋಡದ ನೆರಳಿನಂತೆ ಸರಿ ಯುವ ಆ ಕುರಿಹಿಂಡು, ತಲೆಯ ಮೇಲೆ ನೀರಿನ ಕೊಡಗಳನ್ನಿಟ್ಟುಕೊಂಡು ಸಾಲುಗಟ್ಟಿಕೊಂಡು ಗುಡ್ಡದ ಮೆಟ್ಟಲುಗಳನ್ನು ಅಡರುತ್ತಿದ್ದ ಹೆಂಗಸರ ಸಣ್ಣ ಆಕೃತಿಗಳು— ಇವೆಲ್ಲ ಅವರ ಶೂನ್ಯದೃಷ್ಟಿಯಲ್ಲಿ ಶೂನ್ಯವಾಗಿ ಕಂಡವು.

ಈಗಾಗಲೇ ಸಂಜೆಯಾಗಿತ್ತು. ಅಗಸಿಯ ಮೇಲಿನ ನಗಾರಿಖಾನೆ ಯಿಂದ ಮೂರೂಸಂಜೆಯ ನಗಾರಿ ಬಡಿಯಹತ್ತಿತು. ತತ್‌ಕ್ಷಣ ಗುಡಿಯ ಮುಂದೆ ಸನಾಯಿಯೂ ಸುರುವಾಯಿತು. ಶ್ರೀಕಂಠಶಾಸ್ತ್ರಿಗಳೀಗ ಗುಡಿಯ ಮಹಾದ್ವಾರದ ಮುಂದಿನ ವಿಸ್ತಾರವಾದ ಎತ್ತರವಾದ ಮೆಟ್ಟಲುಗಳ ಎಡ ಬಲಕ್ಕಿದ್ದ ಕಲ್ಲಿನ ಸಿಂಹಗಳೊಂದರ ಬೆನ್ನ ಮೇಲೆ ಕುಳಿತುಕೊಂಡರು.

ದೀಪ ಮುಡಿದೊಡನೆ ಜನ ಒಬ್ಬೊಬ್ಬರಾಗಿ, ಇಬ್ಬರು ಮೂವರು ಕೂಡಿಕೊಂಡು ದೇವರ ಗುಡಿಯ ಪ್ರದಕ್ಷಿಣೆ ಹಾಕಿ, ಗಂಟೆ ಬಡಿದು ದೇವರಿಗೆ ನಮಸ್ಕಾರ ಮಾಡಿದರು. ಗುಡಿಯ ಹೊರಗಣ ಮೂಲೆಯಲ್ಲಿಯ ಭೂತಾಳ ಗುಣಿಯಲ್ಲಿಯ ಅಂಗಾರವನ್ನು ತೆಗೆದುಕೊಂಡು ಹಣೆಗೆ ಹಚ್ಚಿಕೊಂಡರು; ನಾಲಿಗೆಯ ಮೇಲೆ ಉದುರಿಸಿಕೊಂಡು ಮನೆಯ ಕಡೆಗೆ ತೆರಳಿದರು. ಶ್ರೀಕಂಠ ಶಾಸ್ತ್ರಿಗಳು ಮಾತ್ರ ಕೂತಲ್ಲಿಯೇ ಕುಳಿತಿದ್ದರು.

ಮೂರೂಸಂಜೆಯ ಜನದಟ್ಟಣೆ ಕಡಿಮೆಯಾದೊಡನೆ, ಮಹಾಲದಾರ ವೀರೇಶ ಕೈಯಲ್ಲಿ ಬೆಳ್ಳಿಯ ಬೆತ್ತವನ್ನು ಹಿಡಿದುಕೊಂಡು ಶ್ರೀಕಂಠ

ಶಾಸ್ತ್ರಿಗಳ ಕಡೆಗೆ ಬಂದು “ ಶಾಸ್ತ್ರಿಗಳಃ ನಗಾರೀ ಹೊಡಸಲ್ಯಾ, ಮಂಗಳಾ ರತಿಗೆ ಹೊತ್ತಾತು ? ” ಎಂದ.

ಶ್ರೀಕಂಠಶಾಸ್ತ್ರಿಗಳು ಗುಂಗಿನಿಂದ ಹೊರಬಂದರು. “ ಹೂಂ, ಹೊಡಸು; ಅಷ್ಟರಾಗ ನಾ ಸಂಧ್ಯಾ ಮುಗಿಸಿಕೊಂಡು ಬರತೀನಿ. ಜನಾ ಕೂಡಲಿ. ನೀ ಧೂಪಾರತಿಗೆ ಬೆಂಕೀ ಹಾಕು. ಲೋಬಾನ ಅದಃನೊ ಇಲ್ಲೊ ನೋಡು. ಇಲ್ಲದೆ ಇದ್ರ, ಊದಿನ ಕಡ್ಡೀ ಹಚ್ಚಿಬಿಡು.” ಎಂದು ಮನೆಯ ಕಡೆಗೆಹೊರಟರು.

“ ನೀವು ಮಡೀ ಉಟಗೊಂಡು ಬರ್ರಿ ಗಡಾನ. ಎಲ್ಲಾ ‘ರೆಡಿ’ ಮಾಡಿ ರತೇನಿ.” ಎಂದು ವೀರೇಶ ಗುಡಿಯು ಒಳಗೆ ಓಡಿ ಹೋದ; ಹೋಗುವಾಗ ಬೆಳ್ಳಿಯ ಬೆತ್ತದ ತುದಿಯಿಂದ ಮೇಲೆ ದೂರದಲ್ಲಿ ಜೋತಾಡುತ್ತಿದ್ದ ಗಂಟೆ ಯನ್ನು ಬಾರಿಸಿದ.

ಶ್ರೀಕಂಠಶಾಸ್ತ್ರಿಗಳು ಮನೆಯ ಹೊಸತಿಲದಲ್ಲಿ ಕಾಲಿಟ್ಟಾಗ ಅವರ ಹೆಂಡತಿ, ರಾಧಕ್ಕ, ಜೋಳಿಗೆಯ ತೊಟ್ಟಿಲದಲ್ಲಿ ಮಲಗಿದ ಕೂಸನ್ನು ತೂಗುತ್ತ ಕುಳಿತುಕೊಂಡಿದ್ದರು. ಗಣೇಶನ ಮಾಡದಲ್ಲಿ ಒಂದು ಬೆಡ್‌ಲ್ಯಾಂಪು ಮಿಣಿಮಿಣಿ ಮಿನುಗುತ್ತಿದ್ದಿತು. ಹಿರಿಯ ಮಕ್ಕಳೆರಡೂ ರಾಧಕ್ಕನ ತವ ರೂರಿಗೆ ಹೋಗಿದ್ದವಾದ್ದರಿಂದ ಮನೆ ಭಣಭಣ ಎನ್ನುತ್ತಿದ್ದಿತು.

“ ಥಾಲೀ ಸವಟು ಇಡು ಮಣೀ ಹಾಕಿ. ಸಂಧ್ಯಾವಂದನೀ ಶಾಸ್ತ್ರ ಮಾಡಿ ಮಂಗಳಾರತೀ ಮಾಡಿಕೊಂಡು ಬಂದ ಬಿಡತೇನಿ. ಆಮೇಲೇ ಊಟಕ್ಕ ಕೂತರಾತು.... ” ಎನ್ನುತ್ತಲೇ ಒಳಗೆ ಬಂದರು ಶ್ರೀಕಂಠಶಾಸ್ತ್ರಿ ಗಳು. ಅತ್ತ ಇತ್ತ ನೋಡದೇ ಅವರು ಮುಂದುವರಿದರು :

“ಆ ಹುಡಿಗಿ, ಸುಭಗಾ, ಎಂಥಾ ದೊಡ್ಡ ಹೆಂಗಸು—” ಏನೋ ಅನ್ನುವ ವರಿದ್ದರು. ದೃಷ್ಟಿ ಹೆಂಡತಿಯಮೇಲೆ ಬಿದ್ದಿತು. ಮಾತಿನ ಹೊಳಹು ಬದಲಿಸಲೇ ಬೇಕಾಯಿತು. “ ಯಾವ ಕಣ್ಣಾಗ ನೀರು ಬಂದಾವ ? ” ಎಂದರು ಆಗ.

“ ಅಕ್ಕಿ ತೀರ್ಯಾವ ಅಂತ ಮುಂಜಾವಿನಿಂದ ಹೇಳಿಕೋತ ಬಂದೇನಿ. ಕಿವ್ಯಾಗ ಹಾಕ್ಕೊಳ್ಳೀವಲ್ರೀ. ನನಗಾರ ಎಲ್ಲೀನೂ ಕಡಾ ಹುಟ್ಟವಲ್ದು. ಮುಂದ್ಯಾರ ಎಷ್ಟಂತ ಕೊಡತಾರ. ಮಂಗಳಾರತೀ ಹೊತ್ತಾತು. ಇನ್ನೂ ಅನ್ನಕ್ಕ ಇಟ್ಟಿಲ್ಲ.” ಎಂದು ರಾಧಕ್ಕ ಕಣ್ಣೊರಸಿಕೊಂಡರು.

ಶ್ರೀಕಂಠಶಾಸ್ತ್ರಿಗಳು ಒಂದು ಕ್ಷಣ ವಿಚಾರಿಸಿದರು. “ ಗಂಗಾನ

ಮನೀಗೇ ಹೋಗು. ನಾ ಹೇಳೀನಿ ಅಂತಾ ಹೇಳು ಇನ್ನೊಂದು, ಪಾವು ಅಕ್ಕೀ ಕೊಡೂ ಅಂತ. ಕೊಡತಾಳ ಹೋಗು ಆಕಿ." ಎಂದರು.

"ದರವೊಂದಕ್ಕೊ ಗಂಗಾನ ಮನಿ, ಗಂಗಾನ ಮನಿ, ಗಂಗಾನ ಮನಿ! ನನಗ ನಾಚಿಗಿ ಆಗತದ ಹೋಗ್ರಿ ಮಾರಾಯರ, ಮ್ಯಾಲಿಂದ ಮ್ಯಾಲಿ ಆಕೀ ಮನೀಗೆ ಮಾರಾ ಹಿಡಕೊಂಡು ಹೋಗಲಿಕ್ಕೆ. ಮಾರಾಯಳು ಹೋದ ಜಲ್ಮದಾಗ ನಿಮ್ಮ ರಿಣ ಏನು ತಿಂದಿದ್ಲೋ ಆಕಿ ಎಷ್ಟು ತೀರಿಸಿದ್ರೂ ಇನ್ನೂ ಮುಗಿಲೇ ಒಲ್ದು. ಆಕೆರ ಎಷ್ಟಂತ ಮಾಡಬೇಕದು ನಿಮಗ?" ರಾಧಕ್ಕನ ಮಾತಿನಲ್ಲಿ ಸಿಟ್ಟು, ಜುಗುಪ್ಸೆ, ಅಚ್ಚೆ ಮೂರೂ ಕೂಡಿದ್ದವು.

"ನಾ ಹೇಳಿದಷ್ಟು ಮಾಡು; ಒಣಾ ಪಂಟು ಬಡೀಬ್ಯಾಡ." ಎಂದು ಗದ್ದರಿಸಿಕೊಂಡರು ಶ್ರೀಕಂಠಶಾಸ್ತ್ರಿಗಳು.

## ೧೦

ರಾಧಕ್ಕ ಒಂದು ವಿಲಕ್ಷಣ ಪ್ರಾಣಿ. ಜನ ಅವರಿಗೆ ದುರ್ದೈವಿ ಎಂದು ಕರೆಯುವದು ದಿನಕ್ಕೊಂದು ಸಲವಾದರೂ ಕಿವಿಗೆ ಬೀಳುತ್ತಿದ್ದರೂ ಅವರಿಗೆ ದುರ್ದೈವ ಎಂದರೇನೋ ಸುದೈವ ಎಂದರೇನೋ. ಗಂಡನೊಡನೆ ಬಾಳುವೆ ಮಾಡಲು ಸುರುವಾಗಿ ಆಗಲೇ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಅವರು ನೋಡಿದ ಊರುಗಳೆಂದರೆ ಶಂಭುಲಿಂಗನ ಬೆಟ್ಟವೊಂದು, ಅವರ ಹುಟ್ಟಿದೂರೊಂದು. ಆಗಾಗ ಅಲ್ಲಿ ಇಲ್ಲಿ ಹೋಗಿ ಬಂದಿರಬಹುದು. ಆದರೂ ಲೆಕ್ಕಕ್ಕೆ ಹಿಡಿಯಲು ಬಾರದಷ್ಟು ಕ್ವಚಿತ್ತಾಗಿ. ಅವರು ಗಾಡಿಯನ್ನಾಗಲಿ ಮೋಟಾರನ್ನಾಗಲಿ ಹತ್ತಿದ್ದು ಬೆರಳಿನಿಂದ ಎಣಿಸುವಷ್ಟು ಸಲ. ಮೊನ್ನೆ ನೆರೆಮನೆಯವರಲ್ಲಿ ಅರಿಸಿಣ-ಕುಂಕುಮಕ್ಕೆ ಹೋದಾಗ ತಾವು ಯಾವ ಯಾವ ಪ್ರಸಂಗಗಳಲ್ಲಿ ಗಾಡಿಯನ್ನು ಹತ್ತಿದ್ದರೆಂಬುದನ್ನೂ ಹಾಗೆ ಮಾಡಿದಾಗ ಕಾಣದಂತೆ ಗುಪ್ತವಾಗಿ ಹೇಗೆ ಗಾಡಿಗೆ ಉತ್ತತ್ತಿಯ ನೈವೇದ್ಯ ಮಾಡಿದರೆಂಬುದನ್ನೂ ಅವರು ಹೇಳಿದಾಗ ಹೆಂಗಸರೆಲ್ಲರೂ ಬಿದ್ದು ಬಿದ್ದು ನಕ್ಕಿದ್ದರು. ಊರಲ್ಲಿ ಸಹ ಅವರಿಗೆ ಹೆಚ್ಚಿಗೆ ಮುಂದಿಯ ಮನೆಗೆ ಹೋಗಿ ಗೊತ್ತಿಲ್ಲ. ಹೆಚ್ಚಿಗೆ ಮಾತಾಡುವದಂತೂ ಇಲ್ಲವೇ ಇಲ್ಲ. ಅವರು ಸಿಟ್ಟಿಗೆ

ಏಳುವದನ್ನಾಗಲೀ ಜಗಳಾಡುವದನ್ನಾಗಲೀ ನೋಡುವದಕ್ಕೆ ಜನ ದಾರೀ ನೋಡುತ್ತಿರುವಂತೆ ಕಾಣುತ್ತದೆ. ಕಣ್ಣಲ್ಲಿ ದಳದಳ ನೀರು ಇಳಿಸುತ್ತ ಯಾರೊಡನೆಯೂ ಮಾತಾಡದಂತೆ ತುಳಸಿಯ ಕಟ್ಟೆಗೆ ಆತುಕೊಂಡು ಕುಳಿತ ರೆಂದರೆ ಅವರಿಗೆ ಯಾರ ಮೇಲೋ ಸಿಟ್ಟು ಬಂದಿದೆಯೆಂದು ತಿಳಿಯಬೇಕು. ಎದುರಿಗೆ ಯಾರಾದರೂ ಇರಲಿ ಇರದಿರಲಿ ಯಾರಿಗೂ ಕೇಳಿಸದಂತೆ ಯಾರಿಗೂ ತಿಳಿಯದಂತೆ— ತಮಗೂ ತಿಳಿಯದಂತೆ— ಅಸಂಬದ್ಧವಾಗಿ ಏನ ನ್ನಾದರೂ ಒಟಗುಟ್ಟುತ್ತ ಕುಳಿತರೆ, ಯಾರೋ ಒಬ್ಬರು ಅವರೊಡನೆ ಜಗಳ ವಾಡುವ ಪ್ರಸಂಗ ತಂದುಕೊಂಡಿದಾರೆ ಎಂದು ಅರ್ಥ. ಮುಂಜಾನೆಯಿಂದ ಸಂಜೆಯ ವರೆಗೆ ಜೀತದ ಆಳಿನಂತೆ ದುಡಿಯುವದು, ನೀರು ಹೊರುವದು, ಮಕ್ಕಳನ್ನು ಜೋಗರಿಸುವದು, ಮನೆಗೆ ಬಂದವರಿಗೆ ಬಂದ ಹೊತ್ತಿಗೆ ಅನ್ನ ಬೇಯಿಸುವದು, ದಿವಸಕ್ಕೆ ಮೂರು ಸಲ ತಪ್ಪದೆ ಗುಡಿಗೆ ಹೋಗಿ ಬರು ವದು— ಇವೇ ಅವರ ನಿತ್ಯದ ಕಾರ್ಯಕ್ರಮ.

ಶ್ರೀಕಂಠಶಾಸ್ತ್ರಿಗಳೆಂದರೆ ಅವರು ಗದಗದ ನಡುಗುವರು. ಗಂಡನಲ್ಲಿ ವಿಶ್ವಾಸವಿಟ್ಟು ಅವರ ಹೆಜ್ಜೆಯಲ್ಲಿಯೇ ಹೆಜ್ಜೆ ಇಡುತ್ತ ಸಾಗುವದು ತಮ್ಮ ಧರ್ಮವೆಂದೇ ಅವರ ನಂಬಿಕೆ. ಆದರೂ ಶ್ರೀಕಂಠಶಾಸ್ತ್ರಿಗಳು ರಾಧಕ್ಕನವರ ಮನಸ್ಸನ್ನು ಕ್ಷಣಕ್ಷಣಕ್ಕೂ ನೋಯಿಸಿದ್ದುಂಟು. ಕಾರ್ಯಬಾಹುಲ್ಯದ ಮೂಲಕವೋ, ಮೈಯಲ್ಲಿಯ ಅಸ್ವಾಸ್ಥ್ಯದ ಮೂಲಕವೋ, ಮನೆಯಲ್ಲಿಯ ಅನಾನುಕೂಲತೆಯ ಮೂಲಕವೋ ತಿಳುವಳಿಕೆಯ ಅಭಾವದಿಂದಲೋ ಅವರು ಶ್ರೀಕಂಠಶಾಸ್ತ್ರಿಗಳ ವಿರುದ್ಧ ನುಡಿದಾಗ ಹೊಡೆತ ತಪ್ಪಿದ್ದಿಲ್ಲ. ಅದ ನ್ನೆಲ್ಲ ಸಹಿಸಿಕೊಂಡು ಮತ್ತೆ ಮರುಕ್ಷಣ ಶ್ರೀಕಂಠಶಾಸ್ತ್ರಿಗಳೊಡನೆ ಅಚ್ಚ ಚ್ಚೆಯೂ ನಡೆದುದೇ. ಅವರು ಸಿಟ್ಟಿಗೆದ್ದಾಗ, ಅಚ್ಚೆ ಮಾಡಿ ಬೈಸಿ ಕೊಂಡಿದ್ದು ಉಂಟು; ಅಚ್ಚೆ ಮಾಡಿದಾಗ, ಸಿಟ್ಟಿಗೆದ್ದು ಬೈಸಿಕೊಂಡಿ ದ್ದುದೂ ಉಂಟು.

ಶ್ರೀಕಂಠಶಾಸ್ತ್ರಿಗಳ ಪ್ರಕೋಪದ ಪರಿಣಾಮವಾಗಿ ಹಿಂದೊಮ್ಮೆ ಅನಾ ಹುತವೇ ಆಯಿತು: ಅವರ ಎಳೆ ಹರೆಯದ ಕಾಲದ ಮಾತು. ಶ್ರೀಕಂಠ ಶಾಸ್ತ್ರಿಗಳು ಸಂಚಾರ ಮುಗಿಸಿಕೊಂಡು ಊರಿಗೆ ಬಂದಾಗ ರಾತ್ರಿ ಹತ್ತು ಗಂಟೆಯಾಗಿತ್ತು. ತಮ್ಮ ಸಂಗಡ ಅವರು ಬೆಳಗಾವಿಯಿಂದ ಒಬ್ಬ

ಪಾತರದವಳನ್ನೂ ಆಕೆಯ ಇಬ್ಬರು ಮಕ್ಕಳನ್ನೂ ದೇವರನ್ನು ತೋರಿಸಲು ಕರೆತಂದಿದ್ದರು. ರಾಧಕ್ಕ ಅದೇ ಆಗ ಊಟ-ಉಡಿಗೆ ಮುಗಿಸಿಕೊಂಡು ದೀಪ ಕಳೆದಿದ್ದರು. ಶಾಸ್ತ್ರಿಗಳು ಮನೆಗೆ ಬಂದೊಡನೆ ಬಿಸಿ ಅನ್ನ-ಸಾರು ಮಾಡಲು ಹೆಂಡತಿಗೆ ಹೇಳಿದರು. ಮನೆಯಲ್ಲಿ ಬೇಳೆಯಿಲ್ಲುದಾಗಿಯೂ ರಾತ್ರಿ ಅಡ್ಡಹೊತ್ತಿನಲ್ಲಿ ಕಡಕ್ಕಾಗಿ ಮುಂದಿಯ ಬಾಗಿಲು ತಗಿಸುವದೆಂತು ಎಂದೂ ರಾಧಕ್ಕ ಗುಣಗುಟ್ಟಿದುದೊಂದೇ ತಡ ಇದ್ದ ಕಸುವನ್ನೆಲ್ಲ ಹಾಕಿ ಶಾಸ್ತ್ರಿಗಳು ರಾಧಕ್ಕನ ಕಪಾಳದತ್ತ ಕೈ ಬೀಸಿದರು. ಗುರಿ ತಪ್ಪಿ ಏಟು ಎಡಗಣ್ಣಿಗೆ ಬಿತ್ತು—ಅದೇ ನೆವವಾಗಿ ಮೂರು ತಿಂಗಳು ಆರೈಕೆಯಾದರೂ ಕಣ್ಣು ಕೆಂಪಗೆ ಮುಂಜುಗಟ್ಟಿದ್ದು ಗುಣವಾಗಲೇ ಇಲ್ಲ. ಎಡಗಣ್ಣ ದೃಷ್ಟಿ ಮಂದ ವಾಗಿ ಹೋಯಿತು. ಇದೆಲ್ಲವನ್ನೂ ರಾಧಕ್ಕ ತನ್ನ ಪೂರ್ವಜನ್ಮದ ತಪ್ಪಿನ ಮೇಲೆ ಹಾಕಿ, ದೃಷ್ಟಿ ಸುಧಾರಿಸಿದರೆ ಶಂಭುಲಿಂಗನಿಗೆ ಬೆಳ್ಳಿಯ ಕಣ್ಬಟ್ಲ ಕೋರೆಮೀಸೆ ಮಾಡಿಸಿ ಕೊಡುವದಾಗಿ ಬೆಳ್ಳಿಯ ರೂಪಾಯಿ ತೊಳೆದಿಟ್ಟು, ಯಥಾಪ್ರಕಾರ ಜೀವನ ಸಾಗಿಸಿದ್ದೂ ಉಂಟು.

ರಾಧಕ್ಕನವರಿಗೆ ಈ ತರದ ಸ್ವಭಾವ ಬಂದುದು ತಂದೆ-ತಾಯಿ ಗಳಿಂದಲೇ. ಬಡವರೆಂದು ಬಹಳ ದಿನದಿಂದಲೂ ಹೆಣ್ಣು ಹತ್ತದ ಶ್ರೀಕಂಠ ಶಾಸ್ತ್ರಿಗಳ ಬಾಹ್ಯಾಡಂಬರಕ್ಕೆ ರಾಧಕ್ಕನ ತಂದೆ ಬಲೆಬೀಳದಿದ್ದರೆ, ರಾಧಕ್ಕ ಎಲ್ಲಿಯೋ ಶ್ರೀಕಂಠಶಾಸ್ತ್ರಿಗಳು ಎಲ್ಲಿಯೋ. ಆ ಭೋಳೆ ಬ್ರಾಹ್ಮಣ ಮೊದಲ ಸಲ ಬೆಟ್ಟಕ್ಕೆ ಬಂದಾಗ ಶ್ರೀಕಂಠಶಾಸ್ತ್ರಿಗಳು ಸಾಲೆಯ ಖುರ್ಚಿ ಮೇಜು ಗಡಿಯಾರಗಳನ್ನು ತಮ್ಮ ಮನೆಯಲ್ಲಿ ಒಯ್ದು ಇಟ್ಟುಕೊಂಡಿದ್ದರು; ದೇವ ಸ್ಥಾನದ ದೊಡ್ಡ ಜಮಖಾನಿಯನ್ನು ಒಯ್ದು ಕೋಣೆಯಲ್ಲಿ ಹಾಸಿದ್ದರು; ಗೌಡರ ಮನೆಯ ಕತ್ತಿ ತುಬಾಕಿಗಳನ್ನು ಗೋಡೆಯ ಮೇಲೆ ಜೋತು ಬಿಟ್ಟಿದ್ದರು. ಸಂಜೆಯ ಮುಂದೆ ತಮ್ಮ ಹೊಲಗಳನ್ನು ತೋರಿಸಿಕೊಂಡು ಬರುವೆವೆಂದು ಗುಡ್ಡದ ಓರೆಯಲ್ಲಿ ಒಂದು ಬಂಡೆಗಲ್ಲ ಮೇಲೆ ನಿಂತು ದೂರ ದಿಂದಲೇ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಕೈಮಾಡಿ ಅವೆಲ್ಲ ತನ್ನ ನಂಬರುಗಳೇ ಎಂದು ಇದ್ದು ಬಿದ್ದ ಹೊಲಗಳನ್ನು ತೋರಿಸಿದಾಗ ರಾಧಕ್ಕನ ತಂದೆ ಹಿರಿಹಿರಿ ಹಿಗ್ಗಿದರು.

ರಾಧಕ್ಕನವರಿಗೆ ಗಂಗಾಸಾನಿ-ಶ್ರೀಕಂಠಶಾಸ್ತ್ರಿಗಳ ಸಂಬಂಧದ ಸುಳುವು

ಮೊದಲ ಸಲ ಹತ್ತಿದಾಗ ಅವರು ಮನಸ್ಸಿನಲ್ಲಿಯೇ ಬಹಳವಾಗಿ ತಳಮಳಿಸಿದ್ದರು; ಎರಡು ದಿನ ಅನ್ನ-ನೀರು ಬಿಟ್ಟಿದ್ದರು; ಮನೆಯಲ್ಲಿ ರಂಭಾಟವನ್ನೂ ಮಾಡಿದ್ದರು; ತವರೂರಿಗೆ ಹೋಗಿಬಿಡುವದಾಗಿ ಗುಣಗುಟ್ಟುವದೂ ಆಗಿದ್ದಿತು. ಆದರೂ ತಮ್ಮ ಅಸಹಾಯ್ಯತೆಯ ಮೂಲಕ ಅವರು ತಮ್ಮ ಭಾವನೆಗಳನ್ನು, ರುಚಿ-ಅರುಚಿಗಳನ್ನು ಶ್ರೀಕಂಠಶಾಸ್ತ್ರಿಗಳ ಲಹರಿಗಳಿಗೆ ಒಗ್ಗುವಂತೆ ಅಳವಡಿಸಿಕೊಳ್ಳಲೇಬೇಕಾಯಿತು. ಇಷ್ಟೇ ಅಲ್ಲ, ಜನರು ಚೇಷ್ಟೆ ಮಾಡಿದಾಗ, ಶ್ರೀಕಂಠಶಾಸ್ತ್ರಿಗಳ ನೀತಿಯ ಸಡಿಲುತನದ ಬಗ್ಗೆ ಜನರಾಡುವ ನಿಂದೆಯ ಮಾತು ಕಿವಿಗೆ ಬಿದ್ದಾಗ, ಅವರನ್ನೇ ಮೇಲುಗಟ್ಟಿ, 'ಅವರೇನು ಹೆಂಗಸರಲ್ಲ; ಗಂಡಸರು. ಅಂಥಾದೇನು ಅನ್ಯಾಯ ಮಾಡಿದಾಂಗಾತು?' ಎಂದು ಯುಗಯುಗಗಳಿಂದ ನಡೆದು ಬಂದ ಗಂಡಸು ಹೆಂಗಸರ ನಡುವಿನ ನೀತಿಯ ತಾರ ತಮ್ಯಕ್ಕೆ ಜೋತುಬೀಳುತ್ತಿದ್ದರು.

ಮೊದಮೊದಲು ರಾಧಕ್ಕ ಗಂಗಾಸಾನಿಯ ಮನೆಗೆ ಹೋಗುತ್ತಿರಲಿಲ್ಲ. ಆಕೆಯ ಕಡೆಗೆ ತಿರುಗಿ ಸಹ ನೋಡುತ್ತಿರಲಿಲ್ಲ. ಗಂಗಾಸಾನಿಯೂ ಇವರ ಮನೆಗೆ ಬರುವ ಧೈರ್ಯ ಮಾಡಿರಲಿಲ್ಲ. ಆದರೆ ದಿನಗಳೆದಂತೆ, ಮನಸ್ಸಿನ ಗಾಯ ಮಾಯ್ದಂತೆ, ಗಂಗಾಸಾನಿಯ ರೀತಿ-ನೀತಿ, ಆಚಾರ-ವಿಚಾರ, ನಡೆ-ನುಡಿ ಮೊದಲಾದವುಗಳ ಬಗ್ಗೆ ಜನ ಆಕೆಯನ್ನು ಬಾಯ್ತುಂಬ ಹೊಗಳಿದಂತೆ ರಾಧಕ್ಕನವರಲ್ಲಿಯೂ ಆಕೆಯ ಬಗ್ಗೆ ಸಹಾನುಭೂತಿ ಮೂಡಿದ್ದಿತು.

ಶ್ರೀಕಂಠಶಾಸ್ತ್ರಿಗಳೊಮ್ಮೆ ಹದಿನೈದು ದಿನಗಟ್ಟಲೇ ಸಂಚಾರದ ಮೇಲೆ ಹೋದಾಗ, ರಾಧಕ್ಕನವರ ಹಿರಿಯ ಮಗಳಿಗೆ ವಿಷಮಜ್ವರ ಬಂದು ಗಾಬರಿ ಮಾಡಿಸಿದ್ದಿತು. ಆಗ ಗಂಗಾಸಾನಿ ಮೊದಲು ಸಲ ಅವರಲ್ಲಿಗೆ ಹೋಗಿ ನೆರೆಯ ಹಳ್ಳಿಯಿಂದ ಡಾಕ್ಟರನ್ನು ಕರೆತಂದು ಔಷಧೋಪಚಾರ ನಡಿಸಿ, ಹಗಲಿರುಳು ನಿದ್ದೆಗೆಟ್ಟು ಹೊಲಸು ಹೇಸಿಗೆಗಳನ್ನು ಬಳಿದು, ಕೂಸಿನ ಜೀವ ಉಳಿಸಿದಳು. ಅಂದಿನಿಂದ ರಾಧಕ್ಕ ಗಂಗಾಸಾನಿಯನ್ನು ಗೆಳತಿಯಂತೆ, ಮಾತ್ಸರ್ಯವಿಲ್ಲದ ಸವತಿಯಂತೆ, ನಡೆಯಿಸಿಕೊಳ್ಳುತ್ತ ಬಂದಿದ್ದಳು.

ಈಗೀಗ ರಾಧಕ್ಕನ ಮನೆಯ ಮೇಲ್ವಿಚಾರಣೆ ಹೆಚ್ಚುಕಡಿಮೆ ಗಂಗಾಸಾನಿಯದೇ ಎನ್ನಲು ಅಡ್ಡಿಯಿಲ್ಲ. ಶ್ರೀಕಂಠಶಾಸ್ತ್ರಿಗಳು ವಾರದಲ್ಲಿ ನಾಲ್ಕು ದಿನ ಮನೆಯಲ್ಲಿದ್ದರೆ ನಾಲ್ಕು ದಿನ ಸಂಚಾರದ ಮೇಲೆ ಇರುವರು.

ಶಂಭುಲಿಂಗನ ಹೆಸರಿನಲ್ಲಿ ಅವನ ಭಂಡಾರ ಹಚ್ಚಿ ಸುಗ್ಗಿಯಲ್ಲಿ ಕಾಳುಕಡಿಯನ್ನೂ ಉಳಿದ ವೇಳೆಯಲ್ಲಿ ದೇಶಾವರವನ್ನೂ ತರುವರು. ತಂದ ಕಾಳುಕಡಿ ವರುಷದಲ್ಲಿ ಎಂಟು ತಿಂಗಳಾದರೆ, ತಂದ ಹಣ ಕೊಡಕೊಳ್ಳಿಯಲ್ಲಿ ಕೆಲವೊಂದು ಅಂಶವಾದರೆ, ಉಳಿದುದನ್ನು ಗಂಗಾಸಾನಿಯ ಸಹಾಯದಿಂದಲೋ ಬೇರೆ ರೀತಿಯಿಂದ ಏನಾದರೂ ತಾರಾತಿಗಡಿ ಮಾಡಿಯೋ ಬಗೆಹರಿಸಿ ಸಂಸಾರ ಸಾಗಿಸಬೇಕು.

ಸಾಲದುದಕ್ಕೆ ಶ್ರೀಕಂಠಶಾಸ್ತ್ರಿಗಳು ಕಾಮದಾರರಿಗೆ ಮಾಡುವ ಸರಬರಾಯಿ ಮೇಜವಾನಿಗಳು ಬೇರೆ. ತಾಲೂಕಿಗೆ ಹೊಸತಾಗಿ ಯಾರಾದರೂ ಅಧಿಕಾರಿಗಳು— ಅದರಲ್ಲಿಯೇ ಕಂದಾಯದ ಅಧಿಕಾರಿಗಳು— ವರ್ಗವಾಗಿ ಬಂದರೆ ನೋಡಬೇಕು ಶ್ರೀಕಂಠಶಾಸ್ತ್ರಿಗಳ ಆರ್ಭಟವನ್ನು. ಇಂಥ ಸಮಯದಲ್ಲಿಯೇ ಉಪಯೋಗಿಸುವ ಕಾಶ್ಮೀರಿಯ ಶ್ಯಾಲು, ಜರದಂಚಿನ ಧೋತರ, ಪುಣೆಯ ಮೊಚ್ಚೆ, ಬೆಳ್ಳಿಯ ಅಣಸಿನ ಉದ್ದನ್ನ ಬಗಣಿಯ ಕೋಲು—ಇವು ಮೊದಲ ಸಲ ಅವರನ್ನು ಭೆಟ್ಟಿಯಾಗಲು ಹೋಗಬೇಕಾದರೆ ಇರಲೇಬೇಕು. ಇತ್ತೀಚೆಗೆ ' ಶಂಭುಲಿಂಗ ದೇವರ ಅರ್ಚಕರು ' ಎಂದು ಕೊರೆದ ಹಿತ್ತಾಳಿಯ ಫಾಳವಾದ ಬಿಲ್ಲಿಯುಳ್ಳ ಕೆಂಪು ಅರಿವೆಯ ಪಟ್ಟಿಯೊಂದನ್ನು ಬೇರೆ ಮಾಡಿಸಿರುವರು. ಕೈಗೆ ಸಿಕ್ಕವರ ಕೊರಳಲ್ಲಿ ಆ ಪಟ್ಟಿಯನ್ನು ಸಿಲುಕಿಸಿ ಅವರನ್ನು ಮುಂದೆ ಹಾಕಿಕೊಂಡು ಠೀವಿಯಿಂದ ಕೋಲನ್ನು ತಿರುಹುತ್ತ ಅಮಲದಾರರ ಭೆಟ್ಟಿಗೆ ಹೊರಟಾಗ ನೋಡಬೇಕು ಶ್ರೀಕಂಠಶಾಸ್ತ್ರಿಗಳ ಸಡಗರವನ್ನು. ಭೆಟ್ಟಿಯಾದ ಆಫೀಸರರಿಗೆ ತಮ್ಮೂರಿಗೆ ಬರಲು ಔತಣವಿದ್ದುದೇ. ಇವರ ಆಡಂಬರಕ್ಕೆ, ಮಾತಿಗೆ, ಬೆಲೆ ಕೊಟ್ಟು ಯಾರಾದರೂ ಮನೆಗೆ ಬಂದರೆ, ಫಜೀತಿ ಪಡುವವರು ರಾಧಕ್ಕನವರೇ. ಶ್ರೀಕಂಠಶಾಸ್ತ್ರಿಗಳು ಲೋಡಿಗೆ ಆತುಕೊಂಡು ಅಮಲದಾರರ ಎದುರಿಗೆ ಕಥೋಪಕಥೆಗಳಿಂದಲೂ, ಸಂಸ್ಕೃತ ಶ್ಲೋಕಗಳಿಂದಲೂ, ನಡುನಡುವೆ ಇಂಗ್ಲಿಷು ಶಬ್ದಗಳಿಂದಲೂ ಪರಿಪೋಷಿತವಾದ ವಾಗ್ಝರಿಯನ್ನು ಹರಿಯಿಸುತ್ತಿರುವಾಗ, ರಾಧಕ್ಕನವರು ಕೈಯಲ್ಲಿ ಮರ-ಬುಟ್ಟಿಗಳನ್ನು ಹಿಡಿದುಕೊಂಡು ಮಂದಿಯ ಮನೆಗೆ ಕಡಕ್ಕಾಗಿ ಹಿತ್ತಲಬಾಗಿಲಿನಿಂದ ಅಂಡಲೆಯಬೇಕು.

ಒಂದು ಸಲ ಯಾರಾದರೂ ಅಮಲದಾರರು ಬಂದು ಶ್ರೀಕಂಠಶಾಸ್ತ್ರಿ

ಗಳಲ್ಲಿ ಚಹ ಕುಡಿದು ಹೋದರೆ ತೀರಿತು, ಮೂರು ದಿನ ಅವರು ಮೂಗು ಮೇಲೆ ಮಾಡಿಕೊಂಡು ಎದೆ ಸೆಟೆಸಿಕೊಂಡು ಊರಲ್ಲಿ ಓಡಾಡುವರು. ಒಬ್ಬರಿಗೆ ಚಿಮಣಿಯ ಎಣ್ಣೆಯ ಪರವಿಟ್ಟು ಕೊಡಿಸುವದಾಗಿ ಭರವಸೆ ಕೊಟ್ಟು ಅವರಿಂದ ಅರ್ಧ ಚೀಲ ಜೋಳವನ್ನೆತ್ತಿದರೆ, ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ ಅದರ ಸಲುವಾಗಿ ಕಚೇರಿಗೆ ಓಡಾಡಲು ಕನಿಷ್ಠ ಇಪ್ಪತ್ತು ರೂಪಾಯಿಯಾದರೂ ಬೇಕಾಗಬಹುದೆಂದೂ ಹೇಳುವರು. ಊರಲ್ಲಿ ನ್ಯಾಯ-ನಿಗದಿಯಾದರೆ ಒಂದು ಪಕ್ಷದ ವತಿಯಿಂದ ಕೋರ್ಟು-ಕಚೇರಿಗೆ ಓಡಾಡುವ ಮುಂದಾಳ್ತನ ಶ್ರೀಕಂಠಶಾಸ್ತ್ರಿಗಳದೇ.

ಅಂತೂ ಇಂತು ಸಾಗಿದೆ ಶ್ರೀಕಂಠಶಾಸ್ತ್ರಿಗಳ ಸಂಸಾರ.

## ೧೧

ನೃತ್ಯ ನಡೆದಾಗ ತಾನು ಶ್ರೀಕಂಠಶಾಸ್ತ್ರಿಗಳ ಕಣ್ಣಿಗೆ ಬಿದ್ದುದು ಸುಭಗೆಗೆ ಎಳ್ಳಷ್ಟೂ ಸೇರಲಿಲ್ಲ. ನಾಚಿಕೆಯಿಂದ ಆಕೆಯ ಮನ ಒಳಮುಚ್ಚುಗದ ಎಲೆಯಂತೆ ಮುದುಡಿಕೊಂಡಿತು. ಶ್ರೀಕಂಠಶಾಸ್ತ್ರಿಗಳು ಆಗ ಅಲ್ಲಿಗೆ ಬಂದಾರೆಂದು ಮೊದಲು ಯಾಕೆ ಹೊಳೆದಿರಲಿಕ್ಕಿಲ್ಲ ಎಂದು ಹಳಹಳಿಸಿದಳು. ಗಂಡಿಸಿನೆದುರು ಹುಡುಗೆಯಂತೆ ಮೈಮುರಿದು ಕುಣಿದೆನಲ್ಲ ಎಂದು ಕೆಟ್ಟೆನಿಸಿಕೊಂಡಳು. ತಾನು ನೃತ್ಯ ಕಲಿಯುವ ಸುದ್ದಿಯನ್ನು ಅವರು ಜನರ ಮುಂದೆ ಎಲ್ಲಿ ಹೇಳುವರೋ ಎಂದು ಹೆದರಿದಳು.

ಆದರೂ ಆಕೆಯ ಅಂತರಂಗದ ಆನಂದವೀಣೆ ಮಿಡಿಯಹತ್ತಿದ್ದಿತು. ಬಹಳ ದಿನದ ಆಸೆ ಅಂದು ಕೊನರಲು ಹತ್ತಿದುದಕ್ಕೆ ಮೊದಲ ದಿನವಾದರೂ ತನ್ನ ನೃತ್ಯ ಗಂಗಾಸಾನಿಯಿಂದ ಸೈ ಎನಿಸಿಕೊಂಡಿದುದಕ್ಕೆ, ಆಕೆಯ ಹೃದಯ ಅರಳಿತು; ಮನ ಮತ್ತೆ ಹುರುಪುಗೊಂಡಿತು. ಈ ಹುರುಪಿನ, ಈ ಆನಂದದ ಕಾವಿನಿಂದ ಮೊದಲು ಮನದಲ್ಲಿ ಮೂಡಿದ ಆ ಲಜ್ಜೆ, ಆ ಹೆದರಿಕೆ, ಆ ಪಶ್ಚಾತ್ತಾಪ— ಎಲ್ಲ ಆರಿಹೋದವು. ರಾತ್ರಿಯೆಲ್ಲ ಈ ಹೊಸ ಹುರುಪಿನಲ್ಲಿಯೇ ಕಳೆದಳು. ಹಿಂದೆ ಎಂದೂ ಅನುಭವಿಸದ ಹೊಸದಾದ ಆನಂದವನ್ನು ಆಕೆ ಇಂದು ಅನುಭವಿಸಿದಳು.

ಮರುದಿನ ಸೋಮವಾರ ಶಂಭುಲಿಂಗನ ಪಲ್ಲಕ್ಕಿಯ ಉತ್ಸವ. ಬಿಡಿ ದಿನ ಗುಡಿಗೆ ಹೋಗದವರು ಸಹ ಅಂದು ತಪ್ಪದೆ ಉತ್ಸವಕ್ಕೆ ಹೋಗುವರು. ಸನ್ನೆಯನ ಗಾರಿಯಾಗುವದೊಂದೇ ತಡ, ಜನ ಹಿಂಡುಗಟ್ಟಿಕೊಂಡು ಶಂಭು ಲಿಂಗನ ಗುಡಿಯ ಆವಾರದಲ್ಲಿ ನೆರೆಯಿತು.

ಬಗೆಬಗೆಯ ಬಾಬುದಾರರು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಲ್ಲೀನ ರಾದರು. ಓಲಗದವರು ತಿದಿ-ಭಜಂತ್ರಿ-ಢಕ್ಕೆಗಳನ್ನು ಸರಿಪಡಿಸಿಕೊಂಡರು. ಬೋದಿಯವರು ಪಲ್ಲಕ್ಕಿಯ ಸಡಿಲಿದ ಹಗ್ಗಗಳನ್ನು ಸರಿಪಡಿಸಿ, ಮೇಲಿನ ಕೊಲ್ಲಾರಿಗೆ ಗೊಂಡೆಗಳನ್ನು ಕಟ್ಟಿ ಪಲ್ಲಕ್ಕಿಯಲ್ಲಿ ಗಾದಿ-ಲೋಡುಗಳನ್ನು ಇಟ್ಟರು. ಜಜೂರಿಯುವನು ಶಂಭುಲಿಂಗನ ಬೆಳ್ಳಿಯ ಗುಡಗುಡಿಯಲ್ಲಿ ನುರಿ ಯಾಗಿ ನಾದಿದ ಗಾಂಜಾವನ್ನು ಹಾಕಿ ಕೆಂಡವನ್ನು ಹೊತ್ತಿಸಹತ್ತಿದನು. ದೇವರ ಮುಂದೆ ದೀಪ ಮೂಡಿಸುವವನು ಎಲ್ಲ ಸಮೆಗಳಲ್ಲಿ ಎಣ್ಣೆ ಹಾಕಿ ದೀಪಗಳ ಕುಡಿ ಒಡೆದನು. ಅಷ್ಟರಲ್ಲಿ ಮಹಾಲವಾರ ವೀರೇಶ ಹೆಗಲ ಮೇಲೆ ಬೆಳ್ಳಿಯ ಬೆತ್ತವನ್ನು ಹಿಡಿದುಕೊಂಡು, ಹಿಂದೆ ಠೀವಿನಿಂದ ಬರುತ್ತ ಲಿದ್ದ ಶ್ರೀಕಂಠಶಾಸ್ತ್ರಿಗಳಿಗೆ ದಾರಿ ಬಿಡಿಸುತ್ತ ಗುಡಿಯ ಒಳಗೆ ಬಂದನು.

ದೇವರ ಮುಂದೆ ನಿಂತ ಶ್ರೀಕಂಠಶಾಸ್ತ್ರಿಗಳು ಎಡಗೈಯಲ್ಲಿ ಗಂಟೆ ಬಲಗೈಯಲ್ಲಿ ಧೂಪಾರತಿ ಹಿಡಿದು ಮಂಗಳಾರತಿಗೆ ಸುರುವು ಮಾಡಿದ್ದೊಂದೇ ತಡ, ಏಕಕಾಲಕ್ಕೆ ಗುಡಿಯಲ್ಲಿ ನೇತಾಡುತ್ತಿದ್ದ ಎಲ್ಲ ಗಂಟೆಗಳೂ ಬಾರಿಸ ಹತ್ತಿದವು. ನಗಾರಿಖಾನೆಯ ನಗಾರಿ ಬಡಿಯಹತ್ತಿತು; ಬಜಂತ್ರಿ ರಾಗ ಮಾಡಹತ್ತಿತು. ಗೊರವರ ಡಮರುಗಗಳು ಕೈಯಲ್ಲಿ ತಿರುಗಹತ್ತಿದವು; ಒಂದೆಡೆಗೆ ಗುಂಪುಗಟ್ಟಿ ನಿಂತ ಎಲಿಯ ಚಂಚಿಯ ಹೆಣ್ಣುಮಕ್ಕಳು ಚವರ ಹಾಕಹತ್ತಿದರು; ಎಲ್ಲರ ಬಾಯಿಯಿಂದ ಹೊರಡುವ 'ಹರಹರ ಮಹಾ ದೇವ' ಎಂಬ ಧ್ವನಿ ಗುಡಿಯನ್ನು ತುಂಬಿ ಹೊರಹರಿಯಹತ್ತಿತು. ಇವೆಲ್ಲವು ಗಳೂ ಎಂತಹ ಕಲ್ಲೆದೆಯ ನಾಸ್ತಿಕನ ಹೃದಯದಲ್ಲಿ ಸಹ ಶಂಭುಲಿಂಗನ ಬಗ್ಗೆ ಭಕ್ತಿಯ ಒರತಿಯನ್ನು ಹುಟ್ಟಿಸುವಂತಿದ್ದವು.

ಮಂಗಳಾರತಿ ಮುಗಿದ ಮೇಲೆ ಶ್ರೀಕಂಠಶಾಸ್ತ್ರಿಗಳು ಶಂಭುಲಿಂಗನ ಉತ್ಸವಮೂರ್ತಿಯನ್ನು ತಂದು ಮುಂದೆ ತಯಾರಾಗಿ ನಿಂತ ಪಾಲಕಿಯಲ್ಲಿ ಇಟ್ಟರು. ಭಕ್ತಸಮೂಹವೆಲ್ಲ ಪಲ್ಲಕ್ಕಿಯ ಸುತ್ತಲು ನೆರೆಯಿತು;

ದೇವರಿಗೆ ಹಣ್ಣು-ಕಾಯಿ ಮಾಡಿಸಲು ನಾ ಮುಂದೆ ನಾ ಮುಂದೆ ಎಂದು ಮುಂದೆ ಬಂದು ಪೂಜಾರಿಗೆ ದಕ್ಷಿಣೆ ಕೊಟ್ಟು ಗಂಧ-ಭಂಡಾರಗಳನ್ನು ಪಡೆದುದೂ ಆಯಿತು. ಗುಡಿಯ ಪ್ರದಕ್ಷಿಣೆ ಹಾಕಿಕೊಂಡು ಬರಲು ದೇವರ ಪಲ್ಲಕ್ಕಿ ಹೊರಹೊರಟಿತು. ಅಗಸನು ಪಲ್ಲಕ್ಕಿಯು ಹೋಗುವ ದಾರಿಯಲ್ಲಿ ಅರಿವೆಯನ್ನು ಹಾಸುತ್ತ ಮುಂದೆ ಮುಂದೆ ಸಾಗಿದನು. ಭಕ್ತಜನರು ಒಬ್ಬೊಬ್ಬರಾಗಿ ಇಬ್ಬಿಬ್ಬರಾಗಿ ದೇವರ ಪಾದಧೂಳಿಯಿಂದ ಪುನೀತರಾಗುವ ಹುಮ್ಮಸ್ಸಿನಿಂದ ಪಲ್ಲಕ್ಕಿಯು ದಾರಿಯಲ್ಲಿ ಅಡ್ಡ ಮಲಗತೊಡಗಿದರು. ಪಲ್ಲಕ್ಕಿಯ ಹಿಂದೆ ನಿಂತ ಸುಮಂಗಲೆಯರು ಆಗಾಗ ಎಡಗೈ ತೋಳುಗಳಲ್ಲಿ ಜೋತಾಡುತ್ತಿದ್ದ ಎಲಿಯ ಚಂಚಿಯಲ್ಲಿ ವೀಳೆಯದೆಲೆಯನ್ನು ಹರಿದು ಹರಿದು ಸುಳಿ ಮಾಡಿ ಮೂರ್ತಿಯ ಮುಂದೆ ಇಟ್ಟ ಬೆಳ್ಳಿಯ ಪಾತ್ರೆಯಲ್ಲಿ ಇಡುತ್ತ ಚವರಿಯನ್ನು ಹಾಕುತ್ತ ಸಾಗಿದ್ದರು. ಪಲ್ಲಕ್ಕಿಯು ಬದಿಯಲ್ಲಿಯೇ ಛತ್ರ-ಚಾಮರಗಳೂ ಮುಂದೆ ನಗಾರಿ ನೌಬತ್ತುಗಳೂ, ನಡುವೆ ಪತಾಕಿಗಳೂ, ದೂರದಲ್ಲಿ ಓಲಗದ ವಾದ್ಯವೂ ಎಲ್ಲೆಡೆಗೂ ಗೊರವರ ಡಮರುಗ-ತ್ರಿಶೂಲಗಳೂ ಎದ್ದು ಕಾಣುತ್ತಿದ್ದವು. ಜಜೂರಿಯುವನು ದೇವರ ಪಕ್ಕದಲ್ಲಿಯೇ ನಿಂತು, ಬೆಳ್ಳಿಯ ಗುಡುಗುಡಿಯನ್ನು ಎಡಗೈಯಲ್ಲಿ ಹಿಡಿದು, ನಾಳದ ಸಿಂಬಿಯ ಬೆಳ್ಳಿಯ ತುದಿಯನ್ನು ದೇವರ ಬಾಯಿಯಲ್ಲಿ ಇರಿಸಿದ್ದನು. ಭಕ್ತರ ಕೈಯಲ್ಲಿಯ ದೀವಟಿಗೆಗಳು ಎಲ್ಲೆಲ್ಲಿಯೂ ಬೆಳಗುತ್ತಿದ್ದವು.

ಶಂಕರಭಟ್ಟರು ಊರಲ್ಲಿಲ್ಲದ್ದರಿಂದ ಸುಭಗೆ ಸಂಜೆಯ ಊಟವನ್ನು ಬೇಗನೆ ಮುಗಿಸಿಕೊಂಡು ಆಕಳು ಹಿಂಡಿ ಅದೇ ಹಾಲಿಗೆ ಹೆಪ್ಪು ಹಾಕುತ್ತಿದ್ದಳು. ದೇವರು ಹೊರಟಿದ್ದುದು ತಿಳಿದೊಡನೆ ಆಕೆಗೆ ಥಟ್ಟನೆ ನೆನಪಾಯಿತು ಈ ದಿನ ಗುಡಿಯಲ್ಲಿ 'ಅಷ್ಟಾವಧಾನ'ವಿದೆಯೆಂದು. ಆ ವೇಳೆಯಲ್ಲಿ ಗಂಗಾಸಾನಿಯು ಶಂಭುಲಿಂಗನಿಗೆ ನೃತ್ಯಸೇವೆ ಸಲ್ಲಿಸುತ್ತಿದ್ದುದೂ ನೆನಪಿಗೆ ಬಂತು.

ಅವಳ ಗಂಡ ತೀರಿದಂದಿನಿಂದ ಆಕೆ ಗುಡಿಯ ಪವಳಿಯ ಕಡೆಗೆ ಹೋಗಿರಲಿಲ್ಲ—ತಾನೀಗ ದೇವರ ದರುಶನಕ್ಕೆ ಸಹ ಅನರ್ಹಳು ಎಂಬ ಕಾರಣದಿಂದ. ಈ ದಿನ ಅವಳಿಗೆ ಗಂಗಾಸಾನಿಯು ನೃತ್ಯವನ್ನು ನೋಡಬೇಕು ಎಂಬ ಕುತೂಹಲವಾಯಿತು. ಇಂದಿನ ವರೆಗೆ ಅವಳು ನೋಡಿರಲಿಲ್ಲ ಎಂದಲ್ಲ. ನಿನ್ನಿನಿಂದ ಅವಳಲ್ಲಿ ನೃತ್ಯ ಕಲೆಯ ಬಗ್ಗೆ ಆತ್ಮೀಯತೆಯ

ಭಾವನೆ ಮೂಡಿದ್ದಿತು. ಆದುದರಿಂದ ಗಂಗಾಸಾನಿಯ ನೃತ್ಯದಲ್ಲಿ ಅವಳಿಗೆ ಹೊಸತಾದ ಅಭಿರುಚಿ ಹುಟ್ಟಿತು; ನೋಡಬೇಕೆನಿಸಿತು. ಗುಡಿಯಲ್ಲಿ ಈ ಸಮಯದಲ್ಲಿ ಅವಳಿಗೆ ಪ್ರವೇಶವಿಲ್ಲ. ಆದರೂ ಗುಡಿಯ ಹೊರಗೆ ನಿಂತು ಬದಿಯ ಗೋಡೆಯಲ್ಲಿಯ ಹರವಾದ ಎತ್ತರವಾದ ಕಿಡಿಕಿಗಳ ಕಿಂಡಿ ಯೊಂದರಲ್ಲಿ ನಿಂತರೆ ಒಳಗಿನದೆಲ್ಲ ಕಾಣಬಹುದೆಂಬುದು ಹೊಳೆಯಿತು. ಮೊದಮೊದಲು ತಂದೆ ಊರಲ್ಲಿಲ್ಲದಾಗ ರಾತ್ರಿಯ ವೇಳೆಯಲ್ಲಿ ಒಬ್ಬಳೇ ಹೊರಗೆ ಬೀಳುವದೆಂತು ? ಎಂದು ಹಿಂದುಮುಂದು ನೋಡಿದಳು; ಜನಕ್ಕೆ ಹೆದರಿದಳು. ಆದರೂ ಇದರಲ್ಲೇನು ತಪ್ಪಿದೆ ಎಂದಂದುಕೊಂಡು ಮನೆಯ ಬಾಗಿಲನ್ನು ಮುಂದೆ ಮಾಡಿದಳು. ಹೊರಗಿನ ಹುಸಿಯಲ್ಲಿ ಆಗಸರ ಸಂಗ ಮೂಲೆಯಲ್ಲಿಯ ನೆಲಕ್ಕೆ ಹೊಂದಿದ ಮಾಡದಲ್ಲಿಯೊಂದು ದೀವಿಗೆ ಇಟ್ಟು ಕೊಂಡು ತಟ್ಟಿನ ಮೇಲೆ ಕುಳಿತಿದ್ದನು. ಸಾಲೆಯ ಒಬ್ಬ ಹುಡುಗ ಸಣ್ಣ ಪುಸ್ತಕವೊಂದರಲ್ಲಿ ಒಂದೊಂದೇ ವಾಕ್ಯದಂತೆ ಸಂಗನ ನಾಟಕದ ಪಾತ್ರದ ಮಾತು ಓದುತ್ತಿದ್ದನು. ಸಂಗನು ಅದರಂತೆ ಅನ್ನುತ್ತಿದ್ದನು. ಸುಭಗೆ ತಾನೀಗ ಬರುವದಾಗಿಯೂ ಅಲ್ಲಿಯ ವರೆಗೆ ಮನೆಯ ಕಡೆಗೆ ಲಕ್ಷ್ಯವಿಡ ಬೇಕಾಗಿಯೂ ಹೇಳಿ ಗುಡಿಯ ಕಡೆಗೆ ಹೊರಟಳು.

ಆಗಲೇ ದೇವರ ಗುಡಿ ತುಂಬಿದ್ದಿತು; ಮಂತ್ರಪುಷ್ಪ ಸುರುವಾಗಿ ದ್ದಿತು; ‹ಬ್ರಾಹ್ಮಣರ ಮಂತ್ರಘೋಷಣೆಯೊಂದನ್ನುಳಿದು ಉಳಿದ ಜನ ಸಮೂದಾಯವೆಲ್ಲ ಸ್ತಬ್ಧವಾಗಿದ್ದಿತು.' ಸುಭಗೆ ಗಂಗಾಸಾನಿಯ ನೃತ್ಯದ ಸಮಯದ ದಾರೀ ನೋಡುತ್ತ ಕಿಂಡಿಯಲ್ಲಿ ನಿಂತಳು. ಒಳಗೆ ನೆರೆದ ಜನ ಸಮೂಹವನ್ನು ನೋಡಿ ಇಂದು ಆಕೆಯ ಸರಳ ಎಳೆಯ ಮನಸ್ಸಿನಲ್ಲಿ ಹಿಂದೆ ಎಂದೂ ಮೂಡದ ಒಂದು ಕಲ್ಪನೆ ಮೂಡಿತು; ಮನಸ್ಸನ್ನು ಚುಚ್ಚಿತು. ತಾನು ಒಂದು ಕಡೆ; ಆ ಜನ ಸಮುದಾಯ ಇನ್ನೊಂದು ಕಡೆ; ಅವರು ದೇವಸಾನಿಧ್ಯದಲ್ಲಿ; ತಾನು ಅವರಿಂದ ದೂರ. ಅವರೆಲ್ಲ ಒಂದು; ತಾನು ಮಾತ್ರ ಒಬ್ಬಳೇ ಬೇರೆ. ಅವರ ತನ್ನ ನಡುವೆ ಅಡ್ಡವಾದ ಕಲ್ಲಿನ ಗೋಡೆ. ತನ್ನ ಅವರ ನಡುವಿನ ಈ ಅಂತರ ತನ್ನ ಜನ್ಮವಿರುವ ವರೆಗೂ ಇದ್ದುದೇ. ಸುಭಗೆ ಕಳವಳಗೊಂಡಳು; ಕುಣಕಿಯ ಕಣ್ಣೀರ ಹನಿ ಯನ್ನು ಒರಸಿಕೊಂಡಳು.

ಇಷ್ಟರಲ್ಲಿ ಮೂಲದಾರ ವೀರೇಶ ಗರ್ಭಗುಡಿಯ ಮುಂದಿನ ಪಟಾಂಗಣದಲ್ಲಿ ಜನರನ್ನು ಹಿಂದೆ ಸರಿಸಿ ದೇವರ ಮುಂದೆ ಬಯಲುಮಾಡಿದನು. ದೀವಟಿಗೆ ಹಿಡಿದ ನಾಲ್ವರು ಭಕ್ತರನ್ನು ನಾಲ್ಕು ಮೂಲೆಗಳಲ್ಲಿ ನಿಲ್ಲಿಸಿ ಬೆಳಕನ್ನು ಹೆಚ್ಚಿಸಿದನು. ಹೆಂಗಸರ ಹಿಂಡಿನಲ್ಲಿ ನಿಂತಿದ್ದ ಗಂಗಾಸಾನಿ ತನ್ನ ಚವರಿ ಎಲಿಯ ಚಂಚಿಗಳನ್ನು ಬೇರೊಬ್ಬಳ ಕೈಯಲ್ಲಿ ಕೊಟ್ಟು ಸೀರೆಯ ಸೆರಗನ್ನು ಅಡ್ಡ ಕಟ್ಟಿದಳು. ಗೆಜ್ಜೆಗಳನ್ನು ಕಟ್ಟಿ ದೇವರ ಮುಂದೆ ಬಂದಳು. ಗಂಗಾಸಾನಿ ಕಿಂಡಿಯ ಹಿಂದೆ ಕತ್ತಲದಲ್ಲಿ ನಿಂತ ಸುಭಗೆಯನ್ನು ನೋಡಲಿಲ್ಲ. ಗಂಗಾಸಾನಿಯನ್ನು ನೋಡಿದೊಡನೆ ಸುಭಗೆಯ ಮೋರೆ ಹಿಗ್ಗಿತು.

ಇಂದು ಗಂಗಾಸಾನಿ ಜರಿಯ ಹೂವುಗಳುಳ್ಳ ಹಸಿರು ಸೀರೆಯನ್ನು ಉಟ್ಟಿದ್ದಳು, ಕೂದಲುಗಳಿಗೆ ಬುಚುಡ ಕಟ್ಟಿ, ಮಲ್ಲಿಗೆಯ ಮಾಲೆ ಹಾಕಿದ್ದಳು. ದೀವಟಿಗೆಯ ಬೆಳಕಿನಿಂದ ಆಕೆಯ ಮುಖಕ್ಕೆ ಸುವರ್ಣದ ಕಾಂತಿಯೇರಿತ್ತು.

ಆಕೆಯ ಕುಣಿತ ಐದೇ ಐದು ನಿಮಿಷವಾಯಿತು. ಐದು ನಿಮಿಷಗಳ ಅಲ್ಪಾವಧಿಯಲ್ಲಿ ತನ್ನಲ್ಲಿದ್ದ ಕಲೆಯ ಸಾರಾಂಶವನ್ನು ಸೂರೆ ಮಾಡಿದಳು. ಆಕೆಯ ತಾಲಬದ್ಧವಾದ ಗೆಜ್ಜೆಯ ಹೆಜ್ಜೆ, ನೀರ ತೆರೆಯಂತೆ ಹಾವಿನ ಮೈಯಂತೆ ಬಳಕಾಡುತ್ತಲಿದ್ದ ಆಕೆಯ ನಿಡಿದಾದ ತೋಳ್ಗಳು, ಆಕೆಯ ಅಂಗದ ಬಗೆಬಗೆಯ ಮಧುರ ಭಂಗಿ, ಅಂತರ್ಗತ ಭಾವನೆಯನ್ನೂ ವಿಚಾರವನ್ನೂ ಸ್ಪಷ್ಟವಾಗಿ ವ್ಯಕ್ತಮಾಡುವ ಆಕೆಯ ಮುಖದ ಹಾವಭಾವ, ಚಿಣಿಗೆಯ ಹಾವಿನಂತೆ ಚುರುಕಾದ ಆಕೆಯ ಕೈಬೆರಳುಗಳು—ಎಲ್ಲವೂ ಭಕ್ತರ ಹೃದಯಕಮಲವನ್ನು ಅರಳಿಸಿದವು; ಆಕೆಯ ನೃತ್ಯದ ಗರ್ಭಿತಾರ್ಥವನ್ನು ಎಲ್ಲರ ಮನದ ಮೇಲೆ ಮೂಡಿಸಿದವು. ಸಣ್ಣ ಮಗುವಿಗು ಸಹ ಅವಳ ಅಂದಿನ ನೃತ್ಯದಲ್ಲಿ ಅಡಕವಾದ, ಅಭಿನಯದಿಂದ ವ್ಯಕ್ತವಾದ, ಅರ್ಥ ಇಂತು ಇದ್ದಿತು ಎಂದು ತಿಳಿಯುವಂತಿತ್ತು. ಒಬ್ಬ ಭಕ್ತಳು ದೇವರ ಪೂಜೆಗಾಗಿ ಪುಷ್ಪಸಂಚಯ ಮಾಡುತ್ತಲಿರುವಳು; ಹುಡುಕಿ ಹುಡುಕಿ ಒಳ್ಳೆಯ ಹೂಗಳು ಕಂಡೊಡನೆ ಹಿಗ್ಗಿ ಹಿಗ್ಗಿ ಹೂಗಳನ್ನು ಆಯ್ದು ಬುಟ್ಟಿಯಲ್ಲಿ ಹಾಕಿಕೊಳ್ಳುವಳು; ದೇವರ ಅರ್ಚನೆ ಸುರುವುಮಾಡುವದರಲ್ಲಿಯೇ ಅಲ್ಪಜೀವಿಗಳಾದ ಆ ಹೂಗಳು ಬಾಡಿ ಅವುಗಳ ಸೌಂದರ್ಯ ಕ್ಷಣಿಕವೆನಿಸಿ

ಅವಳ ಮನವೂ ಬಾಡುವದು. ಕಡೆಗೆ ಬಾಡಿದ ಆ ಹೂಗಳನ್ನು ಅಲ್ಲಿಯೇ ಚಲ್ಲಿ ತನ್ನ ಆತ್ಮವನ್ನೇ ಹೂವೆಂದು ದೇವರಿಗೆ ಅರ್ಪಿಸುವಳು, ಮುಡಿಸುವಳು.

ಗುಡಿಯಲ್ಲಿ ಕಿಕ್ಕಿರಿದು ತುಂಬಿದ ಜನ ಐದು ನಿಮಿಷ ಏಕಾಗ್ರಚಿತ್ತ ರಾಗಿ ಎವೆಯಿಕ್ಕದೆ ಅವಳನ್ನೇ ಪೂಜ್ಯಬುದ್ಧಿಯಿಂದ ನೋಡುತ್ತಿದ್ದರು. ಅವಳ ಭಾವನಾಲಹರಿಯಲ್ಲಿ ತಮ್ಮ ಭಾವನೆಗಳನ್ನು ಏಕರೂಪಗೊಳಿಸಿ ದ್ದರು; ಅವಳ ಮನಸ್ಸಿನೊಡನೆ ತಮ್ಮ ಮನಸ್ಸನ್ನು ಹೊಸೆದಿದ್ದರು. ಅವಳು ಪುಷ್ಪಸಂಚಯಕ್ಕೆ ಅಲೆದಾಡುತ್ತಿದ್ದಾಗ ಅವರ ಕಣ್ಣುಗಳು ಅಲೆದಾಡುತ್ತಿದ್ದವು. ಅವಳು ಒಳ್ಳೆ ಹೂಗಳನ್ನು ಪಡೆದು ಹಿಗ್ಗಿದಾಗ ತಾವೂ ಹಿಗ್ಗುತ್ತಿದ್ದರು. ಹೂವು ಬಾಡಿ ಅವಳ ಮುಖವೂ ಬಾಡಲು ತಾವೂ ಸಣ್ಣ ಮೋರೆ ಮಾಡು ತ್ತಿದ್ದರು. ಅವಳು ದೇವರಿಗೆ ಭಕ್ತಿಯಿಂದ ಆತ್ಮಾರ್ಪಣೆ ಮಾಡಿ, ಆನಂದಾತಿ ರೇಕದಿಂದ ಮೈಮರೆದು ಕೆಳಗೆ ಉರುಳಿದಾಗ ಅವರೂ ಭಾವನಾಪರವಶ ರಾಗಿ ಏಕಕಂಠದಿಂದ 'ಹರಹರ ಮಹಾದೇವ' ಎಂದು ಒದರಿದರು.

ಕಿಡಿಕಿಯ ಆಚೆಯಲ್ಲಿ ಎರಡೂ ಮುಂಗೈಗಳನ್ನು ಹೊಂದಿಸಿ, ಅವುಗಳ ಮೇಲೆ ಗದ್ದವನ್ನಿಟ್ಟು ನೋಡುತ್ತಿದ್ದ ಸುಭಗೆಯೀಗ ಅಲ್ಲಿರಲಿಲ್ಲ. ಗಂಗಾ ಸಾನಿಯ ನೃತ್ಯದ ಕಲ್ಪನೆಯ ಬೆನ್ನುಹತ್ತಿ ಹೋಗಿದ್ದಳು. ಇಂದಿನ ವರೆಗೆ ಸಮಾಜದ ಕಟ್ಟುನಿಟ್ಟುಗಳ ಚಳಿಯಿಂದ ಹೆಪ್ಪುಗಟ್ಟಿದ ಅವಳ ಭಕ್ತಿಭಾವಕ್ಕೆ ಇಂದು ಕಾವು ಏರಿ ಕಣ್ಣಿನಲ್ಲಿ ರೂಪಗೊಂಡಿದ್ದಿತು. ಸಮಾಜವನ್ನು ಧಿಕ್ಕರಿಸಿ ಧೈರ್ಯದಿಂದ ಒಳಗೆ ಹೋಗಿ ಗಂಗಾಸಾನಿಯ ಜೊತೆಯಲ್ಲಿ ಅವಳ ಆತ್ಮದ ಇನ್ನೊಂದು ದೇಹವಾಗಿ ಶಂಭುಲಿಂಗನ ಪಾದದಡಿಯಲ್ಲಿ ಬೀಳಲಾ ಎನಿಸಿತು ಅವಳಿಗೆ. ತಾನು ಮಾಡಿದ ಯಾವ ತಪ್ಪಿಗಾಗಿ ಶಂಭುಲಿಂಗನಿಗೆ ತಾನು ಬೇಡಾ ಗಿದ್ದಾಳೆ ಎಂಬ ಪ್ರಶ್ನೆ ಮೊದಲ ಸಲ ಆಕೆಯ ಮನಸ್ಸಿನಲ್ಲಿ ಮೂಡಿ ಮುಗ್ಧ ತೆಯ ಪದರಿನಲ್ಲಿ ಮಾಯವಾಯಿತು.

ಮಂತ್ರಪಠಣದಲ್ಲಿ ತಮ್ಮದೂ ದನಿಗೂಡಿಸುತಲಿದ್ದ ಶ್ರೀಕಂಠಶಾಸ್ತ್ರಿ ಗಳು ಗಂಗಾಸಾನಿಯ ನರ್ತನದ ಸೇವೆ ಸುರುವಾದೊಡನೆ ಬಾಗಿಲಿನಲ್ಲಿ ಬಂದು ನಿಂತಿದ್ದರು. ನಾಶೀಪುಡಿಯನ್ನು ಸೇದಬೇಕೆನಿಸಿತಾದುದರಿಂದ ಭಕ್ತಜನ ರಲ್ಲಿ ಅಸಹ್ಯವಾಗಬಾರದೆಂದು ಸುಭಗೆ ನಿಂತ ಕಿಂಡಿಯ ಕಡೆಗೆ ಮೂಲೆಯಲ್ಲಿ

ಹೋದರು. ಕಿಂಡಿಯತ್ತ ಒಮ್ಮೆ ಅಚಲದೃಷ್ಟಿಯನ್ನಿಟ್ಟರು.

'ಯಾರದು?' ಎಂದರು ಅವರು.

ಸುಭಗೆಗೆ ಮತ್ತೆ ಚೇಳು ಕಡಿದಂತಾಯಿತು.

'ನಾನು' ಎಂದಳಾಕೆ.

'ಇಲ್ಲಿ ಯಾಕೆ ಬಂದಿದ್ದಿ ಸುಭಗಾ?'

'ಯಾಕೂ ಇಲ್ಲ; ಸುಮ್ಮನೆ ಬಂದಿದ್ದೆ.'

ತಮ್ಮ ಸಮೀಪದಲ್ಲಿಯೇ ತಮ್ಮ ಕಣ್ಣು ಮುಂದೆಯೇ ಇದ್ದು ಬೆಳೆದ ಸುಭಗೆಯ ದೇಹದಲ್ಲಿ, ಕಂಠದಲ್ಲಿ ಒಡೆದು ಕಾಣುತ್ತಿದ್ದ ಶ್ರೀಕಂಠಶಾಸ್ತ್ರಿಗಳು ಅಚ್ಚರಿಗೊಂಡರು. ಹುಡಿಗೆಯಿದ್ದಾಗಿನ ಅವಳ ಸಲಿಗೆ ಇಂದು ಅವಳಲ್ಲಿ ಇರಲಿಲ್ಲ. ಆಗ ಅವಳ ಬಾಯಿಯಿಂದ ಹೊರಡುವ ಶಬ್ದಗಳು ಅರಳು ಹುರಿದಂತೆ ಬರುತ್ತಿದ್ದವು. ಇಂದು ಮಾತಿನಲ್ಲಿ ಮಿತಿಯಿದ್ದಿತು. ಬಿಗುವಿದ್ದಿತು. ಆಗ ಅವಳು ಮಾತಾಡಲು ಹತ್ತಿದೊಡನೆ ಮುಖವು ಅರಳುತ್ತಿದ್ದಿತು. ನಗೆ ಹೊರಹೊಮ್ಮುತ್ತಿದ್ದಿತು. ಇಂದು ಬರಿಯ ವಿನಯದ ಚಿಹ್ನವಾಗಿ ಮೃದು ಹಾಸ ಮೇರೆದೋರಿ ಮಾಯವಾಗುತ್ತಿತ್ತು. ಅಂದು ಆಕೆಯ ಧ್ವನಿಯಲ್ಲಿ ವೀಣೆಯ ಮಂಜುಲತೆ ಇರುತ್ತಿದ್ದಿತು. ಇಂದು ಅದರಲ್ಲಿ ಗಂಟೆಯ ನಾದದ ಮಧುರಗಾಂಭೀರ್ಯ ಬೆಳೆದುಕೊಂಡಿದ್ದಿತು. ಇಂದು ಸುಭಗೆ ಪೂರ್ಣವಾಗಿ ಅರಳಿದ ಹೆಂಗಸು ಎನಿಸಿತವರಿಗೆ.

ಸುಭಗೆ ಹೆಚ್ಚು ಮಾತಾಡಲಿಲ್ಲ; ಕಿಂಡಿಯಿಂದ ಹಿಂದೆ ಸರಿದು ಕಾಣದಾದಳು.

## ೧೨

ಮರುದಿನ ಮುಂಜಾವಿನಲ್ಲಿ ಶಂಕರಭಟ್ಟರು ಆದೇ ತಾನೇ ಸ್ನಾನ ಮಾಡಿ ದೇವರ ಪೂಜೆಗೆ ಕುಳಿತಿದ್ದರು. ಹೊರಗಿನಿಂದ ಧ್ವನಿ ಬಂತು:

"ಶಂಕರಭಟ್ಟರೇ, ಇದ್ದಾರೇನು, ಸುಭಗಾ, ನಿಮ್ಮ ಅಪ್ಪ ?"

ಶಂಕರಭಟ್ಟರಿಗಾಗಲಿ ಬಚ್ಚಲಮನೆಯಲ್ಲಿದ್ದ ಸುಭಗೆಗಾಗಲಿ ಶ್ರೀಕಂಠ ಶಾಸ್ತ್ರಿಗಳ ಧ್ವನಿ ಗುರುತಿಸಲು ಕಠಿಣವಾಗಲಿಲ್ಲ.

"ಇದ್ದೇನಿ ಬಾ ಶ್ರೀಕಂಠ, ಕೂಡುಬಾ ವಳಗ. ಸುಭಗಾ, ಇಲ್ಲಿ ಒಂದು ಮಣೀ ಹಾಕವ್ವ?" ಎಂದರು ಶಂಕರಭಟ್ಟರು.

ಶ್ರೀಕಂಠಶಾಸ್ತ್ರಿಗಳು ನೇರವಾಗಿ ಅಡುಗೆಯ ಮನೆಯಲ್ಲಿಯೆ ಹೊಕ್ಕರು. ಸುಭಗೆಯು ತಂದಿಟ್ಟ ಮಣೆಯ ಮೇಲೆ ಕುಳಿತುಕೊಂಡರು.

"ಊರಾಗ ಇದ್ದಂಗ ಕಾಣಲಿಲ್ಲ. ಇವತ್ತ ಬಂದ್ರೇನು?"

"ಹೌದು, ಹಳ್ಳಿಗೆ ಗೋಗಿದ್ದೆ ಲಾವಣೀ ವಸೂಲಿಗೆ. ನೀ ಎಲ್ಲಿಯೂ ಹಳ್ಳೀ ಮ್ಯಾಲೆ ಹೋಗಿಲ್ಲ?"

"ಏನು ಹೋಗತೀರಿ ಹಳ್ಳೀಮ್ಯಾಲೆ? ಭಕ್ತರ ಕೈಯಾಗ ದುಡ್ಡಿಲ್ಲ. ಇಷ್ಟಾಗಿ ದೇವರ ವಿಷಯಕ್ಕ ಈಗ ಜನರ ಭಕ್ತೀನೂ ಕಡಿಮಿ ಆಗೇದ. ಅಂತಃನ ನಾನೀಗ ಸಂಚಾರಕ್ಕ ಹೋಗೋದು ಕಡಿಮಿ ಮಾಡಿಬಿಟ್ಟೇನಿ." ಎಂದಂದು ಶಂಕರಭಟ್ಟರ ಜಂತಿಯ ಕಡೆಗೆ ಕಣ್ಣಾಡಿಸಿದಂತೆ ಮಾಡಿ, ಅದನ್ನು ಬಚ್ಚಲ ಮನೆಯ ಕಡೆಗೆ ಹೊರಳಿಸಿ ಮತ್ತೆ ಶಾಸ್ತ್ರಿಗಳ ಕಡೆಗೆ ಎಳೆತಂದರು.

ಶಂಕರಭಟ್ಟರು ಸುಭಗೆಗೆ ಎಂದರು "ಸುಭಗಾ, ಶ್ರೀಕಂಠ ಮಾಮಾಗ ಒಂದಿಷ್ಟು ಹಣ್ಣುತುಪ್ಪ ತಂದು ಕೊಡವ್ವ. ಹಂಗಃ ಇದ್ಲೀ ಒಲೀಗೆ ನೀರ ಒಲಿಯೊಳಗಿನ ಕೆಂಡಾ ಹಾಕು. ಸ್ವಲ್ಪ ಚಹಾಕ ಇಡತೇನಿ."

"ಚಹಾ ಏನು ಮಾಡತೀರಿ ಬಿಡಿರಿ, ಶಂಕ್ರಭಟ್ಟರ ಈಗ, ನಾನೂ ಗುಡೀ ಪೂಜೆಗೆ ಸ್ನಾನಾ ಮಾಡಬೇಕಾಗೇದ." ಎಂದರವರು.

"ಮುಂಜಾನೆ ಮನೀಗೆ ಹುಬ್ಬಳ್ಳಿಂದ ಒಬ್ಬ ಭಕ್ತರು ಬಂದಿದ್ದರು. ದೇವರಿಗೆ ಹಣ್ಣು-ತುಪ್ಪ ಮಾಡ್ಸಿ ಇದೇ ಹೋದ್ರು. ಮನೀ ತುಪ್ಪ ಘಮಘಮ ಅಂತಃದ ತಿಂದು ನೋಡು" ಎಂದರು ದೇವರ ಕಟ್ಟೆಯಿಂದ ಕೆಳಗಿಳಿಯುತ್ತ ಶಂಕರಭಟ್ಟರು. ಇದ್ದಲಿಯ ಒಲೆಯ ಕೆಂಡದ ಮೇಲೆ ಎಸರಿಗೆ ನೀರು ಇಟ್ಟು ಬಂದರು. ಸುಭೆಗೆ ಬಾಳಿಯ ಎಲೆಯೊಂದರಲ್ಲಿ ಹಣ್ಣುತುಪ್ಪವನ್ನು ತಂದಿಟ್ಟಳು ಶಾಸ್ತ್ರಿಗಳ ಎದುರು.

ಹಣ್ಣುತುಪ್ಪವೆಂಬುದು ಬಾಳಿಯ ಹಣ್ಣು, ತುಪ್ಪ, ಸಕ್ಕರಿ ಕೂಡಿದ ಒಂದು ಮಿಶ್ರಣ. ಗುಡಿಯ ಮುಂದೆ ಗೊರವರು ಸಾಲಾಗಿ ಇಟ್ಟುಕೊಂಡ ಕಂಚಿನ ಡೋಣಿಗಳಲ್ಲಿ ಈ ಮಿಶ್ರಣವನ್ನು ಹಾಕುತ್ತಿರುತ್ತಾರೆ. ಗೊರವರು ನಾಯಿಗಳು ಒದರುವಂತೆ ಒದರುತ್ತ ಕಡಿದಾಡುವ ನಟನೆ ಮಾಡುತ್ತ ಇದನ್ನು ಡೋಣಿಯಿಂದ ತಿನ್ನುತ್ತಿರುತ್ತಾರೆ.

ಹಣ್ಣುತುಪ್ಪವನ್ನು ಮುಂದಿಡಲು ಬಾಗಿದ ಸುಭಗೆಯನ್ನು ಶ್ರೀಕಂಠ ಶಾಸ್ತ್ರಿಗಳು ಅಡಿಯಿಂದ ಮುಡಿಯ ವರೆಗೆ ನೋಡಿದರು. ಸುಭಗೆ ನಾಚಿದಳು; ನಡುಮನೆಯ ಕಡೆಗೆ ಹೋದಳು.

ಶಂಕರಭಟ್ಟರ ದೇವರ ಪೂಜೆ ಮುಗಿಯಿತು. ನಡುವೆ ನಡುವೆ ಆ ಹರಟೆ ಈ ಹರಟೆಯೂ ಆಯಿತು. ಆಮೇಲೆ ಚಹವನ್ನು ಕುಡಿಯುವದೂ ಮುಗಿಯಿತು. ಅರ್ಧ ತಾಸಿನ ವರೆಗೆ ಹರಟೆಯಾದರೂ ಶ್ರೀಕಂಠಶಾಸ್ತ್ರಿಗಳು ಅಲ್ಲಿಗೆ ಬಂದ ಉದ್ದೇಶ ಹೊರಗೆ ಬೀಳಲಿಲ್ಲ. ಅರ್ಧ ತಾಸಿನ ಮೇಲೆ ತಾವೂ ಸ್ನಾನ ಮಾಡುವದಾಗಿ ಹೇಳಿ ಅವರು ಹೊರಟುಹೋದರು. ಇತ್ತೀಚೆಗೆ ಅದಾವದೇ ಕಾರಣದಿಂದ ಮನೆಗೆ ಬರುವದನ್ನು ಬಿಟ್ಟಿದ್ದ ಶ್ರೀಕಂಠ ಶಾಸ್ತ್ರಿಗಳು ಮತ್ತೆ ತಮ್ಮ ಮನೆಗೆ ಬರಲು ಹತ್ತಿದುದಕ್ಕೆ ಶಂಕರಭಟ್ಟರಿಗೆ ಆನಂದವಾಯಿತು.

## ೧೩

ನಾಟಕದ ತಯಾರಿ ಜೋರಿನಿಂದ ನಡೆಯಿತು. ಶಂಕರಭಟ್ಟರೂ ಇತ್ತೀಚೆಗೆ ಅದೊಂದರಲ್ಲಿಯೇ ಮನಸ್ಸು ಹಾಕಹತ್ತಿದ್ದರು. ಹಳ್ಳಿಯ ಮೇಲೆ ಹೋದ ಜನರೂ ತಿರುಗಿ ಬಂದಿದ್ದರು. ಶೆಟ್ರ ಶಂಕ್ರೆಪ್ಪನೂ ಶ್ಯಾನುಭೋಗ ಸೀನಪ್ಪನೂ ಕೂಡಿ ತಮ್ಮಿಬ್ಬರದೇ ಒಂದು ಕಮೀಟಿಯನ್ನು ಮಾಡಿಕೊಂಡು ದುಡ್ಡು ಕೂಡಿಸುವ ಕೆಲಸವನ್ನು ಕೈಕೊಂಡಿದ್ದರು. ಹೋದ ಸಲದ ಹುಣ್ಣಿವೆಗೆ ಜನ ಬಹಳ ಬಂದಿತ್ತಾದ್ದರಿಂದ, ಬಾಳಿಯ ಹಣ್ಣನ್ನು ಆಣೆಗೆ ಒಂದರಂತೆಯೂ ಮಾರಿ ಅಂಗಡಿಕಾರರು ಕೈತುಂಬ ರೊಕ್ಕ ಮಾಡಿಕೊಂಡಿದ್ದರಿಂದ ಅವರೂ ಮುಕ್ತಹಸ್ತದಿಂದ ನಾಟಕದ ಪಟ್ಟಿಯನ್ನು ಕೊಟ್ಟರು. ಹಳ್ಳಿಯ

ಮೇಲೆ ಹೋಗಿ ಬಂದ ಗೊರವರೂ ಡೋಣಿಗೆ ಒಂದು ರೂಪಾಯಿಯಂತೆ ನಾಟಕದ ಪಟ್ಟಿಯನ್ನು ಜಮಾ ಮಾಡಿದರು. ಭರವಸೆ ಕೊಟ್ಟವರ ಮಾತನ್ನು ಬಿಟ್ಟರೂ ಕೈಯಲ್ಲಿ ಬಂದ ಹಣ ಐನೂರಕ್ಕೆ ಮೀರಿದ್ದನ್ನು ನೋಡಿ ಶಂಕರ ಭಟ್ಟರಿಗೂ ನಾಟಕದಲ್ಲಿ ಭಾಗ ವಹಿಸಿದ ಉಳಿದವರಿಗೂ ಮಿಗಿಲಾದ ಆನಂದ ವಾಗಿದ್ದಿತು.

ಮಾತುಗಳನ್ನು ಪಾಠಮಾಡುವ ಕೆಲಸ ಸಹ ತೃಪ್ತಿಕರವಾಗಿಯೇ ಸಾಗಿದ್ದಿತು. ಮಾಸ್ತರರು ಸಾಲೆಯಲ್ಲಿ ಇತ್ತೀಚಿಗೆ ಬರಿಯ ಮಾತು ಪಾಠ ಮಾಡುವದರಲ್ಲಿಯೇ ಹೊತ್ತು ಕಳೆಯುತ್ತಿದ್ದರು. ಎಲ್ಲ ಹುಡುಗರಿಗೂ ತಾವು ಮನೆಯಲ್ಲಿ ಓದಿಕೊಂಡು ಬಂದ ಪಾಠವನ್ನು ಪಾಟಿಯ ಮೇಲೆ ಬರೆದು ತೋರಿಸುವದಕ್ಕೆ ಹೇಳುತ್ತಿದ್ದರು. ಸಣ್ಣ ಹುಡುಗರಿಗೆ ಸಾಲು ಹಿಡಿದು 'ಒಂದ'ಕ್ಕೆ ಹೋಗಬೇಕಾಗಿಯೂ ಬೇಗ ಒಳಗೆ ಬರಬಾರದಾಗಿಯೂ ಹೇಳಿ, ತಾವು ಖುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ಕಾಲು ಒಗೆದುಕೊಂಡು ತೊಡೆಯ ಮೇಲೆ ಮಾತಿನ ಪುಸ್ತಕ ಇಟ್ಟುಕೊಂಡು, ಎಡಗೈಯಿಂದ ಎಣ್ಣೆ ಮೆತ್ತಿದ ಕ್ರಾಪಿನ ಕೂದಲ ತಿರುವುತ್ತ ಮಾತನ್ನು 'ರೂ' ಹಾಕುತ್ತಿದ್ದರು. ನಾಟಕದ ಮಾತು ಬೈಲಾಟದ ಮಾತುಗಳಂತೆ ಒಳ್ಳೇ ಹುರಿಕಟ್ಟಾಗಿ ಬಾಯಿತುಂಬ ಬರುತ್ತಿದ್ದಿಲ್ಲವಾದ್ದರಿಂದ ಅಗಸರ ಸಂಗನಿಗೆ ಸ್ವಲ್ಪ ಅಸಮಾಧಾನವಾಗಿದ್ದಿತಾದರೂ ಸಾಲಿಯ ಹುಡುಗರ ಸಹಾಯದಿಂದ ಅವೆಲ್ಲವನ್ನೂ ಹೇಳಿಸಿಕೊಂಡು ಎಲ್ಲ ಮಾತುಗಳನ್ನೂ ಕಣ್ಣು ಮುಚ್ಚಿ ಮೊದಲಿನಿಂದ ಕೊನೆಯ ವರೆಗೆ ಒಂದೇ ಉಸುರಿನಲ್ಲಿ ಹೇಳುತ್ತಿದ್ದನು. ಕಲ್ಲೀಮೀಸೆಯ ಅಕ್ಕಸಾಲಿ ರುದ್ರಪ್ಪನು ತನಗೆ ದಶರಥನ ಪಾತ್ರ ಸಿಕ್ಕಿದುದು ಎಲ್ಲರಿಗೂ ತಿಳಿದೊಡನೆ, ಊರಲ್ಲಿ ಒಳ್ಳೆ ಗಾಂಭೀರ್ಯದಿಂದ ಎದೆಸೆಟೆಸಿ ಮುಖ ಮೇಲೆ ಎತ್ತಿ ದಶರಥನ ರಾಜಠೀವಿಯಲ್ಲಿಯೇ, ಓಡಾಡಹತ್ತಿದನು.

ಹಳ್ಳಿಯ ಮೇಲೆ ಹೋದ ಗೊರವರೆಲ್ಲ ಬೆಟ್ಟಕ್ಕೆ ತಿರುಗಿ ಬಂದರು. ಹೊಲ-ಮನೆಯ ಕೆಲಸದವರೂ ಬಿತ್ತಿಗೆಯ ಕೆಲಸ ಮುಗಿಸಿಕೊಂಡು ಮನೆಯಲ್ಲಿಯೇ ವಿಶ್ರಾಂತಿ ಪಡೆಯಹತ್ತಿದರು. ನಾಟಕದ ತಾಲೀಮು ಶಂಕರ ಭಟ್ಟರ ಮನೆಯಲ್ಲಿಯೇ ಸುರುವಾಯಿತು. ರಾತ್ರಿ ಒಂಬತ್ತು ಗಂಟೆಯ ನಂತರ ಎಲ್ಲರೂ ಊಟ-ಉಪಚಾರ ಮುಗಿಸಿಕೊಂಡು ಶಂಕರಭಟ್ಟರ ನಡು

ಮನೆಯಲ್ಲಿ ನೆರೆಯಹತ್ತಿದರು—ಎಲಿಯಡಿಕೆ ಕಡ್ಡೀ ಪುಡಿಯ ರಾಶಿಯನ್ನೂ ಬೀಡಿಗಳ ಕಟ್ಟುಗಳನ್ನೂ ಮುಂದೆ ಚೆಲ್ಲಿಕೊಂಡು. ಬೈಲಾಟದ ಹಳೆಯ ಹಾರ್ಮೋನಿಯಂ ಸದ್ಯಕ್ಕೆ ಕೆಲಸ ಸಾಗಿಸಹತ್ತಿತು. ಎಲ್ಲ ಜನರು ನೆರೆದೊಡನೆ ಶಂಕರಭಟ್ಟರು ಒಂದೊಂದೇ ಪ್ರವೇಶದ ಜನರನ್ನು ಮುಂದೆ ಕೂಡಿಸಿಕೊಂಡು ಮೊದಲು ಮಾತುಗಳನ್ನು ಕೂಡಿಸಹತ್ತಿದರು. ಬೈಲಾಟದ ಮಾತುಗಳನ್ನೆಲ್ಲ—ಅಳುವದಾಗಲಿ ನಗುವದಾಗಲಿ—ಎಲ್ಲವನ್ನೂ ಆವೇಶದಲ್ಲಿಯೇ ಮಾತನಾಡಿ ರೂಢಿಯಾಗಿದ್ದ ಹಳ್ಳಿಗರನ್ನು ತಿದ್ದುವದು ಶಂಕರಭಟ್ಟರಿಗೆ ಮೊದಲು ಬಹಳ ತೊಂದರೆಯಾಯಿತು. ಪಾತ್ರವಹಿಸಿದವರಿಗೆ ಸಹ ಕುಣಿತವಿಲ್ಲದ ಮಾತೂ ಹಾವಭಾವಗಳೂ ಸಪ್ಪಗೆ ಎನಿಸಹತ್ತಿದವು. ಪದಗಳನ್ನು ಕಲಿಸುವ ಹೊಣೆ ಸದ್ಯ ಮಾಸ್ತರರ ಮೇಲೆಯೇ ಬಿದ್ದಿತು. ಅವರು ಎಷ್ಟೇ ಪ್ರಯತ್ನ ಮಾಡಿದರೂ ನಾಟಕದ ಪದಗಳ ಧಾಟಿಯನ್ನು ಈ ಹಳ್ಳಿಗರು ಮೂಡಲಪಾಯಕ್ಕಾಗಲೀ ಯಕ್ಷಗಾಯನ ಪದ್ಧತಿಗಾಗಲೀ ತಂದು ಇಳಿಸುತ್ತಿದ್ದರಾದ್ದರಿಂದ ಮಾಸ್ತರರಿಗೆ ಒಮ್ಮೆ ನಗೆ ಬರುತ್ತಿತ್ತು, ಇನ್ನೊಮ್ಮೆ ಸಿಟ್ಟಿಗೇಳುತ್ತಿದ್ದರು.

ಆದರೂ ನಾಟಕ ಭರದಿಂದ ಸಾಗಿತು. ಪಾತ್ರಗಳ ಬಾಯಿಯಲ್ಲಿ ಮಾತುಗಳು ಕೂಡಹತ್ತಿದಂತೆ, ಪ್ರವೇಶಗಳಲ್ಲಿ ಪ್ರತಿಯೊಬ್ಬನೂ ಮಾತಾಡುವ ಕ್ರಮ ತಿಳಿಯಹತ್ತಿದಂತೆ, ಅಭಿನಯವನ್ನೂ ಪದಗಳ ಧಾಟಿಯನ್ನೂ ಕಲಿಸುವದಕ್ಕಾಗಿ ನಾಟಕದಲ್ಲಿ ನುರಿತ ಸಂಗೀತ ಬಲ್ಲ ಶಿಕ್ಷಕನು ಬೇಕೇ ಬೇಕು ಎನಿಸಿತು ಎಲ್ಲರಿಗೂ. ಸುತ್ತುಮುತ್ತಲಿನ ಹಳ್ಳಿಗಳಲ್ಲಿ ನಾಲ್ಕಾರು ಜನರನ್ನು ವಿಚಾರಿಸುವುದೂ ಆಯಿತು. ಏನೂ ಬಗೆಹರಿಯಲಿಲ್ಲ. ಕಡೆಗೆ ಶಂಕರಭಟ್ಟರ ಕೈಯಲ್ಲಿ ಖರ್ಚಿನ ಹಣ ಕೊಟ್ಟು, ಹುಬ್ಬಳ್ಳಿ-ಧಾರವಾಡಗಳ ಕಡೆಗೆ ಹೋಗಿ ಹೇಗಾದರೂ ಮಾಡಿ ಒಬ್ಬ ಶಿಕ್ಷಕನನ್ನು ಹುಡುಕಿಕೊಂಡು ಬರಬೇಕಾಗಿ ಅವರು ಬಿನ್ನವಿಸಿಕೊಂಡರು. ಸೆಟ್ಟರ ಶಂಕರೆಪ್ಪನೂ ಕೈಯಲ್ಲಿ ಹಣ ಕಟ್ಟಿಕೊಂಡು ಕಾಲ್‌ಪಿಯಾನು ತರಲು ಹುಬ್ಬಳ್ಳಿಗೆ ಹೊರಟನು. ಶಿಕ್ಷಕರು ಬರುವ ವರೆಗೆ ಮಾತುಗಳನ್ನು ಚನ್ನಾಗಿ ಬಾಯಿಪಾಠ ಮಾಡುವದಾಗಿಯೂ ನಿಶ್ಚಯವಾಯಿತು.

೧೪

ಅಂದು ತಾನು ಗಂಗಾಸಾನಿಯ ಮನೆಯಲ್ಲಿ ನೃತ್ಯ ಕಲಿಯುತ್ತಿರುವಾಗ ಶ್ರೀಕಂಠಶಾಸ್ತ್ರಿಗಳು ಅನಿರೀಕ್ಷಿತವಾಗಿ ಬಂದಂದಿನಿಂದ ಸುಭಗೆ ಗಂಗಾಸಾನಿಯ ಮನೆಗೆ ಮಧ್ಯಾಹ್ನದಲ್ಲಿ ಹೋಗುವದನ್ನು ಬಿಟ್ಟುಬಿಟ್ಟಳು. ಗಂಗಾಸಾನಿಗೂ ಕಾರಣ ತಿಳಿಯದಿರಲಿಲ್ಲ. ತನ್ನ ಮನೆಗೆ ಬರುವದನ್ನು ಬಿಟ್ಟುದೇಕೆಂದು ಒಮ್ಮೆ ಅವಳು ವಿಚಾರಿಸಿದಾಗ ಸುಭಗೆ ಸುಮ್ಮನೆ ನಕ್ಕುಬಿಟ್ಟಿದ್ದಳು. ಮುಂದೆ ಗಂಗಾಸಾನಿ ಸುಭಗೆಗೆ ಮನೆಗೆ ಬರಲು ಜುಲುಮೆ ಮಾಡಲೂ ಇಲ್ಲ. ಇಲ್ಲಿಯ ವರೆಗೆ ಶ್ರೀಕಂಠಶಾಸ್ತ್ರಿಗಳು ಗಂಗಾಸಾನಿಯಲ್ಲಿ ಮಧ್ಯಾಹ್ನ ಸಮಯ ದಲ್ಲಿ ಹೋಗುತ್ತಿದ್ದುದು ತೀರ ವಿರಳ. ಆದರೆ ಇತ್ತೀಚೆಗೆ ಅವರು ಒಂದಿಲ್ಲೊಂದು ನೆಪದಿಂದ ಮೂರುಗಂಟೆಯ ಸುಮಾರಿಗೆ ದಿನಾಲು ಆಕೆಯ ಮನೆಗೆ ಹೋಗುವ ಪರಿಪಾಠವಿಡಹತ್ತಿದರು. ಅವರು ಹೀಗೆ ಮಾಡುತ್ತಿದ್ದುದರ ಅಂತರಂಗದ ಉದ್ದೇಶ ಗಂಗಾಸಾನಿಗೆ ಹೊಳೆಯಲಿಲ್ಲ. ಮನೆಯಲ್ಲಿಯಾಗಲೀ ಬೇರೆ ಕಡೆಯಾಗಲೀ ಕೂಡುವದು ಬೇಜಾರ ಬಂದು ಅವರು ತನ್ನಲ್ಲಿ ಬರುತ್ತಿರುವದು ಸ್ವಾಭಾವಿಕವೆಂದು ಆಕೆ ಭಾವಿಸಿಕೊಂಡಿದ್ದಳು.

ಸುಭಗೆಯ ಭೆಟ್ಟಿಯಾಗಬಹುದು, ಅವಳ ನೃತ್ಯದ ಪಾಠ ನೋಡಲು ಸಿಗಬಹುದು, ಅವಳೊಡನೆ ಮಾತಾಡುವ ಅವಕಾಶವೂ ಸಿಗಬಹುದು ಎಂದು ಆಶಿಸಿಕೊಂಡು ಗಂಗಾಸಾನಿಯ ಮನೆಗೆ ಹೋಗುತ್ತಿದ್ದ ಶ್ರೀಕಂಠಶಾಸ್ತ್ರಿಗಳಿಗೆ ನಿರಾಶೆಯಾಗಹತ್ತಿತು. ಮನಸ್ಸಿನ ಕಾತರವೂ ಹೆಚ್ಚಹತ್ತಿತು. ಅಂತೆಯೇ ಅವರು ಮತ್ತೆ ಶಂಕರಭಟ್ಟರ ಮನೆಗೆ ಹೋಗುವದನ್ನು ಸುರುವುಮಾಡಿದರು. ಹಿಂದಿನ ದಿನ ತಮಗೆ ಸಾಕಷ್ಟು ಆದರ ಸಿಕ್ಕಿತಾದ್ದರಿಂದ ತಿರುತಿರುಗಿ ಶಂಕರಭಟ್ಟರ ಮನೆಗೆ ಹೋಗಿ ತಾಸುಗಟ್ಟಲೇ ಹರಟೆ ಹೊಡೆಯುವ ಧೈರ್ಯ ಬಂದಿತವರಲ್ಲಿ. ನಾಟಕದಲ್ಲಿ ಅಷ್ಟೇನೂ ಅಭಿರುಚಿಯಿಲ್ಲದಿದ್ದರೂ ನಾಟಕದ ತಾಲೀಮಿನಲ್ಲಿ ಅವರಿಗೆ ಅಭಿರುಚಿ ಹುಟ್ಟಿತು. ಬೇಗನೆ ಊಟ ತೀರಿಸಿಕೊಂಡು ನಾಟಕದಲ್ಲಿ ಭಾಗವಹಿಸಿದ ಜನ ಬರುವದಕ್ಕಿಂತ ಮೊದಲೇ ಶ್ರೀಕಂಠಶಾಸ್ತ್ರಿಗಳು ಶಂಕರಭಟ್ಟರ ಮನೆಗೆ ಹೋಗಿ ಕೂಡುತ್ತಿದ್ದರು. ಶಂಕರ ಭಟ್ಟರ ಊಟವಾಗಿರದಿದ್ದರೆ, ನೆಟ್ಟಗೆ ಅಡಿಗೆಯ ಮನೆಯಲ್ಲಿ ಹೋಗಿ ಶಂಕರ

ಭಟ್ಟರು ಅಡಿಗೆಮಾಡಿಕೊಳ್ಳುತ್ತಿರುವದನ್ನೋ, ಊಟಮಾಡುತ್ತಿರುವದನ್ನೋ ನೋಡುತ್ತಾ ಹರಟೆ ಹೊಡೆಯುತ್ತಾ ಹೊತ್ತುಗಳೆಯುತ್ತಿದ್ದರು. ಅವರು ಅಲ್ಲಿ ಕೂತಾಗೆಲ್ಲ ಶ್ರೀಕಂಠಶಾಸ್ತ್ರಿಗಳ ದೃಷ್ಟಿ ಅಲ್ಲಿ ಇಲ್ಲಿ ಕೆಲಸದಲ್ಲಿ ತೊಡಗಿದ್ದ ಸುಭಗೆಯ ಕಡೆಗೆ ಹೋಗುತ್ತಿದ್ದದು ಶಂಕರಭಟ್ಟರಿಗೆ ಹೊಳೆಯಲಿಲ್ಲವಾದರೂ, ಸುಭಗೆಗೆ ಸುಳುವು ಹತ್ತಿ ಅವಳು ನಾಚಿಕೊಳ್ಳುತ್ತಿದ್ದಳು, ಮುದುಡಿಕೊಳ್ಳುತ್ತಿದ್ದಳು; ಸೀರೆಯ ಸೆರಗನ್ನು ಸಾವರಿಸಿಕೊಳ್ಳುತ್ತಿದ್ದಳು; ಅವರ ದೃಷ್ಟಿ ಕ್ಷೇತ್ರದಿಂದ ದೂರ ಇರಲು ಯತ್ನಿಸುತ್ತಿದ್ದಳು.

ನಡುಮನೆಯಲ್ಲಿ ನಾಟಕ ನಡೆದಾಗ ಸುಭಗೆ ಅಡಿಗೆಯ ಮನೆಯಲ್ಲಿಯೇ ಮಿಣಿಮಿಣಿ ದೀವಿಗೆಯ ಬೆಳಕಿನಲ್ಲಿ ಒಂದು ಮೂಲೆಯಲ್ಲಿ ಕೈಯಲ್ಲಿ ಯಾವದಾದರೊಂದು ಕೆಲಸ ಹಿಡಿದುಕೊಂಡು ಕೂತಿರುತ್ತಿದ್ದಳು. ಆ ಜನ 'ಪಾದುಕಾಪಟ್ಟಾಭಿಷೇಕ' ನಾಟಕವನ್ನು ಯಕ್ಷಗಾನದ ಬಯಲಾಟದ ಮಟ್ಟಕ್ಕೆ ತರುತ್ತಿದ್ದುದೂ ತನ್ನ ತಂದೆಯೂ ಮಾಸ್ತರರೂ ಅವರನ್ನು ತಿದ್ದಲು ಹೆಣಗುತ್ತಿದ್ದುದೂ ಅವಳಿಗೆ ಮೋಜು ಎನಿಸುತ್ತಿದ್ದಿತು. ಒಂದೊಂದು ಸಲ ಅವರು ತೆಗೆಯುವ ಅಪಸ್ವರ ಕಿವಿಗೆ ಬಿದ್ದಾಗ ಮಲಗಿಕೊಂಡಾಕೆ ಹಾಸಿಗೆಯಲ್ಲಿಯೇ ಬಿದ್ದುಬಿದ್ದು ನಗುತ್ತಿದ್ದಳು. ನಿದ್ದೆ ಬರುವ ವರೆಗೆ ಈ ಮೋಜು ನೋಡಿ, ನಿದ್ದೆ ಬಂದೊಡನೆ ಅಡಿಗೆಯ ಮನೆಯ ಬಾಗಿಲು ಹಾಕಿಕೊಂಡು ಸುಭಗೆ ನಿದ್ರೆ ಹೋಗುತ್ತಿದ್ದಳು. ಅಡಿಗೆಯ ಮನೆಯ ಬಾಗಿಲು ಮುಚ್ಚಿದೊಡನೆ ನಡುಮನೆಯಲ್ಲಿ ಮಂಚದ ಮೇಲೆ ಕುಳಿತ ಶ್ರೀಕಂಠಶಾಸ್ತ್ರಿಗಳಿಗೂ ಆಕಳಿಕೆ ಹೆಚ್ಚುತ್ತಿದುದು ನಾಟಕದಲ್ಲಿಯೇ ತಲ್ಲೀನರಾದ ಉಳಿದವರಿಗೆ ಹೊಳೆಯುತ್ತಿರಲಿಲ್ಲ.

ಸುಭಗೆ ಮಧ್ಯಾಹ್ನದಲ್ಲಿ ತನ್ನ ಮನೆಗೆ ಬಾರದಾದೊಡನೆ ಗಂಗಾಸಾನಿಗೆ ಭಣಭಣ ಎನಿಸಹತ್ತಿತು. ಆದುದರಿಂದ ಆಕೆ ತನ್ನ ಊಟ ಮುಗಿದೊಡನೆ, ಇಲ್ಲವೇ ಶ್ರೀಕಂಠಶಾಸ್ತ್ರಿಗಳು ಮನೆಗೆ ಬಂದು ಹೋದ ಮೇಲೆ ಸುಭಗೆಯಲ್ಲಿಯೇ ಹೋಗಿ ಕೂಡುತ್ತಿದ್ದಳು. ಶಂಕರಭಟ್ಟರು ನಡುಮನೆಯಲ್ಲಿದ್ದರೆ ಇವರು ಹುಸಿಯಲ್ಲಿ, ಅವರು ಹುಸಿಯಲ್ಲಿದ್ದರೆ ಇವರು ನಡುಮನೆಯಲ್ಲಿ; ಒಂದೊಂದು ಸಲ ಮೂವರೂ ಕೂಡಿಯೇ ಹರಟೆ ಹೊಡೆಯುತ್ತಿದ್ದರು. ರಾತ್ರಿಯ ನಾಟಕದ ಸಮಾಚಾರವನ್ನೆಲ್ಲ ಸುಭಗೆ ಗಂಗಾಸಾನಿಯ ಮುಂದೆ

ಹೇಳಿ, ಸಾಧ್ಯವಿದ್ದಲ್ಲಿ ಕೆಲವರ ಫಾರ್ಸು ಮಾಡಿ ನಗುತ್ತಿದ್ದಳು. ಶಂಕರಭಟ್ಟ ರನ್ನೂ ಗಂಗಾಸಾನಿಯನ್ನೂ ನಗಿಸುತ್ತಿದ್ದಳು. ಶಂಕರಭಟ್ಟರು ಪಂಚೆ ಯನ್ನೊಂದು ತೆಗೆದುಕೊಂಡು ತಾಸೆರಡು ತಾಸು ತಣ್ಣಗೆ ಅಡ್ಡಾಗಲು ಶಂಭು ಲಿಂಗನ ಗುಡಿಗೆ ಹೊದೊಡನೆ ಸುಭಗೆಗೆ ನೃತ್ಯವಿದ್ಯೆಯಲ್ಲಿ ಪಾಠ ಪಡೆಯಲು ಅವಕಾಶ ಸಿಗುತ್ತಿತ್ತು.

ನಾಟಕದ ಸಾಧನಗಳನೆಲ್ಲ ನೃತ್ಯದ ಹಿನ್ನೆಲೆಯ ಸಂಗೀತದ ಸಲುವಾಗಿ ಉಪಯೋಗಿಸಲು ಬರುತ್ತಿದ್ದಿತಾದರೂ ಸಪ್ಪಳದಿಂದ ಜನರ ಚಿತ್ತ ಇತ್ತ ಬಿದ್ದು ಪಾಠಕ್ಕೆ ಭಂಗ ಬಂದೀತೆಂಬ ಭಯದಿಂದ ಅವರು ಅವುಗಳ ಗೋಜಿಗೆ ಹೋಗುತ್ತಿರಲಿಲ್ಲ. ದೇವರ ಕಟ್ಟೆಯ ಮೇಲಿನ ಪೂಜೆಯ ತಂಬಿಗೆ ತೀರ್ಥ ಸವುಟುಗಳನ್ನು ಇಸುಗೊಂಡು, ಸವುಟನ್ನು ತಂಬಿಗೆಯ ಕಂಠಕ್ಕೆ ಕಟಿಕಟಿದು ಗಂಗಾಸಾನಿ ಮಧುರ ನಾದತರಂಗವನ್ನು ಹುಟ್ಟಿಸುತ್ತಿದ್ದಳು. ಈ ತರಂಗದ ಈ ತಾಳದ, ಮೇಳದಲ್ಲಿ ಸುಭಗೆ ಹೆಜ್ಜೆ ಹಾಕಲು ಸುರುವುಮಾಡುತ್ತಿದ್ದಳು. ನೃತ್ಯ ಭರದಿಂದ ಸಾಗಿದಾಗ ಗಂಗಾಸಾನಿ ಹೆಜ್ಜೆಯ ತಾಳದಲ್ಲಿಯೇ, ತಂಬಿಗೆಯ ಕಂಠದ ನಿನಾದದೊಡನೆ ಸಮರಸ ವಾಗುವ ದನಿಯಲ್ಲಿಯೇ, ನೃತ್ಯದ ಸೌಂದರ್ಯಕ್ಕೆ ಕಳೆಯೇರುವಂತೆ, ನೃತ್ಯದ ಸೂಚಕಾರ್ಥಕ್ಕೆ ಪುಷ್ಟಿ ಸಿಗುವಂತೆ, ಹಾಡಲು ಸುರುವುಮಾಡುತ್ತಿದ್ದಳು; ಮರುಕ್ಷಣದಲ್ಲಿ ಸುಭಗೆಯೂ ಅವಳೊಡನೆ ದನಿಗೂಡಿಸುತ್ತಿದ್ದಳು. ನೃತ್ಯ ಮುಗಿದೊಡನೆ ಸುಭಗೆ ಅಚ್ಚೆಯಿಂದ ಆನಂದದಿಂದ ಗಂಗಾಸಾನಿಯ ತೊಡೆಯ ಮೇಲೆ ತಲೆಯಿಟ್ಟು ಅಡ್ಡಾಗುತ್ತಿದ್ದಳು. ಗಂಗಾಸಾನಿಯೂ ಅವಳ ನೃತ್ಯವಿದ್ಯೆಯಲ್ಲಿಯ ಪ್ರಗತಿಯನ್ನು ಕಂಡು ಆಕೆಯನ್ನು ತುಂಬಾ ಹೊಗಳುತ್ತಿದ್ದಳು; ಮಮತೆಯಿಂದ ಕೂದಲುಗಳ ಮೇಲೆ ಕೈಯಾಡಿಸುತ್ತಿದ್ದಳು.

## ೧೫

ಶ್ರೀಕಂಠಶಾಸ್ತ್ರಿಗಳು ಬೆಟ್ಟವನ್ನು ಬಿಟ್ಟು ಕೆಳಗಿಳಿದಾದರು. ಸಂಚಾರಾರ್ಥ ವಾಗಿಯೋ, ಕಚೇರಿ ಕಟ್ಟಳೆಗಾಗಿಯೋ ವಾರದಲ್ಲಿ ನಾಲ್ಕು ದಿನವಾದರೂ ಹೊರಗೆಯೇ ಇರುತ್ತಿರುವವರು ಊರಲ್ಲಿಯೇ ಸುಳಿದಾಡಹತ್ತಿದರು.

ಹಗಲಿರುಳು ಸುಭಗೆಯ ವಿಚಾರವೇ ಅವರ ಮನಸ್ಸಿನಲ್ಲಿ ತೇಲಹತ್ತಿತು. ಸುಭಗೆಯ ಮನೆಗೆ ಒಂದಿಲ್ಲೊಂದು ನೆವದಿಂದ ಹೋಗಿ ಅಲ್ಲಿ ಕೆಲಸ ವಿಲ್ಲದೇ ಬರಿಯ ಹರಟೆಯಲ್ಲಿಯೇ ತಾಸುಗಟ್ಟಲೆ ಕಾಲಕಳೆಯಹತ್ತಿದರು. ದೇವರಪೂಜೆಗೆಂದು ಸ್ನಾನ ಮಾಡುವವರೆಗೂ, ಪೂಜೆ ಮುಗಿಸಿ ಊಟ ವಾದೊಡನೆಯೂ ಸುಭಗೆಯ ಮನೆಯ ಅಕ್ಕಪಕ್ಕದಲ್ಲಿಯೇ ಮಂದಿಯನ್ನು ಸುಮ್ಮನೆ ಮಾತಾಡಿಸುತ್ತ ಕೂತು-ನಿಂತು, ಆಕೆ ಹೊರಗೆ ಬರುವದನ್ನೇ ನಿರೀಕ್ಷಿಸುತ್ತ, ಹೊರಗೆ ಬಂದಾಗೆಲ್ಲ ಅವಳನ್ನು ಒಮ್ಮೊಮ್ಮೆ ಕಣ್ತುಂಬ, ಒಮ್ಮೊಮ್ಮೆ ಕಳ್ಳ ನೋಟದಿಂದ, ಒಮ್ಮೊಮ್ಮೆ ಬಿರಿಬಿರಿ ನೋಡಹತ್ತಿದರು. ಅವಳು ಯಾವ ಹೊತ್ತಿಗೆ ಎಲ್ಲಿ ಇರುವಳು, ಯಾವ ಹೊತ್ತಿಗೆ ಯಾವ ಕೆಲಸ ಮಾಡುತ್ತಿರುವಳು, ಎಂಬುದನ್ನು ನಿಶ್ಚಯಿಸಿಕೊಂಡರು. ಆಕೆಯ ಬಗೆಗೆ ಅವರು ವಿಚಾರಮಾಡಿ-ಮಾಡಿದಂತೆ, ಅವರ ಮನ ಹೆಚ್ಚು ಹೆಚ್ಚು ವಿಕಾರಗೊಳ್ಳಹತ್ತಿತು. ಗಂಗಾಸಾನಿಯ ಮನೆ ಅವರಿಗೆ ಬೇಜಾರ ಬಂದಿತು. ಊಟ-ಉಪಚಾರದಲ್ಲಿ ಅಲಕ್ಷ್ಯ ಹೆಚ್ಚಾಯಿತು. ರಾಧಕ್ಕನ ಮೇಲೆ ಸುಮ್ಮ ಸುಮ್ಮನೇ ರೇಗಿಗೇಳಹತ್ತಿದರು.

ನಾಟಕದ ತಾಲೀಮು ತಾತ್ಕಾಲಿಕವಾಗಿ ನಿಂತುಹೋಗಿದ್ದರಿಂದ ಶ್ರೀಕಂಠಶಾಸ್ತ್ರಿಗಳಿಗೆ ರಾತ್ರಿಯಲ್ಲಿ ಶಂಕರಭಟ್ಟರ ಮನೆಗೆ ಹೋಗುವದಕ್ಕೂ ಆತಂಕವುಂಟಾಗಿ, ಕತ್ತಲೆಯಾದೊಡನೆ ಅವರ ಮನಕ್ಕೆ ಭಣಭಣ ಎನ್ನ ಹತ್ತಿತು. ರಾತ್ರಿಯನ್ನು ಕಳೆಯುವದು ಕಠಿಣವಾಗಿ ಹಾಸಿಗೆಯ ಮೇಲೆ ಸುಮ್ಮನೆ ಹೊರಳಾಡುತ್ತಲಿದ್ದರು. ಅವಳ ಲಜ್ಜೆ, ತಮ್ಮ ಬಗೆಗೆ ಅವಳು ತೋರುವ ಔದಾಸೀನ್ಯ, ತಮ್ಮನ್ನು ಕಂಡೊಡನೆ ಅವಳು ಕಣ್ಮರೆಯಾಗಿ ಹೋಗುತ್ತಿದ್ದ ರೀತಿ ತಮ್ಮ-ಅವಳ ವಯಸ್ಸುಗಳ ನಡುವಿನ ಅಂತರ— ಇವೆಲ್ಲವೂ ಒಮ್ಮೊಮ್ಮೆ ಅವರ ಅಂತರ್ಗತ ಬಯಕೆಯ ನೆತ್ತಿಯನ್ನು ಕುಕ್ಕಿ ಅವರನ್ನು ನಿರಾಶೆಗೆ ಈಡುಮಾಡುತ್ತಿದ್ದವು. ನಿರಾಶೆ ಹೆಚ್ಚಿದಂತೆ ಮನಸ್ಸಿನ ಬಯಕೆ ಮತ್ತೆ ನೂರ್ಮಡಿಯಾಗಿ ಅವರನ್ನು ಕಾಮುಕತೆಯ ಚಾಪಲ್ಯದ ಕುದುರೆಯನ್ನೇರಿಸುತ್ತಿದ್ದಿತು.

ಒಮ್ಮೆ ಮೂರೂಸಂಜೆಯ ಮುಂದೆ ಶ್ರೀಕಂಠಶಾಸ್ತ್ರಿಗಳು ಹೊತ್ತು ಹೋಗದಾಗಿ ಬೆಟ್ಟದ ಕೆಳಗೆ ತಿರುಗಾಡಿ ಬರಲು ಹೊರಟರು. ತಲೆಗೆ ಅಂಚಿನ

ಧೋತರವನ್ನು ಸುತ್ತಿ ಕೈಯಲ್ಲಿಯ ಬಡಿಗೆಯನ್ನು ತಿರುವುತ್ತ ಬೆಟ್ಟವನ್ನು ದುಡುದುಡು ಇಳಿದರು. ಅಡ್ಡದಾರಿಯನ್ನು ಹಿಡಿದು ಕಂದರದಲ್ಲಿ ಜಿಗಿದು ಶಂಭುಲಿಂಗನ ಬೆಟ್ಟದ ಸುತ್ತು ಹಬ್ಬಿದ ಪರ್ವತಶ್ರೇಣಿಯ ಇನ್ನೊಂದು ದಿನ್ನಿಯನ್ನು ಅಡರಿ ತುದಿಯಲ್ಲಿಯ ಒಂದು ಬಂಡೆಗಲ್ಲಿನ ಮೇಲೆ ಹೋಗಿ ಕುಳಿತರು. ತಂಪಾಗಿ ಬೀಸುವ ಗಾಳಿ ಮನಸ್ಸಿಗೆ ಸ್ವಲ್ಪ ನೆಮ್ಮದಿಯನ್ನು ಕೊಟ್ಟಿತು; ಹಾಯ್ ಎನಿಸಿತು. ಪಶ್ಚಿಮದಲ್ಲಿ ಮುಳುಗುವ ಸೂರ್ಯನನ್ನು ದಿಟ್ಟಿಸಿದರು. ಮೇಲೆ ಹತ್ತಿಯ ಹಂಜಿಯಂತೆ ಪಸರಿಸಿದ ಬಿಳಿಯ ಮೋಡಗಳ ಅಂಚಿಗೆ ಕೆಂಪೇರಿದುದನ್ನು ನೋಡಿ ಮನ ಪ್ರಸನ್ನವಾಯಿತು. ದೂರದಲ್ಲಿ ಉಗಿಬಂಡಿಯು ಉಣ್ಣಿಯ ಹುಳದಂತೆ ಮಂದವಾಗಿ ಸಾಗುವದನ್ನು ಬಿರಿಬಿರಿ ನೋಡಿದರು. ಲೈನುದಾರಿಯಲ್ಲಿ ತಲೆಯ ಮೇಲೆ ಕೊಡಗಳನ್ನಿಟ್ಟುಕೊಂಡು ಸಾಲುಗಟ್ಟಿ ಬೆಟ್ಟದ ಕಡೆಗೆ ಸಾಗಿದ ಹೆಂಗಸರನ್ನು ಒಬ್ಬೊಬ್ಬರನ್ನಾಗಿ ಪರೀಕ್ಷಿಸಿದರು. ತಮ್ಮ ಮುಖವನ್ನು ಅರಳಿಸುವವರು. ಅವರಲ್ಲಿ ಇಲ್ಲುದುದರಿಂದ ಸಣ್ಣ ಮೋರೆ ಮಾಡಿದರು. ಹಾಗೆಯೆ ಕಣ್ಣುಗಳನ್ನು ಮುಂದೆ ಸಾಗಿಸಿದಾಗ, ಬಗಲಲ್ಲಿ ಬರಿಯ ಕೊಡವನ್ನಿಟ್ಟುಕೊಂಡು ಬೆಟ್ಟದ ಮೆಟ್ಟಲುಗಳನ್ನು ದುಡುದುಡು ಇಳಿಯುತ್ತಲಿದ್ದ ಸುಭಗೆಯನ್ನು ಕಂಡರು.

ಆಗಲೇ ಕತ್ತಲಾಗಹತ್ತಿದ್ದುದರಿಂದ ಸುಭಗೆ ಲಗುಬಗೆಯಿಂದ ಬಾವಿಗೆ ಸಾಗಿದ್ದಳು. ಹೆಂಗಸರಾಗಲೇ ತಂಡತಂಡವಾಗಿ ಮನೆಯ ಕಡೆಗೆ ಸಾಗಿದ್ದರು. ಸುಭಗೆ ಒಬ್ಬಳೇ ನೀರಿಗಾಗಲೀ ಒಗೆಯುವದಕ್ಕಾಗಲೀ ಹೋಗುವದು ಅತಿ ವಿರಳ. ಗಂಗಾಸಾನಿ ಅವಳ ಜೊತೆಗೆ ಇರುತ್ತಿದ್ದುದೇ ಬಹಳ. ಈ ದಿನ ಸಂಜೆಯ ವರೆಗೂ ಗಂಗಾಸಾನಿಯ ದಾರಿಯನ್ನು ನೋಡಿ ಬೇರೆ ಕೆಲಸವಿದ್ದುದರ ಮೂಲಕ ಆಕೆ ನೀರಿಗೆ ಬಾರದಿರಲು ತಾನೇ ಒಂದು ಕೊಡವನ್ನು ಬೇಗ ತಂದರಾಯಿತು ಎಂದು ಹೊರಟಿದ್ದಳು.

ಬೆಟ್ಟದ ಅಡಿಯಿಂದ ಕೂಗಳತೆಯ ದೂರದಲ್ಲಿ ಒಂದು ಸೇದುವ ಬಾವಿಯಿದೆ. ಊರ ಜನರೆಲ್ಲ ಕುಡಿಯಲು ನೀರು ತರುವದು ಈ ಬಾವಿಯಿಂದಲೇ. ಸುಭಗೆ ಬೆಟ್ಟದ ಮೆಟ್ಟಲು ಇಳಿಯುವಾಗ ಬಾವಿಯ ಮೇಲೆ ನಾಲ್ಕಾರು ಜನರನ್ನು ಕಂಡಳಾದರೂ, ಆಕೆ ಬಾವಿಯನ್ನು ತಲುಪಿದಾಗ, ಎಲ್ಲರೂ ಆಗಲೇ ಬೆಟ್ಟದ ಮೆಟ್ಟಲುಗಳನ್ನು ಏರಹತ್ತಿದ್ದರು.

ಸುಭಗೆ ಮನೆಯಿಂದ ಸೇದುವ ಹಗ್ಗ ತಂದಿರಲಿಲ್ಲ. ಗಡಗಡೆ ಗಳೆಲ್ಲವೂ ತೆರವಿದ್ದವಾದ್ದರಿಂದ ಸುಭಗೆಗೆ ಚಿಂತೆ ಬಿತ್ತು. ಹತ್ತಿರದಲ್ಲಿಯೇ ಇದ್ದ ಹೂದೋಟದ ಮುಳ್ಳಿನ ಕದವನ್ನು ತೆಗೆದಳು. ಶಂಭುಲಿಂಗನಿಗೆ ಪ್ರತಿ ದಿನ ಹೂವು ಕೊಡುತ್ತಲಿದ್ದ ಹೂಗಾರನು ತನ್ನ ಹಗ್ಗವನ್ನು ಅಲ್ಲಿ ಇಟ್ಟು ಹೋಗುತ್ತಿದುದು ಗೊತ್ತಿದ್ದಿತು. ಒಳಗೆ ಹೋಗಿ ಕರಿಬೇವಿನ ಗಿಡದಿಂದ ನಾಲ್ಕು ಎಸಳುಗಳನ್ನು ತೆಗೆದುಕೊಂಡು, ಮಲ್ಲಿಗೆಯ ಹಂದರ ದಲ್ಲಿಯ ಹಗ್ಗದ ಸಿಂಬಿಯನ್ನು ತೆಗೆದುಕೊಂಡು ಹೊರಗೆ ಬಂದೊಡನೆ ಬಾಗಿಲಲ್ಲಿಯೆ ಶ್ರೀಕಂಠಶಾಸ್ತ್ರಿಗಳನ್ನು ಕಂಡಳು. ಸುತ್ತಲೂ ಮತ್ತೆ ಯಾರೂ ಇಲ್ಲುದುದಕ್ಕೆ ಸ್ವಲ್ಪ ಬೆಚ್ಚಿದಳು.

" ಹೊತ್ತಾತೆಲ್ಲ, ಸುಭಗಾ ? ಯಾಕೋ ಒಬ್ಬಾಕೇ ಬಂದೀದಿ ? " ಎಂದರು ಶ್ರೀಕಂಠಶಾಸ್ತ್ರಿಗಳು, ಬೇಲಿಯಿಂದ ಹೊರಗೆ ಹಾಯ್ದ ಕಣಗಲ ಗಿಡದ ಟೊಂಗೆಗಳಲ್ಲಿಯ ಹೂಗಳನ್ನು ಆಯ್ದುಕೊಳ್ಳುತ್ತ.

ಸುಭಗೆ ಗಾಬರಿಯಲ್ಲಿಯೇ ಸ್ವಲ್ಪ ನಕ್ಕಳು. " ಗಂಗಕ್ಕನೂ ಬರೋಕಿ ಇದ್ದಳು; ಆದರ ಯಾಕೋ ಬರಲಿಲ್ಲ. ಮನಿಯಾಗ ಕುಡಿಯೋ ನೀರು ಇದ್ದಿಲ್ಲ ಅಂತ ಒಬ್ಬಾಕೇ ಬಂದೆ." ಎಂದು ಸುಭಗೆ ಬಾವಿಯ ಕಡೆಗೆ ಸಾಗಿದಳು. ಹಿಂದೆ ನೋಡಲಿಲ್ಲ ಸಹ.

ಶ್ರೀಕಂಠಶಾಸ್ತ್ರಿಗಳು ಹಾಗೆಯೇ ಅವಳ ಬೆನ್ನು ಹತ್ತಿದರು. ಸುಭಗೆ ಹಗ್ಗವನ್ನು ಗಡಗಡೆಯ ಮೇಲೆ ಹಾಕಿ ಕೊಡವನ್ನು ಒಳಗೆ ಬಿಟ್ಟು ತುಂಬಿಸ ಹತ್ತಿದಳು. ಶ್ರೀಕಂಠಶಾಸ್ತ್ರಿಗಳು ಎದುರಿನ ಗಡಗಡೆಯ ಕಟ್ಟೆಯ ಮೇಲೆ ಕಾಲಿಟ್ಟು ಭಾವಿಯ ಒಳಗೆ ನೋಡುತ್ತ ನಿಂತುದುದನ್ನು ನೋಡಿದಳಾದರೂ, ನೋಡದವಳಂತೆ ದೃಷ್ಟಿಯನ್ನು ಬಾವಿಯಲ್ಲಿಯೇ ಚೆಲ್ಲಿದಳು. ಶ್ರೀಕಂಠ ಶಾಸ್ತ್ರಿಗಳು ಅಲ್ಲಿಂದ ಹೊರಟು ಹೋಗುವದನ್ನೆ ನಿರೀಕ್ಷಿಸುತ್ತ ಕೊಡವು ತುಂಬಿದ್ದರೂ ಸುಮ್ಮನೆ ಹಗ್ಗವನ್ನು ಜಗ್ಗಿಜಗ್ಗಿ ಅದನ್ನು ತುಂಬಿಸುವಂತೆ ನಟನೆ ಮಾಡುತ್ತಿದ್ದಳು.

" ಜಗ್ಗಲ್ಲಾ, ಕೊಡಾ ತುಂಬೇದ." ಎಂದರು ಶ್ರೀಕಂಠಶಾಸ್ತ್ರಿಗಳು.

ಸುಭಗೆ ಏನೂ ಮಾತಾಡದೇ ಜಗ್ಗಹತ್ತಿದಳು. ಆ ಕ್ಷಣವೇ ಶ್ರೀಕಂಠ

ಶಾಸ್ತ್ರಿಗಳು ಅವಳ ಗಡಗಡೆಯ ಕಡೆಗೆ ಬಂದು, 'ತಡಿ ಸುಭಗಾ, ಕೊಡಾ ಒಜ್ಜೆ ಬರತೈದ ಕಾಣಸತೈದ; ನಾ ಸೇದಲಿಕ್ಕೆ ಹಿಡೀತೇನಿ" ಎಂದು ಹಗ್ಗವನ್ನು ಹಿಡಿದರು. ಸುಭಗೆಯು ನಾಚಿದಳು. 'ನಾನೆಲ್ಲ ಜಗ್ಗತೀನಿ ಬಿಡು, ಶ್ರೀಕಂಠ ಮಾಮಾ!" ಎಂದಳು. ಅವರು ಬಿಡಲಿಲ್ಲವಾದ್ದರಿಂದ ತಾನೇ ದೂರ ಸರಿದು ನಿಂತುಕೊಂಡಳು. ಶ್ರೀಕಂಠಶಾಸ್ತ್ರಿಗಳು ಕೊಡವನ್ನು ಜಗ್ಗಿ ಬಾವಿಯ ಕಟ್ಟೆಯ ಮೇಲಿಟ್ಟರು.

ಬಾವಿಯ ಕಟ್ಟೆಯ ಮೇಲೆ ಎಡದ ಕೈಯನ್ನಿಟ್ಟು ನೆಲವನ್ನೇ ನಿಟ್ಟಿಸುತ್ತಿದ್ದ ಸುಭಗೆ ಮುಖವನ್ನು ಮೇಲೆ ಎತ್ತಿದಳು; ಶ್ರೀಕಂಠಶಾಸ್ತ್ರಿಗಳನ್ನೊಮ್ಮೆ ನೋಡಿದಳು. ಮುಖದ ಮೇಲೆ ಕೃತಜ್ಞತೆಯ ನಗೆ ಮೂಡಿ, ನಾಚಿಕೆಯಲ್ಲಿ ಅಡಗಿ ಮಾಯವಾಯಿತು. ಈಗ ಶ್ರೀಕಂಠಶಾಸ್ತ್ರಿಗಳಿಗೆ ಅವಳ ನಗೆಯ ಮುಖ ಬಹಳ ಚಂದ ಕಂಡಿತು.

"ಸುಭಗಾ...." ಶ್ರೀಕಂಠಶಾಸ್ತ್ರಿಗಳು ಏನನ್ನೊ ಅನ್ನುವವರಿದ್ದರು. ಸುಭಗೆ ಹೂದೋಟದ ಹಿಂದಿನ ಸೀಳುದಾರಿಯ ಕಡೆಗೆ ನೋಡಿದಳು. ಗವಳಿಗರ ಎಲ್ಲಮ್ಮ ತಲೆಯ ಮೇಲೆ ಹುಲ್ಲು ಹೊರೆಯನ್ನಿಟ್ಟುಕೊಂಡು, ಕಾಡಿಗೆ ಹೋದ ತನ್ನ ಎಮ್ಮೆಗಳ ಹಿಂದೆ ಬರುತ್ತಿದ್ದುದನ್ನು ಕಂಡು, "ಎಲ್ಲಮ್ಮಾ, ನಾನೂ ಬಂದೆ ತಡೀಯೇ." ಎಂದು ಕೂಗಿದಳು. ಶ್ರೀಕಂಠಶಾಸ್ತ್ರಿಗಳ ಬಾಯಿಯಿಂದ ಮಾತು ಹೊರಡಲಿಲ್ಲ.

ಸುಭಗೆ ತಲೆಯ ಮೇಲಿನ ತುಂಬಿದ ಕೊಡದ ಭಾರದಿಂದ ಸ್ವಲ್ಪ ಮುಂದೆ ಬಾಗಿ ಎಲ್ಲಮ್ಮನೊಡನೆ ಚಿಟ್ಟೆ ಏರುತ್ತಿರುವಾಗ, ಎಲ್ಲಮ್ಮ ಅಖಂಡವಾಗಿ ಅನಂತವಾಗಿ ತನ್ನ ಎಮ್ಮೆಗಳ ಬಗ್ಗೆ, ಹಾಲಿನ ಬಗ್ಗೆ, ಬಡತನದ ಸಂಸಾರದ ಬಗ್ಗೆ, ಹರಟೆ ನಡೆಸಿದ್ದಳು. ಸುಭಗೆ ಬರಿ 'ಹೂಂ' ಎನ್ನುವ ಕೆಲಸ ಸಾಗಿಸಿದ್ದಳು. ಆಕೆಯ ಮನಸ್ಸು ಎಲ್ಲಮ್ಮನ ಹರಟೆಯ ಕಡೆಗೆ ಇರಲಿಲ್ಲ. ಶ್ರೀಕಂಠಶಾಸ್ತ್ರಿಗಳ ಕಡೆಗೆ ಹೋಗಿತ್ತು.

ಹಿಂದೆ ತಾನು ಹುಡಿಗೆಯಿದ್ದಾಗ ಶ್ರೀಕಂಠಶಾಸ್ತ್ರಿಗಳೊಡನೆ ತೀರ ಸಲಿಗೆಯಿಂದ ಇದ್ದಳವಳು. ಅವರೊಡನೆ ಹರಟೆ ಹೊಡೆಯುವದಕ್ಕೂ ಚೇಷ್ಟೆ ಮಾಡುವದಕ್ಕೂ ಕಡಿಮೆ ಇರಲಿಲ್ಲ. ತನ್ನ ಮದುವೆಯಾದಂದಿನಿಂದ ಅವರೊಡನೆ ಮಾತು ಇರಲಿಲ್ಲ. ಇತ್ತೀಚೆಗಂತೂ ಬೇರೆ ಯಾವ ಗಂಡಸಿ

ನೊಡನೆಯೂ ಮಾತು ಇರಲಿಲ್ಲ. ತನ್ನನ್ನು ಅಂದು ಗಂಗಾಸಾನಿಯ ಮನೆಯಲ್ಲಿ ಅವರು ನೋಡಿದಂದಿನಿಂದ ಶ್ರೀಕಂಠಶಾಸ್ತ್ರಿಗಳು ತನ್ನ ಬಗೆಗೆ ತೋರುವ ರೀತಿ-ನೀತಿಗಳಲ್ಲಿ ವಿಲಕ್ಷಣತೆಯಿರುವದನ್ನು ಕಂಡುಕೊಳ್ಳಲು ಅವಳಿಗೇನೂ ಹೊತ್ತು ಹಿಡಿದಿರಲಿಲ್ಲ. ಶ್ರೀಕಂಠಶಾಸ್ತ್ರಿಗಳ ಸ್ವಭಾವವು ಸಹ ಅವಳಿಗೆ ಪರಿಚಿತವಾದುದೇ ಇದ್ದುದರಿಂದ ಅವರು ಈಗ ತನ್ನ ಬಗೆಗೆ ತೋರುತ್ತಿದ್ದ ಆದರ-ಅಭಿರುಚಿಗಳ ಬೆನ್ನ ಹಿಂದಿನ ಅವರ ಹೇತುವನ್ನೂ ತಿಳಿದುಕೊಳ್ಳುವದು ಆಕೆಗೆ ಕಠಿಣವಾಗಲಿಲ್ಲ. ಅಂತೆಯೇ ಈಗ ಶ್ರೀಕಂಠ ಶಾಸ್ತ್ರಿಗಳು ಹತ್ತಿರ ಸುಳಿದರೆ ಸಾಕು ಆಕೆಯ ಎದೆ ಬಡಿಯಹತ್ತುತ್ತಿತ್ತು. ಅಸಹಾಯ್ಯತೆ ಮನದಲ್ಲಿ ತಲೆದೋರಿ ಅವಳನ್ನು ದಿಙ್ಮೂಢಳನ್ನಾಗಿ ಮಾಡುತ್ತಿತ್ತು.

## ೧೬

ಸುಭಗೆಯು ನಗೆಮೊಗ ಶ್ರೀಕಂಠಶಾಸ್ತ್ರಿಗಳ ಕಲಕಿದ ಮನವನ್ನು ಇನ್ನಷ್ಟ ಕಲಕಿಸಿತು. ಭಾವನೆಯ ಉದ್ವೇಗ ಹೆಚ್ಚಿ ಬಹಳ ಚಂಚಲರಾದರು. ತಾಳ್ಮೆಯೂ ಕೈಮೀರಿ ಹೋಯಿತು.

ಸಂಜೆಯ ಮುಂದೆ ಹೇಗೋ ಹೇಗೊ ಸಂಧ್ಯಾವಂದನೆ ಮುಗಿಸಿದರು ; ದೇವರ ಮಂಗಳಾರತಿಯ ಶಾಸ್ತ್ರವೂ ಮುಗಿಯಿತು. ಕೂಡಲೇ ಊಟ ಮುಗಿಸಿ, ಎಲಿಯಡಿಕೆ ಹಾಕಿಕೊಂಡು ಹೊರಹೊರಟರು.

ಶಂಕರಭಟ್ಟರ ಮನೆಯ ಬಾಗಿಲು ಇನ್ನೂ ತೆರೆದಿತ್ತು. ಒಳಗೆ ಸಣ್ಣ ದೀಪ ಮಿನುಗುತ್ತಿತ್ತು. ಬಾಗಿಲಲ್ಲಿ ಯಾರೂ ಕಾಣಲಿಲ್ಲ. ಶ್ರೀಕಂಠಶಾಸ್ತ್ರಿಗಳಿಗೆ ಶಂಕರಭಟ್ಟರು ಊರಲ್ಲಿ ಇಲ್ಲದ್ದು ಗೊತ್ತಿತ್ತು. ಆದರೂ ಹೊಸತಿಲದಲ್ಲಿ ಹೆಜ್ಜೆಯಿಡುತ್ತ "ಶಂಕರಭಟ್ಟರೇ" ಎಂದು ಕೂಗುತ್ತ ಒಳಗೆ ಹೋದರು.

ಒಳಗೆ ಬಚ್ಚಲಮನೆಯಲ್ಲಿ ಆದೇ ಊಟ ಮಾಡಿದ ತಾಟು ತೊಳೆಯುತ್ತಲಿದ್ದ ಸುಭಗೆ " ಯಾರವರು ? " ಎಂದು ಹೊರಗೆ ಧಾವಿಸಿದಳು. ಶ್ರೀಕಂಠಶಾಸ್ತ್ರಿಗಳನ್ನು ನೋಡಿದೊಡನೆ ನಿಂತಲ್ಲಿಯೇ ನಿಂತು, "ಊರಾಗಿಲ್ಲ"

ಎಂದು ಗಾಬರಿಯಾಗಿ ಉತ್ತರ ಕೊಟ್ಟಳು. ಅವಳ ಬಾಯಿ ಒಣಗಿದ್ದಿತು. ತಾನೊಬ್ಬಳೇ ಮನೆಯಲ್ಲಿದ್ದಾಗ ಹೀಗೆ ಹೊರಗಿನವರು ಮನೆಗೆ ಬಂದುದೇನೂ ಅವಳಿಗೆ ಹೊಸದಿರಲಿಲ್ಲ. ಸಂಗಪ್ಪ ಮಲಗುವ ವರೆಗೆ ಹರಟೆಹೊಡೆದು ಬಾಗಿಲದಲ್ಲಿಯೇ ಮಲಗುತ್ತಿದ್ದ. ಆಕೆಯೊಬ್ಬಳೇ ಒಳಗೆ ಅಡಿಗೆ ಮಾಡಿಕೊಳ್ಳು ತ್ತಿದ್ದಾಗ ಜೊಯಿಸರ ಶೀನೂ ಹೊರಗೆ ಮುರುಕು ಹಾರ್ಮೋನಿಯಮ್ನನ್ನು ಕುಂಯಿ ಕುಂಯಿ ಎನಿಸುತ್ತ ಕೂಡುತ್ತಿದ್ದ. ಶ್ರೀಕಂಠಶಾಸ್ತ್ರಿಗಳು ಸಹ ಹಿಂದೆ ಅದೆಷ್ಟೋ ಸಲ ಒಳಹೊರಗೆ ಓಡಾಡಿದ್ದುಂಟು. ಆದರೆ ಇಂದಿನ ಈ ಸನ್ನಿ ವೇಶದಲ್ಲಿ ಸುಭಗೆ ಏನೋ ವೈಶಿಷ್ಟ್ಯವನ್ನು ಕಂಡಳು. ಅಂತೆಯೇ ಅಂಜಿದಳು.

ಶ್ರೀಕಂಠಶಾಸ್ತ್ರಿಗಳು ಹಿಂದೆ ಕದಲಲಿಲ್ಲ. "ಊಟ ಆತೇನು, ಸುಭಗಾ?" ಎಂದು ಬದಿಯಲ್ಲಿಯ ಪಲ್ಲಂಗದ ಮೇಲೆ ಕುಳಿತುಕೊಂಡರು.

ಸುಭಗೆ ಒಳಗಿನಿಂದಲೇ "ಆಯ್ತು" ಎಂದಳು. ಒಂದು ನಿಮಿಷ ನಿಶ್ಶಬ್ದವಾಯಿತು ಮನೆ. ಸುಭಗೆಗೆ ಆ ಒಂದು ನಿಮಿಷ ತಾಸಿನಂತೆ ಎನಿಸಿತು. ಶ್ರೀಕಂಠಶಾಸ್ತ್ರಿಗಳು ಕೂತಲ್ಲಿಯೇ ಕೂತಿದ್ದರು.

"ಸುಭಗಾ, ಒಂದು ಥಾಲಿ ನೀರು ಕೊಡತೀಯಾ?"

ಸುಭಗೆ ಒಂದು ಕ್ಷಣ ಸುಮ್ಮನಿದ್ದಳು. "ನನ್ನ ಕಡೆ ಮೈಲಗೀ ನೀರು ಅವ ಅಲ್ಲ, ಶ್ರೀಕಂಠಮಾಮಾ. ದೇವರ ಕಟ್ಟೀ ಬುಡಕಿನ ಮಾಡದಾಗ ಅಪ್ಪ ಮಡ್ನೀರು ಇಟ್ಟು ಹೋಗ್ಯಾನ. ಅವನ್ನಽ ಬೇಕಾರ ತೊಗೋತೀ ಏನು?" ಎಂದಳು ನಿರ್ವಾಹವಿಲ್ಲದೇ.

"ನಿನ್ನ ಕಡೆಯು ನೀರಽ ಕೊಡು, ಸುಬಗಾ, ಅದರಾಗೇನದ. ಪಾಪ, ನಿನ್ನ ದೈವಾ ನೋಡಿ ನನಗ ಭಾಳ ಕೆಟ್ಟ ಅನಸ್ತಽದ, ನೋಡು. ನಿನ್ನಲ್ಲಿ ಬೇಕಾಧಂಗ ಕಲಾ ಅದ; ಬೇಕಾಧಂಗ ರೂಪ ಅದ; ಆದರ, ಖರೇ ಸುಖಾನಽ ಇಲ್ಲದೆ ಮ್ಯಾಲೆ, ಇವನ್ನೆಲ್ಲ ತೊಗೊಂಡು ಏನು ಮಾಡೋದದ?........" ಶ್ರೀಕಂಠಶಾಸ್ತ್ರಿಗಳು ಇನ್ನೂ ಏನೇನೋ ಮಾತಾಡಿದರು. ಸುಭಗೆಯ ಮುಖ ಕಪ್ಪಿಟ್ಟಿತು. ಅವಳು ರೇಗಿಗೆದ್ದಳು. ಒಂದು ಥಾಲಿಯಲ್ಲಿ ನೀರನ್ನು ತುಂಬಿ ಅಡಿಗೆಯ ಮನೆಯ ಬಾಗಿಲಲ್ಲಿ ಮೌನವಾಗಿಯೇ ತಂದಿಟ್ಟಳು. ಕೂಡಲೇ ಅಡಿಗೆ-ಬಚ್ಚಲ ಮನೆಗಳ ಬಾಗಿಲುಗಳ ಚಿಲಕ ಹಾಕಿ, "ಹೊರಗೆ ಹೋಗುವ ಮುಂದೆ ತಲಬಾಗಿಲ ಚಿಲಕಾ ಹಾಕಿಕೊಂಡು ಹೋಗತೀಯಾ?"

ಎಂದು ಹೊರಗೆ ಹೋಗಿಬಿಟ್ಟಳು. ಹುಸಿಯಲ್ಲಿಯ ವೃಂದಾವನದ ಕಟ್ಟೆಯ ಮುಂದೆ ಒಂದು ಕ್ಷಣ ಸುಮ್ಮನೆ ನಿಂತಳು; ಧ್ಯಾನಿಸಿದಳು; ಶೂನ್ಯದೃಷ್ಟಿಯಿಂದ ಕತ್ತಲೆಯನ್ನೇ ದಿಟ್ಟಿಸಿದಳು. ತನ್ನಲ್ಲಿದ್ದ ಧೈರ್ಯವನ್ನೆಲ್ಲ ಕ್ರೋಡೀಕರಿಸಿ ಮತ್ತೆ ತಲೆಬಾಗಿಲದ ಹೊಸತಿಲ ವರೆಗೆ ಬಂದಳು. ಶ್ರೀಕಂಠಶಾಸ್ತ್ರಿಗಳ ಮೋರೆ ಹುಚ್ಚಿಟ್ಟಿದ್ದಿತು. ಅವರು ಮೂಗಿಗೆ ಹತ್ತಿದ ನಾಸೀಪುಡಿಯನ್ನು ಒರೆಸಿಕೊಳ್ಳುತ್ತಿದ್ದರು. ಸುಭಗೆ ಸಿಟ್ಟಿನಿಂಧಲೇ ಅಂದಳು : “ಯಾರೂ ಮನಿಯಾಗ ಇಲ್ಲದಾಗ ಹೀಂಗ ಬಂದು ಕುತಗೊಂಡು, ಹುಚ್ಚುಚ್ಚನಾಂಗ ಹರಟೀ ಹೊಡೀಬಾರದು.” ಶ್ರೀಕಂಠಶಾಸ್ತ್ರಿಗಳನ್ನು ದುರುದುರು ನೋಡಿ ಬದಿಯಲ್ಲಿಯ ಸಂಗಪ್ಪನ ಮನೆಯಲ್ಲಿ ಹೋಗಿ ಕುಳಿತಳು.

ತಿರುಗಿ ಬಂದಾಗ ತಲೆಬಾಗಿಲಿಗೆ ಚಿಲಕ ಬಿದ್ದಿತ್ತು. ಒಳಗೆ ಹೋಗಿ, ಬಾಗಿಲ ಅಗಳಿಯನ್ನು ಹಾಕಿಕೊಂಡು, ಹಾಸಿಗೆಯನ್ನು ಇದ್ದಲ್ಲಿಯೇ ಉರುಳಿಸಿ ಮಲಗಿಕೊಂಡಳು. ಮಲಗುವದೊಂದೇ ತಡ ದುಃಖವು ಉಕ್ಕಿ ಬಂದು, ಬಿಕ್ಕಿ ಬಿಕ್ಕಿ ಅಳಹತ್ತಿದಳು. ರಾತ್ರಿಯೆಲ್ಲ ಅಳುವಿನಲ್ಲಿಯೇ ಕಳೆದು ಬೆಳಗು ಮುಂಜಾನೆ ನಿದ್ರೆಹೋದಳು.

ಮರುದಿನ ಮುಂಜಾನೆ ಎಂಟು ಗಂಟೆಯಾದರೂ ಮುಚ್ಚಿದ ಮುಸುಕನ್ನು ತೆರೆಯಲಿಲ್ಲ. ಹತ್ತುಗಂಟೆಯ ಸುಮಾರಿಗೆ ನಿರ್ವಾಹವಿಲ್ಲದೆ ಮೇಲೆ ಎದ್ದು, ಆಕಳು ಹಿಂಡಿಕೊಂಡು, ಅದರ ಕಣ್ಣಿಯನ್ನು ಬಿಚ್ಚಿದಳು. ಅಲ್ಲಿ ಇಲ್ಲಿ ಧ್ಯಾನಿಸುತ್ತ ಕುಳಿತು ಹೊತ್ತುಗಳೆದಳು. ಹಾಳುಗಸವನ್ನೂ ತೆಗೆಯುವ ಮನಸ್ಸಾಗಲಿಲ್ಲ. ಮೈ ತೊಳೆಯುವ ಆಸೆಯೂ ಆಗಲಿಲ್ಲ. ಹೊಟ್ಟೆ ಹಸಿದಾಗ, ತಂಗಳು ಭಕ್ಕರಿಗಳ ಮೇಲೆ ಮೊಸರು-ಚಟ್ಣಿ ಹಾಕಿಕೊಂಡು ತಿಂದು ಮತ್ತೆ ಹಾಸಿಗೆಯ ಮೇಲೆ ಉರುಳಿಕೊಂಡಳು.

ಮಧ್ಯಾಹ್ನ ಒಂದರ ಸುಮಾರಿಗೆ ಪ್ರತಿನಿತ್ಯದಂತೆ ಗಂಗಾಸಾನಿ ‘ಸುಭಗಾ!’ ಎಂದು ಬಾಗಿಲಲ್ಲಿ ಹಣಿಯಿಕ್ಕಿದಾಗ, ಎಲ್ಲವೂ ಅವ್ಯವಸ್ಥೆಯಿಂದ ಇದ್ದುದನ್ನು ನೋಡಿ ಗಾಬರಿಯಾದಳು. ಸುಭಗೆ ‘ಬಾ, ಗಂಗಕ್ಕಾ’ ಎಂದಳು ಮಾತ್ರ. ಆಕೆಯನ್ನು ಕಂಡಾಗ ಮೊಗದಲ್ಲಿ ತಾನಾಗಿಯೇ ಮೂಡುವ ನಗೆಯ ಸುಳುವನ್ನು ಸಹ ಇಂದು ಗಂಗಾಸಾನಿ ಕಾಣಲಿಲ್ಲ.

“ಯಾಕ ಸುಭಗಾ, ಮೈಯಾಗ ನೆಟ್ಟಗಿಲ್ಲೇನು?”

" ನನಗೇನಾಗೇದ ಬಾ, ಗಂಗಕ್ಕ " ಎಂದು ಹಾಸಿಗೆಯನ್ನು ಸುತ್ತಿ ಎತ್ತಿಟ್ಟಳು. ಮುಂಗೂದಲುಗಳನ್ನು ಹಿಂದೆ ಮಾಡಿಕೊಂಡು ಗಂಗಾಸಾನಿಗೆ ಮಂಚದ ಮೇಲೆ ಕೂಡಲು ಹೇಳಿದಳು. ತಾನೂ ಬದಿಯಲ್ಲಿಯೇ ಕುಳಿತುಕೊಂಡಳು.

" ಮಾರಿ ಸಪ್ಪಗ್ಯಾಕ ಆಗೇದ ಸುಭಗಾ ಇವೊತ್ತು ? "

" ಯಾಕೂ ಇಲ್ಲ. "

ಗಂಗಾಸಾನಿಗೆ ಈ ಉತ್ತರ ಸಮರ್ಪಕವೆನಿಸಲಿಲ್ಲ. ಮೈ ಹಿಡಿದು ನೋಡಿದಳು. ಹಣೆಯನ್ನೂ ಹಿಡಿದು ನೋಡಿದಳು.

" ತಲಿ ನೋಯ್ತದೇನು ? "

" ಉಹೂಂ. "

ಸುಭಗೆ ಹೆಬ್ಬೆರಳ ಉಗುರನ್ನು ಕಡಿಯುತ್ತ ನೆಲವನ್ನು ದಿಟ್ಟಿಸುತ್ತಿದ್ದಳು. ಮುಖವು ಗಂಭೀರವಾಗಿದ್ದಿತು.

" ಏಳು ಹಂಗಾರ ; ಇವತ್ತು ನಿನಗ ಒಂದು ಹೊಸ ನೃತ್ಯ ಸುರುವು ಮಾಡತೇನಿ. "

ಸುಭಗೆ ಏಳಲಿಲ್ಲ. ನೆಲದಲ್ಲಿ ನೆಟ್ಟ ದೃಷ್ಟಿ ಕದಲಲಿಲ್ಲ. ಮುಖದಲ್ಲಿಯ ಗಾಂಭೀರ್ಯ ಹಾಗೆಯೇ ಇತ್ತು.

" ಇವತ್ತು ಬ್ಯಾಡ ಗಂಗಕ್ಕ ನೃತ್ಯ. "

ಒಂದು ಕ್ಷಣ ಮೌನ. ಗಂಗಾಸಾನಿ ಸುಭಗೆಯನ್ನೊಮ್ಮೆ ನೋಡಿದಳು. ಅವಳ ಹತ್ತಿರ ಸರಿದು ಗಲ್ಲವನ್ನು ಹಿಡಿದು " ಏನಾಗೇದ ಕೂಸಃ ನಿನಗ ? ಹೇಳತೀ ಇಲ್ಲೋ ? " ಎಂದಳು.

ನೋಡನೋಡುತ್ತಲೇ ಸುಭಗೆಯ ಕಣ್ಣು ನೀರಿನಿಂದ ತುಂಬಿದವು ; ದುಃಖದಿಂದ ತುಟಿ ನಡುಗಿತು. ಗಂಗಾಸಾನಿಯ ತೊಡೆಯಲ್ಲಿ ಮುಖವಿಟ್ಟು ಅಳಹತ್ತಿದಳು.

ಸುಭಗೆ ಸಾವರಿಸಿಕೊಂಡು, ಕಣ್ಣೊರಸಿಕೊಂಡು, ಎಂದಳು :

" ಗಂಗಕ್ಕ, ನಿನಗ ಒಂದು ಮಾತು ಹೇಳಲ್ಯಾ ? "

" ಮುಚ್ಚಿ ಯಾಕ ಇಟಗೋತೀ, ಕೂಸುಃ ? "

" ನೀನು ನನ್ನ ಮ್ಯಾಲೆ ಸಿಟ್ಟಿಗೇಳೋದಿಲ್ಲಃ ? "

" ಎಂದ ಸಿಟ್ಟಗೆ ಎದ್ದಿದ್ದೆ ಸುಭಗಾ ನಿನ್ನ ಮ್ಯಾಲಿ ? "

ಸುಭಗೆ ಒಂದು ಕ್ಷಣ ಸುಮ್ಮನೆ ಕುಳಿತಳು. ಗಂಗಾಸಾನಿಯನ್ನೊಮ್ಮೆ ನೋಡಿ, ಒಳಗಿದ್ದುದನ್ನು ಹೊರಗೆ ಹಾಕಿದಳು :

" ನಿನ್ನ ಶ್ರೀಕಂಠಶಾಸ್ತ್ರಿಗಳು ಒಳ್ಳೆಯವರಲ್ಲ. "

ಗಂಗಾಸಾನಿಯ ಉತ್ಸುಕತೆಯು ಸೀಮೆ ಮೀರಿತು.

" ಏನಾತೀಗ ? "

ಸುಭಗೆ ಹೆದಹೆದರುತ್ತ, ನಾಚುನಾಚುತ್ತ ಶ್ರೀಕಂಠಶಾಸ್ತ್ರಿಗಳು ಅಂದು ತನ್ನನ್ನು ಗಂಗಾಸಾನಿಯ ಮನೆಯಲ್ಲಿ ನೋಡಿದಂದಿನಿಂದ ಮುನ್ನಾ ದಿನದ ರಾತ್ರಿಯ ವರೆಗೆ ತನ್ನ ಬಗ್ಗೆ ತೋರಿದ ಮನೋವೃತ್ತಿಯನ್ನು ಸಾದ್ಯಂತ ವಿವರಿಸಿದಳು.

ಕೇಳುತ್ತಿದ್ದಂತೆಯೇ ಗಂಗಾಸಾನಿಯ ಮುಖದ ಮೇಲೆ ಕೋಪ, ದುಃಖ, ಜುಗುಪ್ಸೆಗಳು ಒಡಮೂಡಹತ್ತಿದವು. ಮಂಚದ ಮೇಲೆ ಕೂತವಳು ಗೊಂಬೆಯಂತೆ ಸುಮ್ಮನೆ ಕುಳಿತುಬಿಟ್ಟಳು. ಅಂತಃಕರಣದ ತಾಪವೆಲ್ಲ ಧಾರೆಯಾಗಿ ಕಣ್ಣಲ್ಲಿ ಹರಿಯಹತ್ತಿತು.

ತಾಸಾಯಿತು. ಎರಡು ತಾಸಾಯಿತು. ಒಬ್ಬರೂ ಮಾತಾಡಲಿಲ್ಲ. ಕಡೆಗೊಮ್ಮೆ ಗಂಗಾಸಾನಿ ನಿಡಿದಾದ ಉಸಿರುಗರೆದು ಸುಭಗೆಯನ್ನು ಕೇಳಿ ಕೊಂಡಳು :

" ಸುಭಗಾ, ನನ್ನದೊಂದು ಮಾತು ನಡಸತೀಯಾ ? "

" ಹೂಂ. "

" ಈ ಸುದ್ದೀ ಮತ್ತ ಯಾರ ಮುಂದೂ ಹೇಳಬ್ಯಾಡ. "

" ಗಂಗಕ್ಕ, ನೀನು ನನ್ನಾಕಿ ಅಂತ ನಿನ್ನ ಮುಂದ ಹೇಳಿದೆ. ನನಗ ಬ್ಯಾರೆ ಮಂದಿ ಯಾರು ಇದ್ದಾರ ? ಇಂಥಾ ಸುದ್ದೀ ಹೇಳೋದರs ಹ್ಯಾಂಗs ? "

" ಅವರು ಮಾಡಿದ ತಪ್ಪಿಗೆ ನಾನು ನಿನಗ ತಪ್ಪಾತ್ಯು ಅಂತೇನಿ ; ಶಂಭುಲಿಂಗಗ ಶಂಭುಲಿಂಗನ ಭಾವಿಯಿಂದ ಹೆಜ್ಜಿನಮಸ್ಕಾರಾ ಹಾಕತೀನಿ " ಎಂದವಳೆ ಗಂಗಾಸಾನಿ ಹೊರಹೊರಟಳು. ಭಾರವಾದ ಮನಸ್ಸಿನಿಂದ ನೆಟ್ಟಗೆ ಶಂಭುಲಿಂಗನ ಗುಡಿಗೇ ಹೋದಳು. ಇಡಿಯ ದಿನ ಶ್ರೀಕಂಠಶಾಸ್ತ್ರಿಗಳು

ಕಣ್ಣಿಗೆ ಬಿದ್ದಿರಲಿಲ್ಲ. ಶಾಸ್ತ್ರಿಗಳ ಬದಲು ರಾತ್ರಿ ಮಂಗಳಾರತಿಗೆ ಬಂದ ಜೋಯಿಸರ ಶೀನೂ ಶ್ರೀಕಂಠಶಾಸ್ತ್ರಿಗಳು ಆ ದಿನ ನಸುಕಿನಲ್ಲಿಯೇ ಸಂಚಾರಕ್ಕೆ ಹೋದರೆಂದೂ ಎಂಟು-ಹತ್ತು ದಿನ ತಿರುಗಿ ಬರುವದಿಲ್ಲವೆಂದೂ ಗಂಗಾಸಾನಿಗೆ ಹೇಳಿದನು.

## ೧೭

ಶಂಕರಭಟ್ಟರು ಹದಿನೈದು ದಿನಗಳ ವರೆಗೆ ವಿಶ್ವಪ್ರಯತ್ನ ಮಾಡಿದರು. ಊರು-ಊರು ತಿರುಗಿದರು. ನಾಲ್ಕಾರು ನಾಟಕ ಕಂಪನಿಗಳಿಗೂ ಹೋಗಿ ವಿಚಾರಿಸಿ ಬಂದರು. ಅವರಿಗೆ ನಾಟಕ ಕಲಿಸುವವರು ಯಾರೂ ಸಿಗಲಿಲ್ಲ. ಕೆಲವರು ಹಳ್ಳಿಗೆ ಹೋಗಲು ಒಪ್ಪಲಿಲ್ಲ; ಕೆಲವರು ವಿಪರೀತವಾದ ಸಂಬಳ ಕೇಳಿದರು; ಇನ್ನೂ ಕೆಲವರು ತಾವಿರುವ ನಾಟಕ ಕಂಪನಿಯ ಯಜಮಾನನಿಗೆ ‘ ಬಾಂಡು ’ ಬರೆದು ಕೊಟ್ಟಿರುವದರಿಂದ ಬರುವದಾಗುವದಿಲ್ಲವೆಂದು ಹೇಳಿದರು.

ಹೀಗಾಗಿ ಅವರು ನಿರಾಶೆಯಿಂದಲೇ ಬೆಟ್ಟದ ಹಾದೀ ಹಿಡಿದಿದ್ದರು. ಮನೆಯನ್ನು ಬಿಟ್ಟು ಬಂದು ಬಹಳ ದಿನವಾದುದರಿಂದಲೂ, ಸುಭಗಾ ಒಬ್ಬಳೇ ಮನೆಯಲ್ಲಿದ್ದುದು ಅವರ ಆತುರವನ್ನು ಹೆಚ್ಚಿಸಿದ್ದರಿಂದಲೂ ಊರ ಕಡೆಗೆ ಲಗುಬಗೆಯಿಂದಲೇ ಸಾಗಿದ್ದರು.

ಅವರು ಕುಳಿತ ಗಾಡಿಯ ಡಬ್ಬಿ ಕಿಕ್ಕಿರಿದು ತುಂಬಿದ್ದಿತು. ಇಪ್ಪತ್ತೆರಡು ಜನರಿಗೆಂದು ಇದ್ದ ಡಬ್ಬಿಯಲ್ಲಿ ನಾಲ್ವತ್ತು ಜನ ತುಂಬಿಕೊಂಡಿತ್ತು. ಮುಂಬೈಯಿಂದ ಹೊರಟ ಮಾರವಾಡಿಯೊಬ್ಬನು, ಹಟದಿಂದ ಮೂವರು ಜನರ ಸ್ಥಳವನ್ನು ಆಕ್ರಮಿಸಿ ಹಾಸಿಗೆ ಹಾಸಿದವನು ಮಂದಿ ಮುಂಗೈ ಹಿಡಿದು ಎಬ್ಬಿಸಿದ್ದರೂ ಮೇಲೆ ಎದ್ದಿರಲಿಲ್ಲ. ಮಂಗಳೂರಿಗೆ ಹೋಗುವ ಒಬ್ಬ ಪ್ರವಾಸಿಯ ದೊಡ್ಡ ದೊಡ್ಡ ಟ್ರಂಕು, ಹಣ್ಣುಗಳ ಬುಟ್ಟಿ ಮುಂತಾದವುಗಳಿಂದಲೇ ಅರ್ಧ ಡಬ್ಬಿ ತುಂಬಿದಂತಿತ್ತು. ಸ್ಥಳದ ಅಭಾವದಿಂದ, ಸಾಮಾನುಗಳನ್ನು ಇಡುವದಕ್ಕಾಗಿಯೇ ಇದ್ದ ಮೇಲಿನ ಸ್ಥಳಗಳಲ್ಲಿ ಸಹ ಜನ ಬಾಗಿಕೊಂಡು ಗಾಡಿಯ ಮೇಲ್ಭಾಗಕ್ಕೆ ತಲೆಯನ್ನು ಆನಿಸಿಕೊಂಡು

ಕುಳಿತಿದ್ದರು. ಜನ ಓಡಾಡುವ ಬಾಗಿಲಲ್ಲಿ ಸಹ ದೊಡ್ಡ ದೊಡ್ಡ ಪೆಟ್ಟಿಗೆಗಳು ಸ್ಥಳವನ್ನು ಆಕ್ರಮಿಸಿಕೊಂಡು ಬಿಟ್ಟಿದ್ದವು. ಶಂಕರಭಟ್ಟರು ಪಾಯುಖಾನಿಯ ಬಾಗಿಲಲ್ಲಿಯೇ ನಿಲ್ಲಲಿಕ್ಕೆ ಮಾತ್ರ ಇಂಬನ್ನು ಮಾಡಿಕೊಂಡು ನಿಂತಿದ್ದರು. ಸಾಲದುದಕ್ಕೆ ಡಬ್ಬಿಯಲ್ಲಿ ಕತ್ತಲೆ ಬೇರೆ. ಗಾಡಿಯು ಮೇಲ್ಭಾಗದಲ್ಲಿ ಮೂರು ದೀವಿಗೆಗಳ ಯೋಜನೆಯೇನೋ ಇದ್ದಿತು. ಆದರೆ, ಎರಡು ಸ್ಥಳಗಳಲ್ಲಿ 'ಬಲ್ಬು'ಗಳೇ ಇರಲಿಲ್ಲ. ನಡುವಿನ ದೀವಿಗೆ ಮಾತ್ರ ಉರಿಯುತ್ತಿದ್ದರೂ, ಮೇಲಿನ ಕಾಜಿಗೆ ಕಪ್ಪುಬಣ್ಣ ಮೆತ್ತಿದುದರಿಂದ ಅದೂ ಮುಖ ಹಾಳಾಗಿದ್ದಿತು.

ಗಾಡಿ ನಿಂತಾಗ ಒಬ್ಬರು ಇಳಿದೊಡನೆ ಮೂವರು ಒಳಗೆ ನುಸುಳಿ ಬರುತ್ತಿದ್ದುದರಿಂದ ಗಾಡಿ ಮುಂದೆ ಸಾಗಿದಂತೆ ಜನ ಹೆಚ್ಚುತ್ತಲೇ ಇದ್ದಿತು. ಒಳಗೆ ಬರುವಾಗ ಜನ ಇಲಿಯಂತೆ ವಿನಯದಿಂದ ಪ್ರವೇಶ ಮಾಡುತ್ತಿದ್ದವರು, ಒಮ್ಮೆ ಒಳಗೆ ಬಂದೊಡನೆ ಮತ್ತೆ ಒಳಗೆ ಬರಲು ಪ್ರಯತ್ನಿಸುತ್ತಿದ್ದ ಜನರಿಗೆ ಹುಲಿಯಂತೆ 'ಗುರ್' ಎನ್ನುತ್ತಿದ್ದರು.

ಈ ಜನದಟ್ಟಣೆ ಅದೇ ಡಬ್ಬಿಯಲ್ಲಿ ಕುಳಿತುಕೊಂಡಿದ್ದ ಪೋಲೀಸ್ ಜಮಾದಾರನೊಬ್ಬನ ಕೋಪವನ್ನು ಕೆರಳಿಸಿತು. ಅವನು ಹಲ್ಲು ಕಡಿದನು. "ಕುರೀ ಹಂಗ ಒಂದs ಡಬ್ಬ್ಯಾಗ ಯಾಕ ತುಂಬತೀರಿ? ಮುಂದಿನ ಡಬ್ಬಿ ಖಾಲೀ ಅದ; ಅಲ್ಲಿ ಹೋಗಬಾರದs?" ಎಂದು ಗದ್ದರಿಸಿದನು. ಇಪ್ಪತ್ತೆರಡು ಜನರನ್ನು ಬಿಟ್ಟು ಉಳಿದವರನ್ನು ಹೊರಗೆ ಹಾಕುವೆನೆಂದು, ಅಂಜಿಕೆ ಹಾಕಿದನು. ತಾನು ಸಹ ಇಪ್ಪತ್ತೆರಡು ಜನರಿಗಿಂತ ಹೆಚ್ಚು ಜನರಿದ್ದಾಗಲೇ ಪ್ರವೇಶ ಮಾಡಿದ್ದನೆಂಬುದನ್ನು ಮರೆತು ಜನರಿಗೀಗ ಕಾಯಿದೆಯೇ ಗೊತ್ತಿಲ್ಲವೆಂದು ಆರ್ಭಟಿಸಿದನು. ಜನ ಅವನ ಮಾತು ಕೇಳುವದೇ?

ಗಾಡಿ ಕೂಗಿತು. ಮುಂದಿನ ನಿಲ್ದಾಣದಲ್ಲಿ ಸಂತೆಯ ಮೂಲಕ ಈ ದಿನ ದಟ್ಟಣೆ ಬಹಳ ಇರಬಹುದೆಂಬ ಕಲ್ಪನೆ ಬಂತು ಆ ಜಮಾದಾರನಿಗೆ. ಒಮ್ಮೆಲೆ ಹೆಗಲ ಮೇಲೆ ಹಾಕಿದ ಪಟ್ಟನ್ನು ಟೊಂಕಕ್ಕೆ ಬಿಗಿದುಕೊಂಡು, ಹೊಳೆಯುವ ಹಿತ್ತಾಳಿಯ ಗುಂಡಿಗಳನ್ನು ಸರಿಪಡಿಸಿಕೊಂಡು, ಗುಂಡಿಗೆ ಜೋತಾಡುತ್ತಿದ್ದ 'ಪೀಪಿ'ಯನ್ನೂ ಕಿಸೆಯಲ್ಲಿರಿಸಿ, ಮಡಿಚಿ ಕಿಸೆಯಲ್ಲಿಟ್ಟಿದ್ದ ಟೊಪ್ಪಿಗೆಯನ್ನು ತಲೆಯ ಮೇಲೆ ಸೊಟ್ಟ ಮಾಡಿ ಹಾಕಿಕೊಂಡು ಕೈಯಲ್ಲಿಯ

ಬಡಿಗೆಯನ್ನು ತಿರುವುತ್ತ ಬಾಗಿಲ ಕಡೆಗೆ ಹೋದನು. ಯಾರನ್ನೂ ಒಳಗೆ ಬಿಡಲಿಕ್ಕಿಲ್ಲೆಂದು ಪಣತೊಟ್ಟು ನಿಂತನು.

ಕೈಕಂಬಗಳು ಹಿಂದೆ ಓಡಿದವು. ಎರಡು ನಿಮಿಷದಲ್ಲಿ ಗಾಡಿಯೂ ನಿಂತಿತು. ಪೋಲಿಸ್ ಜಮಾದಾರನು ಇಳಿಯುವ ಒಬ್ಬಿಬ್ಬರನ್ನು ಇಳಿಸಿ, ಅರೆದೆರೆದ ಬಾಗಿಲಲ್ಲಿಯೇ ಎದೆ ಸೆಟೆಸಿ ನಿಂತುಕೊಂಡನು. ಒಳಗೆ ನುಗ್ಗುವ ಜನರಿಗೆ ಬಗ್ಗಲಿಲ್ಲ. ಹಿಂದೆ ಕದಲಲಿಲ್ಲ. ಬಾಗಿಲ ಕೆಳಗಿನ ಫಳಿಯ ಮೇಲೆ ಹಳೆಂಟು ಜನ ಕಿಡಿಕಿಗೆ, ಬಾಗಿಲದ ಆಧಾರಕಂಬಿಗೆ, ಜೋತುಬಿದ್ದು ನಿಂತು ಕೊಂಡಿತು. ಗಾದಿ ಮತ್ತೆ ಮುಂದೆ ಸಾಗಿತು. ಜಮಾದಾರ ಮಿಟ್ಟ ಮಿಸುಗಲಿಲ್ಲ.

ಹತ್ತು ನಿಮಿಷಗಳಾಗಿರಬಹುದು. ಗಾಡಿ ವೇಗದಿಂದ ಸಾಗಿದ್ದಿತು. ಆಗ ಗಾಡಿಯ ಹೊರಗಿನ ಹಿಂಡಿನೊಳಗಿಂದ ಆರ್ತ ಧ್ವನಿಬಂತು: "ಪೋಲೀಸ್ ಸಾಹೇಬ ! ಮೇಹರ್ಬಾನಿಗಿ ಮಾಡಿ ನನ್ನೊಬ್ಬನ್ನ ಬಿಡ್ರಿ ಒಳಗೆ, ಕೈ ಸೋತಽದ ! "

ಒಳಗೆ ನಿಂತುಕೊಂಡ ಜನರ ಲಕ್ಷ್ಯ ಇತ್ತ ಹೋಯಿತು. ಹೀಗೆ ಕೇಳಿಕೊಂಡ ವ್ಯಕ್ತಿ ತನ್ನ ಬಲಗೈಯನ್ನು ಬಾಗಿಲ ಬದಿಯಲ್ಲಿಯ ಕಂಬಿಯಲ್ಲಿ ತೋಳಮುಟ ಕೈಹಾಕಿ ಅದನ್ನೇ ಆಧಾರವಾಗಿಟ್ಟುಕೊಂಡು ಕಾಲ ಫಳಿಯ ಮೇಲೆ ನಿಂತಿದ್ದನು. ಕಂಬಿಯಲ್ಲಿಯ ಕೈಯಲ್ಲಿಯೇ ಒಂದು ಕಬ್ಬಿಣದ ಬ್ಯಾಗು ಇತ್ತು. ಅವನ ಎಡದ ಬಗಲಲ್ಲಿ ಚೀಲದಲ್ಲಿ ಅಡಗಿದ ವೀಣೆಯೊಂದು ಎಡಗೈಯ ಆಧಾರದಿಂದ ಜೋತಾಡುತ್ತಿದ್ದಿತು. ವೀಣೆಗೆ ಪೆಟ್ಟು ತಾಗ ಬಾರದೆಂದು ಅವನು ವೀಣೆಯ ಕಡೆಗೆ ಬಾಗಿದ್ದನಾದುದರಿಂದ, ಕಂಬಿಯ ಲ್ಲಿಯ ಅವನ ಬಲದೋಳಿಗೆ ಬಹಳ ಭಾರ ಬಿದ್ದು, ಸೋತು, ಅದು ನಡು ಗುತ್ತಿದ್ದಿತು.

ಜನ ಗಾಬರಿಯಾದರು. ಆದರೆ ಜಮಾದಾರನ ಎದೆ ಕರಗಲಿಲ್ಲ. ಹೊರಗಿನಿಂದ ಆ ವ್ಯಕ್ತಿ ಒಂದೇಸವನೆ 'ಕೈ ಸೋತಽದ, ಒಳಗ ಬಿಡ್ರಿ!' ಎಂದು ಅನ್ನುತ್ತಲೇ ಇದ್ದ.

ಕಾಶಿಯ ಯಾತ್ರೆಯನ್ನು ಮುಗಿಸಿಕೊಂಡು, ಮರುಳಿ ಬರುತ್ತಲಿದ್ದ ಒಬ್ಬ ಅಮ್ಮ ಎಂದಳು: " ರಾಮ ರಾಮ! ಪಾಪ ಆ ಪ್ರಾಣಿ ಎಷ್ಟು ಒದ್ದಾಡ

ತೈದ. ಒಳಗ ಬಿಡಬಾರದೈ ಮಹಾರಾಯಾ. ಕೆಳಗ ಬಿದ್ದು ಜೀವ ಹೋದ್ರ, ನೀನು ಕೊಡತೀಯಾ ? ನಮ್ಮಂಗೈ ಅವರು. ಗಾಡಿ ಯಾರ ಮನೀದೇನೂ ಅಲ್ಲ. "

ಜಮಾದಾರನಿಗೆ ಬುದ್ಧಿ ಬಂತು. ಹಿಂದೆ ಸರಿದು ಆ ವ್ಯಕ್ತಿಯ ಕೈಯಲ್ಲಿಯ ಬ್ಯಾಗನ್ನೂ ವೀಣೆಯನ್ನೂ ಇಸಿದುಕೊಂಡು ಅವನನ್ನು ಒಳಗೆ ಬರಗೊಟ್ಟ. ಅವನೊಡನೆ ಬೇರೆ ಕೆಲವರೂ ಒಳಗೆ ನುಸುಳಿಕೊಂಡರು.

ಆ ವ್ಯಕ್ತಿ ತುಂಬ ಬೆವೆತಿದ್ದಿತು. ಕಿಸೆಯಲ್ಲಿಯ ಕರವಸ್ತ್ರದಿಂದ ಮೋರೆ ಯೊರೆಸಿಕೊಳ್ಳುತ್ತ ಬಾಗಿಲದಲ್ಲಿಯೇ ನಿಂತ. ಉಳಿದವರೆಲ್ಲ ಅವನನ್ನೇ ದಿಟ್ಟಿಸಿದರು. ಉದ್ದನ್ನ ಆಳು; ತೀರ ಗಡುತರವಲ್ಲದಿದ್ದರೂ ತೆಳ್ಳಗಲ್ಲದ ದೇಹ; ಅವನು ತೊಟ್ಟ ನೆಹರೂಶರ್ಟು, ಅವನ ಗುಲಾಬಿಯಂಥ ಕೆಂಪು ಬಣ್ಣ, ಅವನ ದೊಡ್ಡ ಕಣ್ಣುಗಳು, ಡಬ್ಬಿಯಲ್ಲಿಯ ಮಂದವಾದ ಬೆಳಕಿನಲ್ಲಿಯೂ ಎದ್ದು ಕಾಣುತ್ತಿದ್ದವು. ತಲೆತುಂಬ ಗೇಣುದ್ದ ಇದ್ದ ಕೂದಲುಗಳನ್ನು ಹಿಂದೆ ಬಾಚಿಕೊಂಡಿದ್ದನಾದುದರಿಂದ ಮೊದಲೇ ಹರವಾಗಿದ್ದ ಹಣೆ ಇನ್ನೂ ಹರವಾಗಿ ಕಾಣುತ್ತಿದ್ದಿತು. ವೇಗದಿಂದ ಸಾಗಿದ ಗಾಡಿ ತೂಗಾಡುತ್ತಿದ್ದುದರ ಮೂಲಕ, ಜೋಲಿ ಹೋಗಬಾರದೆಂದು ಬಾಗಿಲಿಗೆ ಕೈಯೂನಿಸಿ ನಿಂತುಕೊಂಡಿದ್ದನು.

ಜಮಾದಾರ ಅವನನ್ನೊಮ್ಮೆ, ಅವನ ವೀಣೆಯನ್ನೊಮ್ಮೆ, ನೋಡಿ ಅಂದ :

" ಇದು ನಿಮ್ಮದೈ ಏನ್ರಿ ? "

" ಹೌದು. " ಎಂದು ವಿನಯದ ಉತ್ತರ ಬಂತು.

" ಬಾರಿಸಲಿಕ್ಕೆ ಬರತಿರಬಹುದಲ್ಲ ? "

ಆ ವ್ಯಕ್ತಿ ಉತ್ತರ ಕೊಡಲಿಲ್ಲ. ಒಮ್ಮೆ ಮುಗುಳುನಗೆಯಿಂದ ನಕ್ಕನು ಮಾತ್ರ. ಅವನು ನಕ್ಕೊಡನೆ ತುಂಬಿಕೊಂಡಿದ್ದ ಗಲ್ಲದಲ್ಲಿ ಗುಣಿ ಬಿದ್ದು ಮುಖ ಚೆಲುವಾಗಿ ಕಂಡಿತು.

ಜಮಾದಾರನಿಗೆ ನಗೆಯ ಅರ್ಥ ತಿಳಿಯಿತು.

" ಬಾರಿಸ್ಯಾದರೂ ಬಾರಿಸರಲ್ಲ ? ಜನ ಕೇಳತೈದ. "

" ಬಾರಿಸಬಹುದಾಗಿತ್ತು. ಆದರ, ಕೂತುಕೊಳ್ಳೋ ಅನುಕೂಲ

ಇಲ್ಲಲ್ಲ, ಜಮಾದಾರಸಾಹೇಬ." ಎಂದ ಆತ, ಜಮಾದಾರರ ಬಲದ ತೋಳಿನ ಮೇಲಿನ ಬಿಳಿಯ ಪಟ್ಟಿಯನ್ನು ನೋಡಿ.

ಜಮಾದಾರನು ಚಟ್ಟನೆ ಮೇಲೆದ್ದನು. ಜನರನ್ನು ಸರಿಸಾಡಿದನು. ಅಸ್ತವ್ಯಸ್ತವಾಗಿ ಅಲ್ಲಿ ಇಲ್ಲಿ ಒಟ್ಟಿದ ಸಾಮಾನುಗಳನ್ನೆಲ್ಲ ಕೂಡುವ ಆಸನಗಳ ಕೆಳಗೆ ಇಟ್ಟನು. ಹಾಸಿಗೆಸುರುಳಿಗಳನ್ನೆಲ್ಲ ಆಸನಗಳ ಸಾಲುಗಳ ನಡುವೆ ಹಾಕಿ ನಿಂತ ಜನರನ್ನು ಅಲ್ಲಿ ಕೂಡಿಸಿದನು. ಈ ಗಡಿಬಿಡಿ, ಗಾಡಿಯಲ್ಲಿಯ ಕೆಲವು ಜನರಿಗೆ ಸೇರಲಿಲ್ಲ. ಆದರೂ ಅವನಿಗೆ ಏನನ್ನೂ ಅನ್ನುವ ಧೈರ್ಯವೂ ಆಗಲಿಲ್ಲ. ಮಲಗಿದ ಮಾರವಾಡಿಯು ಮಾತ್ರ ಗೊರಕೆ ಹೊಡೆಯುತ್ತಲೇ ಇದ್ದನು. ಎದುರುಬದುರಿನ ಎರಡೂ ಬಾಗಿಲುಗಳ ನಡುವಿನ ಸ್ಥಳ ತೆರವಾ ಗೊಡನೆ, ಮೇಲಿನ ಫಳಿಯ ಮೇಲೆ ಇಟ್ಟಿದ್ದ ತನ್ನ ಹರವಾದ ಎತ್ತರವಾದ ಟ್ರಂಕನ್ನು ಕೆಳಗೆ ಇಳಿಸಿಟ್ಟು ಅದರ ಮೇಲೆ ಕೂಡಲು ಆ ವ್ಯಕ್ತಿಗೆ ಹೇಳಿದನು.

ಆ ವ್ಯಕ್ತಿ ವೀಣೆಯನ್ನು ಹೊರಗೆ ತೆಗೆದ. ಪೆಟ್ಟಿಗೆಯ ಮೇಲೆ ಕುಳಿತು ತಂತಿಗಳನ್ನು ಸರಿಪಡಿಸಿದ. ಬಾರಿಸಲು ಸುರುವುಮಾಡಿದ ಕ್ಷಣ ದಲ್ಲಿಯೇ ಯಾರಿಗಾದರೂ ಅನಿಸುವಂತೆ ಇತ್ತು ಆ ಬೆರಳುಗಳು ಆ ವೀಣೆಗೆ ಹೊಸತಲ್ಲವೆಂದು. ಗಾಡಿಯ ಸಪ್ಪಳ ವೀಣೆಯ ಸುನಾದಕ್ಕೆ ಪ್ರತಿಕೂಲ ವಿದ್ದುದರಿಂದ ಆ ವ್ಯಕ್ತಿ ಕಿಡಿಕೆಗಳನ್ನು ಹಾಕಿದನು. ತತ್‌ಕ್ಷಣವೇ ಎಲ್ಲ ಕಿಡಿಕೆಗಳು 'ಚಟ್ ಚಟ್' ಎಂದು ಮುಚ್ಚಿಕೊಂಡವು. ಸಪ್ಪಳ ಸ್ವಲ್ಪ ಮಟ್ಟಿಗೆ ಕಡಿಮೆಯಾಗಿ ವೀಣೆಯ ನಾದ ಸ್ಪಷ್ಟವಾಗಿ ಕೇಳಹತ್ತಿತು.

ಅವನ ಎಡಗೈಯೂ ಎಡಗೈಯ ಬೆರಳುಗಳೂ ಸರಿದಾಡಿದಂತೆ, ಕುಣಿಯುಹತ್ತಿದಂತೆ ಡಬ್ಬಿಯ ವಾತಾವರಣ ಒಮ್ಮಿಂದೊಮ್ಮೆ ಬದಲಾಯಿತು. ಸುಶ್ರಾವ್ಯವಾದ ನಾದತರಂಗ ಪ್ರವಾಸದಿಂದ ದಣಿದ ಜನರ ಮನಸ್ಸನ್ನು ಪ್ರಸನ್ನಗೊಳಿಸಹತ್ತಿತು. ಗಾಡಿಯ ಸಪ್ಪಳದ ಹಿನ್ನೆಲೆಯಲ್ಲಿ, ಗಾಲಿ ಗಳ ತಾಳದ ಮೇಳದಲ್ಲಿ ವೀಣೆಯ ತಂತಿಗಳು ಮಿಡಿಯಹತ್ತಿದವು. ಬೆರಳುಗಳು ತಂತಿಗಳ ಮೇಲೆ ಕುಣಿಕುಣಿದಂತೆ ಕೇಳುವವರ ಹೃದಯಗಳೂ ಕುಣಿಯುಹತ್ತಿದವು. ಮಲಗಿದವರು ಎದ್ದು ಕುಳಿತರು; ತೂಕಡಿಸುವವರು ಕಣ್ದೆರೆದರು. ಎಲ್ಲರ ಕಣ್ಣುಗಳಲ್ಲಿ ಆನಂದಾಶ್ಚರ್ಯಗಳ ಬೆಳಕು ಒಡಮೂಡಿತು.

ಬಾರಿಸುವದನ್ನು ಮುಗಿಸಿ, ಆ ವ್ಯಕ್ತಿ ಜಮಾದಾರರನ್ನು ಒಮ್ಮೆ

ನೋಡಿ ಮತ್ತೆ ನಕ್ಕ. ಜಮಾದಾರನ ಮುಖದ ಮೇಲೆ ಆ ವ್ಯಕ್ತಿಯ ಬಗೆಗೆ ಆದರ ಒಡೆದುಕಾಣುತ್ತಿತ್ತು.

ಈಗಾಗಲೇ ಗಾಡಿ ಎರಡು ಸಿಲ್ದಾಣಗಳನ್ನು ದಾಟಿ ಮುಂದೆ ಸಾಗಿದ್ದಿತು. ಬಾರಿಸುವದು ಮುಗಿದೊಡನೆ ಶಂಕರಭಟ್ಟರು ಆ ವ್ಯಕ್ತಿಯ ಹತ್ತಿರ ಬಂದು ಕುಳಿತುಕೊಂಡು ಮಾತಿಗೆ ಮೊದಲು ಮಾಡಿದರು.

" ನಿಮ್ಮ ಹೆಸರೇನು ? "

" ನನ್ನ ಹೆಸರು ರಾಮು. "

" ಯಾವ ಊರ್ರಿ ನಿಮ್ಮದು ? "

ರಾಮು ನಕ್ಕ. ಒಂದು ಕ್ಷಣ ಸುಮ್ಮನೆ ಕುಳಿತ. ಆಮೇಲೆ ಶಂಕರ ಭಟ್ಟರ ಕಡೆಗೆ ತಿರುಗಿ ಹೇಳಿದ :

" ನಾನು ಇದ್ದಲ್ಲಿಯೇ ನನ್ನ ಊರು. ನಾನು ಹುಡುಗನಿದ್ದಾಗs ನನ್ನ ತಂದೆ-ತಾಯಿಗಳು ತೀರಿಕೊಂಡುಬಿಟ್ಟರು. ಎಲ್ಲಿಯೋ ಬೆಳೆದೆ. ನನಗೆ ಎಲ್ಲಿಯೂ ಹೊಲ ಇಲ್ಲ; ಮನೀ ಇಲ್ಲ. ಅಂದಮ್ಯಾಲೆ ನಮ್ಮ ಊರು ಯಾವದು ಅಂತ ಹೇಳಲಿ ? ಈ ವೀಣಾ ಒಂದs ನನ್ನ ಸೊತ್ತು. ನನ್ನ ವೀಣಾ ಎಲ್ಲಿ ಇರತsದ ಅಲ್ಲೇ ನನ್ನ ಜಗತ್ತು. ಈ ವೀಣಾನs ನನ್ನ ಜಗತ್ತು. " ಮಾತು ಮುಗಿಸಿ ಎಲ್ಲ ಕಡೆಗೆ ಕಣ್ಣು ಹೊರಳಿಸಿ ಮತ್ತೆ ನಕ್ಕ.

ಶಂಕರಭಟ್ಟರಿಗೆ ರಾಮೂನ ಸರಳತೆ ಸೇರಿತು. ಅವನೊಡನೆ ಇನ್ನೂ ಮಾತನಾಡಬೇಕೆನಿಸಿತು.

" ಎಲ್ಲಿಗೆ ಹೊರಟೀರೀಗ ? "

" ನಾನs ? ಹೊರಟೇನಿ ಹೀಂಗs, ಎಲ್ಲಿಗೆ ಅನ್ನೋದು ನಿಶ್ಚಿತ ಇಲ್ಲದೆ....ವೇಣೂಶಾಸ್ತ್ರಿಗಳು ಅಂತಾ ಪ್ರಸಿದ್ಧ ಕೀರ್ತನಕಾರರು ಆಗಿ ಹೋದ್ರು. ಅವರ ಹೆಸರು ಕೇಳಿರಬಹುದಲ್ಲ ? ಅವರಲ್ಲಿ ಇದ್ದೆ ನಾನು. ಈ ವೀಣಾ ನನಗೆ ಅವರೇ ಕೊಡಿಸಿದ್ರು. ಅವರೇ ನನ್ನ ತಯಾರು ಮಾಡಿದರು. ಅವರು ತೀರಿಕೊಂಡ ಮ್ಯಾಲೆ— ಈಗ ಎರಡು ತಿಂಗಳು— ಹಾಂಗ ಹೀಂಗ ಕಾಲ ಕಳದೆ. ಈಗ ಹೊರಟೇನಿ ಇನ್ನೊಬ್ಬ ಅನ್ನದಾತಾನ್ನ ಹುಡುಕಿಕೋತ. ಈಗ ಹೊರಟಿದ್ದು ಬೆಂಗಳೂರಿಗೆ. ಅಲ್ಲಿ ರಸಿಕ ಜನ ಹೆಚ್ಚು. ನನ್ನ ವಿದ್ಯಾಕ ನಾಲ್ಕು ದುಡ್ಡು ಹುಟ್ಟೀತು ಅಂತ ಆಸೆ. "

ಶಂಕರಭಟ್ಟರು ಕಾಲಿನಿಂದ ತಲೆಯ ವರೆಗೆ ಅವನನ್ನು ನುತ್ತೊಮ್ಮೆ ದಿಟ್ಟಿಸಿದರು. ಅಲ್ಲಲ್ಲಿ ತೂತು ತೂತು ಬಿದ್ದ ದೋತರ, ಅಲ್ಲಿ ಇಲ್ಲಿ ಹೊಲಿಗೆ ಬಿದ್ದ ಶರ್ಟು, ಅವನ ಬಡತನದ ಸೂಚನೆಯನ್ನು ಕೊಟ್ಟವು. ಮತ್ತೆ ಶಂಕರಭಟ್ಟರೇ ಅಂದರು :

" ನಿಮಗ ನಾಟಕಾ-ಗೀಟಕಾ ಕಲಿಸಲಿಕ್ಕೆ ಬರತದೇನು ? "

" ನಾನೂ ನಾಲ್ಕು ವರುಷ ನಾಟಕ ಕಂಪನಿಯೊಳಗಃ ಇದ್ದೆ. ನಿದ್ದೆಗೆಟ್ಟು, ಆ ನೀರು ಈ ನೀರು ಕುಡಿದು, ಪ್ರಕೃತಿ ಕೆಟ್ಟದ್ದಕ್ಕ ನಾಟಕದ ಉಸಾಬರಿ ಬಿಟ್ಟೆ. "

ಶಂಕರಭಟ್ಟರು ಇನ್ನೂ ಹತ್ತಿರ ಬಂದರು.

" ನಾವು ಒಂದು ನಾಟಕಾ ಮಾಡಬೇಕು ಅಂತ ಮಾಡೇವಿ. ನಮ್ಮೂರಿಗೆ ಬರತೀರೇನು ಕಲಿಸಲಿಕ್ಕೆ? ನಿಮ್ಮ ಹೊಟ್ಟೆ-ಬಟ್ಟೆ ನೋಡಿಕೊಂಡು, ಮ್ಯಾಲೆ ನಿಮ್ಮ ಮರ್ಯಾದಿ ಏನದ ಅದನ್ನ ಮುಟ್ಟಿಸತೇವಿ." ಎಂದರವರು.

ರಾಮೂ ವಿಚಾರಮಾಡಿದ. ತಾನಾಗಲೇ ಬೆಂಗಳೂರ ತಿಕೀಟು ತೆಗೆಸಿರುವದಾಗಿ ಹೇಳಿದ. ಬೇಕಾದರೆ, ಕೆಲವು ದಿನ ಬಿಟ್ಟು ಬರುವದಾಗಿ ಆಶ್ವಾಸನ ಕೊಟ್ಟ. ಶಂಕರಭಟ್ಟರು ಕೇಳಲಿಲ್ಲ. ನಾಟಕದ ಬಗ್ಗೆ ತಮ್ಮ ಊರ ಜನರಲ್ಲಿ ಇರುವ ಕಳಕಳಿ, ತಾವು ಮಾಡಿದ ನಿಧಿಸಂಗ್ರಹ, ತಾವು ಈ ಹದಿನೈದು ದಿನಗಳಲ್ಲಿ ಪಟ್ಟ ಪೇಚಾಟ—ಇವೆಲ್ಲವನ್ನು ರಾಮೂನಿಗೆ ವಿವರಿಸಿ ಹೇಳಿದರು. ರಾಮು ಕಡೆಗೆ ಮೂರು-ನಾಲ್ಕು ತಿಂಗಳುಗಳ ಮಟ್ಟಿಗೆ ಶಂಭುಲಿಂಗನ ಬೆಟ್ಟದಲ್ಲಿರಲು ಒಪ್ಪಿಕೊಂಡ. ಶಂಕರಭಟ್ಟರಿಗೆ ಇಲ್ಲದ ಆನಂದವಾಯಿತು.

ಇಬ್ಬರೂ ಶಂಭುಲಿಂಗನ ಬೆಟ್ಟ ಬರುವ ಹಾದೀ ನೋಡಹತ್ತಿದರು.

## ೧೮

ಶ್ರೀಕಂಠಶಾಸ್ತ್ರಿಗಳ ಬಗೆಗೆ ಉಂಟಾದ ಜುಗುಪ್ಸೆಯಿಂದ ಎರಡು-ಮೂರು ದಿನಗಳ ವರೆಗೆ ಸುಭಗೆಯ ಮನಸ್ಸು ತಿಳಿಯಾಗಲಿಲ್ಲ. ಕೆಲಸ-

ಬೊಗಸೆ, ಊಟ-ಉಪಚಾರ, ಅವಳಿಗೆ ರುಚಿಸಲಿಲ್ಲ. ತಂದೆ ಮನೆಯಲ್ಲಿ ಇಲ್ಲದುದರಿಂದ ಮನಸ್ಸಿಗೆ ಬಂದಾಗ ಕೆಲಸ ಮಾಡಿ, ಹೊಟ್ಟೆ ಹಸಿದಾಗ ಅನ್ನ ಕುಚ್ಚಿಕೊಂಡು, ಅಲ್ಲಿಷ್ಟು ಅಡ್ಡ ಆಗಿ, ಇಲ್ಲಿಷ್ಟು ಕುಳಿತು, ಕಾಲ ಕಳೆದಳು. ಮನೆಯ ಹೊರಗೆ ಹೋದರೆ ಮತ್ತೆ ಎಲ್ಲಿ ಶ್ರೀಕಂಠಶಾಸ್ತ್ರಿಗಳ ಕಣ್ಣಿಗೆ ಬೀಳುವೆನೋ ಎಂದು ಮೊದಲನೆಯ ದಿನ ಮನೆಯ ಹೊಸತಿಲವನ್ನೇ ದಾಟಿರಲಿಲ್ಲ. ಅವರು ಊರಲ್ಲಿ ಇಲ್ಲವೆಂಬ ಸುದ್ದಿ ಹತ್ತಿದಾಗ ಮನಸ್ಸಿಗೆ ಸ್ವಲ್ಪ ಹಾಯೆನಿಸಿತು.

ಆದರೂ ಅಂದಿನ ಪ್ರಸಂಗ ಆಕೆಯ ಅಂತರಾಳದ ಮೇಲೆ ಇನ್ನೊಂದು ಪರಿಣಾಮ ಮಾಡಿತು. ಅವಳಿಗೆ ತಿಳಿಯದಂತೆಯೆ ಇತ್ತೀಚೆಗೆ ಅವಳ ಅಂಗಾಂಗವೂ ಪರಿಪಕ್ವವಾದಂತೆ ದೇಹಕ್ಕೆ ಹೊಸ ಬಗೆಯ ಕಾಂತಿ ಬಂದಂತೆ, ಯೌವನವು ಪೂರ್ಣ ಅರಳಿದಂತೆ, ಕಣ್ಣುಗಳಲ್ಲಿ ಹೊಸತಾದ ತೇಜ ಹೊರಸೂಸಹತ್ತಿದಂತೆ, ಗಲ್ಲಗಳಲ್ಲಿ ಗುಲಾಬಿಯ ಕೆಂಪು ವ್ಯೆದಾಳಿದಂತೆ, ಆಕೆಯ ಅಂತರಂಗವೂ ಅರಳಹತ್ತಿತ್ತು. ಅಲ್ಲಿ ಇಂದಿನ ವರೆಗೆ ಸುಳುಹನ್ನೂ ತೋರದ ಅನಿರ್ವಚನೀಯವಾದ ನವೀನ ಭಾವನೆಗಳು ಮೂಡಿ, ದಿನದಿನವೂ ಬೆಳೆಯಹತ್ತಿದವು. ಮುಂಜಾವಿನ ಹೂಬಿಸಿಲಿನಲ್ಲಿ, ಸಂಜೆಯ ದಿಗಂತದ ಹೊಂಬಣ್ಣದಲ್ಲಿ, ಆಗಸದಲ್ಲಿ ಎಲ್ಲಿ ನೋಡಿದಲ್ಲಿ ಸೂರೆಯಾದ ಚಿಕ್ಕೆಗಳ ಕೋಮಲ ತೇಜದಲ್ಲಿ, ಹಕ್ಕಿಗಳ ಗಾನದಲ್ಲಿ, ಹೂವುಗಳ ಚೆಲ್ವಿಕೆಯಲ್ಲಿ—ಎಲ್ಲೆಲ್ಲಿಯೂ ಆಕೆ ಇದೀಗ ಹೊಸತಾದ ಅರ್ಥವನ್ನು ಕಾಣಹತ್ತಿದಳು. ಆಟ-ಪಾಟಗಳಲ್ಲಿ, ಉಡಿಗೆ-ತೊಡಿಗೆಗಳಲ್ಲಿ, ಊಟ-ನಿದ್ದೆಗಳಲ್ಲಿ, ಹರಟೆ-ನಗೆಚಾಟಿಕೆಗಳಲ್ಲಿ, ತೋರುವ ಸುಖ ನಿಜವಾದ ಸುಖವಲ್ಲ; ಆನಂದವಲ್ಲ. ಆ ಸುಖ ಬೇರೆಯೇ ಎಂಬ ಕಲ್ಪನೆ ಸಾವಕಾಶವಾಗಿ ಮೂಡಹತ್ತಿತು. ಇಂದಿನ ವರೆಗೆ ಆಕೆಗೆ ಗಂಡಸೆಂದರೆ ಬರಿಯ ಗಂಡಸು, ತನ್ನಿಂದ ಬೇರೆಯಾದ ಮಾನವನಲ್ಲ ಎನಿಸಿದ್ದಿತು. ಈಗ ಮಾತ್ರ ಗಂಡಸಿನ ರೂಪ ಕಣ್ಣಿಗೆ ಬಿದ್ದಾಗ, ತನ್ನ ಕಣ್ಣುಗಳು ತಾವಾಗಿಯೇ ಅತ್ತ ಓಡುತ್ತಿದ್ದುದೂ, ಆ ರೂಪದ ಬಗೆಗೆ ಹೊಸದೊಂದು ಕುತೂಹಲ ಕೆರಳುತ್ತಿದ್ದುದೂ ಅವಳಿಗೆ ಅರಿವಾಗಹತ್ತಿತು. ಅಂದು ಶ್ರೀಕಂಠಶಾಸ್ತ್ರಿಗಳು ನೀರು ಜಗ್ಗಲು ತನ್ನ ಸನಿಯಕ್ಕೆ ಬಂದಾಗ, ಆ ದಿನ ರಾತ್ರಿ ಯಾರೂ ಇಲ್ಲದಾಗ ತನ್ನ ಮನೆಗೆ ಬಂದು ವಿಶಿಷ್ಟ ರೀತಿಯಿಂದ

ಮಾತಾಡಲು ಹತ್ತಿದಾಗ, ಜುಗುಪ್ಸೆ-ಕೋಪಗಳ ನಡುವೆಯೇ ತನ್ನ ವೈ ಜುವೆಕ್ರಂದುದೂ, ಹಿಂದೆಂದೂ ಅನುಭವಿಸದ ಭಾವನೆಗಳು ತನ್ನಲ್ಲಿ ಮೂಡಿ ಅನಿರ್ವಚನೀಯವಾದ ಅಂತರ್ಯಾತನೆಯನ್ನು ತನಗೆ ಕೊಟ್ಟುದೂ, ಅಡಿಗಡಿಗೆ ಅವಳ ಜ್ಞಾಪಕಕ್ಕೆ ಬರಹತ್ತಿತು. ಅವಳಿಗೆ ಈಗ ಮನೆ, ಮನ, ಅಂತರಂಗ, ಎಲ್ಲವೂ ಹಾಳು ಹಾಳು ಎನಿಸಿ, ತನ್ನ ಜೀವನದಲ್ಲಿ ಯಾವದೋ ಒಂದು ಕೊರತೆಯಿದೆ ಎಂದು ತೋರಹತ್ತಿತು. ಮನೆಯಲ್ಲಿ ಒಬ್ಬಳೇ ಇರಲು ಬೇಸರಿಕೆ ಬಂದು, ತಂದೆ ಯಾವಾಗ ಬಂದಾರೋ ಎಂದು ಆಕೆ ಶಂಕರ ಭಟ್ಟರ ದಾರಿ ನೋಡಹತ್ತಿದಳು. ಎರಡು-ಮೂರು ದಿನಗಳಿಂದ ಗಂಗಾ ಸಾನಿಯು ಸಹ ಉದಾಸೀನಳಾಗಿ ದಿನದ ಬಹುಭಾಗವನ್ನು ಗುಡಿಯಲ್ಲಿಯೇ ಕಳೆಯುಹತ್ತಿದ್ದಳಾದ್ದರಿಂದ, ನೃತ್ಯವೂ ನಿಂತುಹೋಗಿ ಅವಳಿಗೆ ಇನ್ನಷ್ಟು ಬೇಜಾರ ಬಂದಿತು. ರಾತ್ರಿ ಒಬ್ಬಳೇ ಮನೆಯಲ್ಲಿ ಇರಲು ಹೆದರಿಕೆಯಾಗಿ, ಕಳೆದ ಎರಡು ದಿನ ಸಂಗಪ್ಪನಿಗೇ ಮನೆಯಲ್ಲಿ ಮಲಗಲು ಹೇಳಿ, ಆಕೆ ಗಂಗಾಸಾನಿಯ ಮನೆಗೆ ಮಲಗಲು ಹೋಗಹತ್ತಿದಳು.

## ೧೯

ರಾತ್ರಿ ಒಂಬತ್ತರ ಸುಮಾರಿಗೆ ಸುಭಗೆ ಕೆಲಸ ಮುಗಿಸಿಕೊಂಡು, ಹಿತ್ತಲಬಾಗಿಲನ್ನು ಭದ್ರಪಡಿಸಿ, ಗಂಗಾಸಾನಿಯ ಮನೆಗೆ ಹೊರಡುವ ತಯಾರಿಯಲ್ಲಿ ಇದ್ದಳು. ಸಂಗಪ್ಪ ಊಟ ಮುಗಿಸಿಕೊಂಡು ಬರಲು ಮನೆಗೆ ತೆರಳಿದ್ದ.

ತಲೆಬಾಗಿಲು ತಟ್ಟಿದ ಸಪ್ಪಳ ಬಂತು. ಅದರ ಹಿಂದೆಯೇ 'ಸುಭಗಾ!' ಎಂಬ ದನಿಯೂ ಕೇಳಿಸಿತು. ಶಂಕರಭಟ್ಟರ ಧ್ವನಿ ಗೊತ್ತು ಹತ್ತಿ, ಸುಭಗೆ 'ಹೂಂ, ಬಂದೆ; ಅಗಳೀ ತಗೀತೇನಿ ತಡೀ, ಅಪ್ಪಾ' ಎಂದು ಹೊರಗೆ ಧಾವಿಸಿದಳು. ಎಡಗೈಯಲ್ಲಿ ಚಿಮಣಿಯನ್ನು ಹಿಡಿದುಕೊಂಡು, ಬಾಗಿಲು ತೆರೆಯುತ್ತಲೇ, "ಎಷ್ಟು ದಿನಾನೋ ಮಾರಾಯಾ ಹೋಗೋದು ? ಒಬ್ಬಾಕೇಗೇ ಬ್ಯಾಸರ...." ಎಂಬ ಸುಭಗೆಯ ಸಲುಗೆಯ ಮಾತು ಕೊನೆಗಾಣಲಿಲ್ಲ. ತಂದೆಯೊಬ್ಬರೇ ಇರದೆ, ಅವರ ಹಿಂದೆ ಅಪರಿಚಿತರೊಬ್ಬರನ್ನು ಕತ್ತಲೆಯಲ್ಲಿ

ಕಂಡು, ಸುಮ್ಮನಾದಳು. ಹಿಂದೆ ಸರಿದು ಸೀರೆಯನ್ನು ಸಾವರಿಸಿಕೊಂಡಳು. ಒಳಗೆ ಹೋಗಿ, ಕಂದೀಲನ್ನು ಮೂಡಿಸಿ, ಅಡುಗೆಯ ಮನೆಯ ಹೊಸತಿಲ ಮೇಲೆ ತಂದಿಟ್ಟಳು.

ರುಮಾಲವನ್ನು ತೆಗೆಯುತ್ತಲೇ ಶಂಕರಭಟ್ಟರು, "ಒಳಗೆ ಬರ್ರಿ, ರಾಮರಾವ್" ಎಂದರು. ಮರುಕ್ಷಣದಲ್ಲಿ ಒಳಗೆ ಹೋದವರು ಏರುಗಚ್ಚೆ ಹಾಕಿ ಕೈಕಾಲು ಮೋರೆ ತೊಳೆದುಕೊಂಡು ಪಂಜೆಯಿಂದ ಒರೆಸಿಕೊಳ್ಳುತ್ತ ಮತ್ತೆ ಹೊರಗೆ ಬಂದರು. "ದಣದೀರಿ, ಸ್ವಲ್ಪ ಮಂಚದ ಮ್ಯಾಲೆ ಅಡ್ಡಾಗರಿ; ನಾನು ಅಡಿಗೀ ವ್ಯವಸ್ಥಾ ಮಾಡಿ ಬರತೇನಿ." ಎಂದು ಮತ್ತೆ ಅಡಿಗಿಯ ಮನೆಯಲ್ಲಿ ಹೋದರು.

ಅಷ್ಟರಲ್ಲಿ ಸಂಗಪ್ಪ ಕೈಯಲ್ಲಿ ನಾಟಕದ ಮುದುಡಿದ ಪುಸ್ತಕವನ್ನು ಹಿಡಿದುಕೊಂಡು ಅಲ್ಲಿಗೆ ಬಂದ. "ಈಗ ಬಂದ್ರೇನ್ರೀ ಶಂಕರಭಟ್ರ? ಇವ್ಯಾರ್ವೋ ಪೆಟಾರಿಕೀ ತಂಬೂರಿ ಬಂದಾವಲ್ಲ!" ಎನ್ನುತ್ತಲೇ ಮಂಚದ ಮೇಲೆ ಕುಳಿತ ರಾಮೂನನ್ನು ಎವೆಯಿಕ್ಕದೇ ನೋಡುತ್ತ ಬಾಗಿಲ ಹಿಂದೆ ಕುಳಿತುಕೊಂಡನು.

"ಕೂಡು ಸಂಗಪ್ಪ, ಇದಽ ಈಗ ಬಂದೆ. ನಿಮಗ ನಾಟಕಾ ಕಲಸ ಲಿಕ್ಕೆ ಮಾಸ್ತರು ಬಂದಾರ. ಅವರವು ಅವು." ಎಂದು ಶಂಕರಭಟ್ಟರು ಒಳಗಿನಿಂದಲೇ ಉತ್ತರ ಕೊಟ್ಟರು.

"ಭಲಾಪ್ಪಾ, ಇವರು ರಾಮನ ವೇಸಾ ಮಾಡಾಕ ಭಾಳ ಪಾಡ ಅದಾರ ಅಲ್ರೇ?" ಎಂದ ಸಂಗಪ್ಪ ರಾಮೂನನ್ನು ನೋಡುತ್ತ.

ರಾಮೂ ಮುಗಳುನಗೆಯಿಂದ ನಕ್ಕಾ.

"ಅವರ ಹೆಸರೂ ಅದಽ ಐತ್ಯೋ, ಸಂಗಪ್ಪ!" ಎಂದು ಶಂಕರಭಟ್ಟರು ಹೇಳಿದಾಗ, ಸಂಗಪ್ಪ ಅಲ್ಲಿ ಇರಲಿಲ್ಲ. ತಲೆಯ ಮೇಲಿನ ಪಾವಡವನ್ನು ಸುತ್ತಿಕೊಳ್ಳುತ್ತ, ಹೊರಗೆ ಓಡಿಹೋಗಿದ್ದ.

ಶಂಕರಭಟ್ಟರು ಒಳಗೆ ಸಂಧ್ಯಾವಂದನೆ ಮಾಡುತ್ತ ಅಡಿಗೆ ನಡಿಸಿದ್ದರು. ಒಬ್ಬನೇ ಕುಳಿತು ಬೇಸರಿಕೆ ಬಂದಂತಾಗಿ, ರಾಮೂ ವೀಣೆಯನ್ನು ತೆಗೆದುಕೊಂಡು ನುಡಿಸತೊಡಗಿದ. ಐದು ನಿಮಿಷಗಳಲ್ಲಿ ಸಂಗಪ್ಪನ ಬೆನ್ನು ಹತ್ತಿ ಹಿಂಡಿಗೆ ಹಿಂಡೇ ಕೂಡಿತು. ನಡುಮನೆಯೆಲ್ಲ ತುಂಬಿತು. ರಾಮೂ

ವೀಣೆಯನ್ನು ಬಾರಿಸುತಿದ್ದುದನ್ನು ಕೇಳುತ್ತ ಎಲ್ಲರೂ ಸದ್ದುಮಾಡದೆ ಕುಳಿತುಕೊಂಡರು. ಸಂಗೀತಸುನಾದದ ಲಹರಿಯಿಂದ ಕೆಲವು ಜನ ತಲೆ ದೂಗಹತ್ತಿತು. ಬೀಡಿ ಸೇದುವದು ಮುಗಿಯುವ ವರೆಗೆ ಸುಮ್ಮನೆ ಕುಳಿತ ಮಾಸ್ತರರು, ಮಂಚದ ಕೆಳಗಿನ ತಬಲ-ಢಕ್ಕೆಗಳನ್ನು ತೆಗೆದು ಕೊಂಡು, ಸುತ್ತಿಗೆಯಿಂದ ತಬಲವನ್ನು ಸರಿಮಾಡುವ ಶಾಸ್ತ್ರಮಾಡಿ, ವೀಣೆಯ ಸಂಗೀತಕ್ಕೆ ರಂಗು ತರುವ ಸದುದ್ದೇಶದಿಂದ, ತಲೆ ಕೊಡಹಿ ಯದ್ವಾ-ತದ್ವಾ ಬಾರಿಸಹತ್ತಿದರು. ತಾಳ ತಪ್ಪಹತ್ತಿದುದರಿಂದ ರಾಮೂ ವೀಣೆಯನ್ನು ಬಾರಿಸುತ್ತಿದ್ದಂತೆಯೇ ಮುಗುಳುನಗೆಯಿಂದ ಅವರಿಗೆ ಸುಮ್ಮ ನಿರಲು ಸೂಚಿಸಿದ.

ರಾಮೂನು ಕುಳಿತ ಭಂಗಿಯನ್ನು, ವೀಣೆಯನ್ನು ಹಿಡಿದ ರೀವಿ ಯನ್ನು, ಎಡಗೈಯ ಬೆರಳುಗಳು ಮಣಿ-ಮಣಿದು ಮೇಲೆ ಕೆಳಗೆ ಕುಣಿದಾ ಡುವ ರೀತಿಯನ್ನು, ಬೆರಳಿನ ಪ್ರತಿಯೊಂದು ಚಲನವಲನವೂ ತಂತಿಗಳ ನಾದದಲ್ಲಿ ತಾರತಮ್ಯ ವೈವಿಧ್ಯಗಳನ್ನು ಹುಟ್ಟಿಸುತ್ತಿರುವ ಗುಟ್ಟನ್ನು, ರಾಮೂ ನಿಗೆ ಕಾಣದಂತೆ ಅಡಿಗೆಯ ಮನೆಯ ಬಾಗಿಲಿಗೆ ಆತುಕೊಂಡು ಸೂಕ್ಷ್ಮವಾಗಿ ನೋಡುತ್ತಿದ್ದ ಸುಭಗೆಗೆ ಆತನು ಮಾಸ್ತರರಿಗೆ ಸುಮ್ಮನಿರಲು ಸನ್ನೆ ಮಾಡಿ ದಾಗಿನ ನಗೆಯ ಮುಖ ಕಂಡಿತು. ಅವನ ಮುಖವನ್ನು ಆಕೆ ಆಗಲೇ ಎರಡು-ಮೂರು ಸಲ ನೋಡಿದ್ದಳಾದರೂ, ಮುಖದ ಮೇಲಿನ ನಗೆಯನ್ನು ಕಂಡುದುದು ಇದು ಮೊದಲ ಸಲ. ನಕ್ಕಾಗ ಒಡಮೂಡಿದ ಗಲ್ಲಗಳ ಗುಣಿಗಳನ್ನು ನೋಡಿ, ಸುಭಗೆಯ ಮೊಗದ ಮೇಲೆ ಮಿದುವುನಗೆ ಮೂಡಿತು: ಗಲ್ಲ ಕೆಂಪೇರಿತು. ತನ್ನಲ್ಲಿ ಒಡಮೂಡಿದ ವಿಕಾರ ಜನಕ್ಕೆ ತಿಳಿದೀತೆಂದು ಆಕೆ ಹಿಂದೆ ಸರಿದಳು.

ರಾಮೂನಿಗೆ ಕೈ-ಕಾಲು ತೊಳೆಯಲು ಹೇಳಿ, ಶಂಕರಭಟ್ಟರು ತಂಬಿಗೆ ತುಂಬಿ ನೀರು ತಂದಿಟ್ಟರು. ರಾಮೂ ಊಟಕ್ಕೆ ಎದ್ದಾಗ; ನಡುಮನೆಯಲ್ಲಿಯ ಜನಜಂಗುಳಿ ಗುಜುಗುಜು ನಡೆಸಿದ್ದಿತು. ಶೀನೂನನ್ನು ಬೆನ್ನು ಚಪ್ಪರಿಸಿ ಹೊರಗೆ ಕಳುಹಿದರು. ಅವನ ಹಿಂದೆಯೇ ಮಾಸ್ತರರೂ ಹೊರಗೆ ಹೋದರು.

ಶಂಕರಭಟ್ಟರೇ ಅಡಿಗೆ ಮಾಡಿದುದು, ಕೈಕಾಲು ತೊಳೆಯಲು ನೀರು ತಂದಿಟ್ಟುದುದು, ಊಟಕ್ಕೆ ಕುಳಿತಾಗ ಅವರೇ ಬಡಿಸುತ್ತ ಊಟ ಮಾಡಿ

ದುದು ರಾಮೂನಲ್ಲಿ ಮೊದ-ಮೊದಲು ಆಶ್ಚರ್ಯವನ್ನುಂಟು ಮಾಡಿದವು—ಮನೆಯಲ್ಲಿ ಹೆಣ್ಣುಮಗಳು ಇರುತ್ತಲೇ ಇವರೇಕೆ ಹೀಗೆ ಮಾಡುತ್ತಿರಬಹುದು ಎಂದು. ಸುಭಗೆ ಹಾಲು-ಮೊಸರು ಬಡಿಸಲು ಬಂದಾಗ ಅವನ ದೃಷ್ಟಿ ಆಕೆಯ ಹಾಳು ಹಣೆಯ ಕಡೆಗೆ ಬಿದ್ದಿತು. ಒಂದು ಕ್ಷಣ ಚಕಿತನಾದ. ಮತ್ತೊಮ್ಮೆ ನೋಡಿದ. ಆ ಯೌವನ, ಆ ರೂಪ, ನಿರರ್ಥಕವಾಗಿದೆಯಲ್ಲ ಎಂದು ಅಂದುಕೊಂಡ.

ಊಟ ಮುಗಿಯುವ ಹೊತ್ತಿಗೆ ಮಾಸ್ತರರು ಎಲ್ಲಿಂದಲೋ ಕೈ-ಗ್ಯಾಸನ್ನು ಸಂಪಾದಿಸಿಕೊಂಡು ಬಂದಿದ್ದರು. ಸ್ವಲ್ಪ ವೇಳೆಯಲ್ಲಿ ಗವಳಿಗರ ಎಲ್ಲವ್ವ ಕೆನೆಮೊಸರಿನ ದೊಡ್ಡದೊಂದು ಗಡಿಗೆಯನ್ನು ತಂದಳು. ಅಷ್ಟರಲ್ಲಿ ಶೀನೂನೂ ಕಿಟ್ಲಿಯ ತುಂಬ ಚಹವನ್ನು ಮಾಡಿಕೊಂಡು ತಂದ. ರಾಮೂ ಊಟ ಮುಗಿಸಿಕೊಂಡು ಹೊರಗೆ ಬಂದಾಗ ಇದೆಲ್ಲ ಸಂಭ್ರಮ ನೋಡಿ ಆಶ್ಚರ್ಯಪಟ್ಟ. ಆ ಕಡೆ ಮೊಸರು-ಅವಲಕ್ಕಿಯ ತಯಾರಿ ನಡೆದಿತ್ತು. ಈ ಕಡೆ ಕಿಟ್ಲಿ ಕಪ್ಪು-ಬಸಿಗಳು ದಾರಿ ನೋಡುತ್ತಿದ್ದವು. ನಡುಮನೆಯ ನಡುವೆ ಎಲೆ-ಅಡಿಕೆ-ಬೀಡಿ-ಕಡ್ಡಿಪೆಟ್ಟಿಗೆಗಳೂ ಬಿದ್ದಿದ್ದವು.

ಅಂದಿನ ಕಾರ್ಯಕ್ರಮ ರಾತ್ರಿ ಒಂದು ಗಂಟೆಯ ವರೆಗೆ ಸಾಗಿತು. ರಾಮೂನ ಪ್ರವಾಸದಿಂದಾದ ಪ್ರಯಾಸದ ಕಡೆಗೆ ಲಕ್ಷ್ಯಗೊಡದೆ, ಜನ ಅವನಿಗೆ ನಾನಾ ಬಗೆಯ ಪ್ರಶ್ನೆಗಳನ್ನು ಕೇಳಿದರು. ಅವನಿಗೆ ಮನಸ್ಸಿಲ್ಲದಿದ್ದರೂ ನಾಟಕದಲ್ಲಿ ಭಾಗ ವಹಿಸಿದ ಜನ ಬಾಯಿಪಾಠ ಮಾಡಿದ ಮಾತುಗಳನ್ನು ಒಪ್ಪಿಸಿದರು. ಅವನಿಂದ ತಮ್ಮ ನಾಟಕದ ಪದಗಳನ್ನು ಹಾಡಿಸಿದರು. ರಾಮೂನೇ ರಾಮನ ಪಾರ್ಟನ್ನು ವಹಿಸಬೇಕೆಂದು ಎಲ್ಲರೂ ದುಂಬಾಲು ಬಿದ್ದರು. ಮೊದಲು ಕೈಕೇಯಿಯ ಪಾತ್ರವನ್ನು ವಹಿಸಿ ಆಮೇಲೆ ರಾಮನ ಪಾತ್ರವನ್ನು ಹಟ ತೊಟ್ಟು ಸಂಪಾದಿಸಿದ್ದ ಮಾಸ್ತರರು ತಾವು ತಿರುಗಿ ಕೈಕೇಯಿಯ ಪಾತ್ರ ತೆಗೆದುಕೊಂಡು ರಾಮೂನಿಗೆ ರಾಮನ ಪಾತ್ರ ಬಿಟ್ಟುಕೊಡುವ ಸ್ವಾರ್ಥತ್ಯಾಗಮನೋವೃತ್ತಿಯನ್ನು ತೋರಿದರು.

ಶಂಕರಭಟ್ಟರ ಊಟವಾದ ಮೇಲೆ ಸುಭಗೆ ಬಹಳ ಹೊತ್ತು ಕೂಡಲಿಲ್ಲ. ಅಡಿಗೆಯ ಮನೆಯಲ್ಲಿ ಹಾಸಿಗೆ ಹಾಸಿ ಮಲಗಿಬಿಟ್ಟಳು. ಈಗ ಆಕೆಯ ಮನಸ್ಸಿನಲ್ಲಿಯ ಕೋಲಾಹಲ ಇಮ್ಮಡಿಸಿದ್ದಿತು. ಬೇಗ ನಿದ್ದೆ ಹತ್ತಲಿಲ್ಲ.

ಹಿಂದೆ ಎಂದೋ ಕಂಡ ಅಸ್ಪಷ್ಟವಾದ ಕನಸೋ ಏನೋ ಎನ್ನುವಂತೆ ಇಂದು ತನ್ನ ಮದುವೆಯ ನೆನಹು ಒಳಗಣ್ಣ ಮುಂದೆ ಬಂದಿತು. ಆ ಜನ, ಆ ಓಲಗ-ಬಜಂತ್ರಿ, ಆ ಸಡಗರ, ತನಗೆ ತಿಳಿಯದ ಯಾವದೊ ಭಾಷೆಯಲ್ಲಿಯ ಆ ಮಂತ್ರ, ತನ್ನ ಕಡೆಯಿಂದ ಆಗಾಗ ತನಗೆ ತಿಳಿಯದ ಭಾಷೆಯಲ್ಲಿ ಏನನ್ನೋ ಅನ್ನಿಸಿಕೊಳ್ಳುತ್ತಿದ್ದ ಆ ಪದ್ಧತಿ, ತನ್ನ ಗಂಡನೆಂದು ತನಗೆ ಅಪರಿಚಿತನಾದ ಒಬ್ಬ ವ್ಯಕ್ತಿಯ ಬಳಿ ತನ್ನನ್ನು ಕೂಡಿಸಿದ್ದುದು, ಮಂತ್ರ ಘೋಷಣೆ ಮಾಡುತ್ತಲಿದ್ದ ಬ್ರಾಹ್ಮಣರ ಆಜ್ಞೆಯ ಮೇರೆಗೆ ಆ ವ್ಯಕ್ತಿ ಯಾಕೋ ಏನೋ ಆಗಾಗ ತನ್ನ ಕೈ ಹಿಡಿಯುತ್ತಿದ್ದುದು............ಇನ್ನೂ ಏನೇನೋ ಹಿಂದುಮುಂದೆಯಾದರೂ ಒಂದೊಂದಾಗಿ ಅವಳ ಸ್ಮೃತಿಪಟಲದ ಮೇಲೆ ಮೂಡಿಹೋದವು. ಈ ನೆನಹಿನಲ್ಲಿರುವಾಗಲೇ ಸುಭಗೆಗೆ ಜೊಂಪು ಬರಹತ್ತಿತು. ಜೊಂಪು ಬರುವ ಮುನ್ನ, ಸುಭಗೆ ಅಂದು ತನ್ನ ಕೈ ಹಿಡಿಯುವ ಶಾಸ್ತ್ರ ಮಾಡಿದ ಆ ವ್ಯಕ್ತಿಯ ರೂಪದೊಡನೆ ಇಂದು ತಮ್ಮ ಮನೆಗೆ ಅತಿಥಿಯಾಗಿ ಆಗಮಿಸಿದ ಈ ವ್ಯಕ್ತಿಯ ರೂಪವನ್ನು ತುಲನೆ ಮಾಡಿ ನೋಡಿದಳು. ಅರ್ಧ ನಿದ್ರಾವಸ್ಥೆಯಲ್ಲಿ ಇದ್ದಾಗ 'ಈ ವ್ಯಕ್ತಿಯ ಮುಖ ಚಂದ; ಮುಖಕ್ಕಿಂತ ವೀಣೆಯ ವಾದನ ಚಂದ; ಅದಕ್ಕಿಂತಲೂ ಅವರ ನಗೆ ಚಂದ.' ಎಂದು ಅಂದುಕೊಂಡಳು.

## ೨೦

"ಗಂಗಾಸಾನಿ, ಏನು ಮಾಡತೀಯೇ?" ಎಂದು ರಾಧಕ್ಕ ಗಂಗಾಸಾನಿಯ ಮನೆಗೆ ಬಂದಾಗ, ಗಂಗಾಸಾನಿ ಬಾವಿಗೆ ಒಗೆಯಲು ಹೋಗುವ ತಯಾರಿಯಲ್ಲಿದ್ದಳು. ಆಕೆ 'ಬರ್ರಿ ರಾಧಕ್ಕ, ಅನಾಯಾಸ ನೀವು ಬಂದ್ರಿ. ನಾನು ಈಗ ನಿಮ್ಮ ಮನೀಗೆ ಬರೋಕಿ ಇದ್ದೆ, ಏನಾರು ಬೇಕಾಗಿತ್ತೇನು?"

"ಜ್ವಾಳಾ ತೀರ್‍ಯಾವವ್ವ. ಭಕ್ಕರಿಗೆ ಹಿಟ್ಟು ಇಲ್ಲ." ಎಂದರು ರಾಧಕ್ಕ. ಹೀಗೆನ್ನುವಾಗ ಅವರು ಏನೂ ಸಂಕೋಚಪಟ್ಟುಕೊಳ್ಳಲಿಲ್ಲ. ಅವರಿಗೆ ಗಂಗಾಸಾನಿಯಿಂದ ಸಾಮಾನು ಪಡೆದುಕೊಳ್ಳುವದು ರೂಢಿಯಾಗಿ ಹೋಗಿತ್ತು.

"ಅವರು ಎಂದ ಬರತಾರ, ರಾಧಕ್ಕ?"

"ಏನೋ ನಮ್ಮವ್ವ. ನನಗೇನು ಹೇಳಿಕೇಳಿ ಹೋಗತಾರs? ಅದ್ಯಾಕೋ ಇವತ್ತ ದುರುದುರು ಉರಕೋತಾ ಮಾರೀ ಗಂಟುಹಾಕಿಕೊಡs ಹೊರಟರು. ನನಗ ಕೇಳೋ ಧೈರ್ಯಾನs ಆಗಲಿಲ್ಲ ನಮ್ಮವ್ವ. ಮನೀ ಎಲ್ಲಾ ಬರೇದು ಆಗಿಹೋಗೇದ. ಎಂಟಾನೆಂಟು ದಿನ ಎಲ್ಲ್ಯೋ ಹೋಗಿ ಕೂತು ಬಿಟ್ಟಾರ. ಒಂದು ಉಪ್ಪಿನ ಹರಳು ಬೇಕಾದರ ನಿನ್ನ ಮನೀಗೆ ಬರಬೇಕು; ಒಂದು ಖಡ್ಡಿ ಬೇಕಾದರ, ನಿನಗs ತ್ರಾಸು ಕೊಡಬೇಕು. ಜೀವ ಸಾಕಾಗಿ ಹೋಗೇದ ಮಹಾರಾಯಳs!"

"ಒಯ್ಯಿರಿ ರಾಧಕ್ಕ; ನಿಮಗ ಏನು ಬೇಕಾಗೇದ ಅದನ್ನ ಒಯ್ಯಿರಿ. ಇವತ್ತ ನಿಮಗೊಂದು ತ್ರಾಸ ಕೊಡಬೇಕಾಗೇದ. ದೇವರಿಗೆ ಅಭಿಷೇಕಾ ಮಾಡಸೋದದ. ಹೆಜ್ಜಿನಮುಸ್ಕಾರಾ ಹಾಕತೇನಿ ಅಂತ ಬೇಡಿಕೊಂಡೇನಿ. ಸುಮ್ಮನೇ ಮುಂದಕ ಯಾಕ ಹಾಕಬೇಕು ದೇವರ ಹರಕೀನ? ಲಗೂನs ಮೈತೊಳಕೊಂಡು ಅಡಿಗಿಗೆ ಇಟ್ಟುಬಿಡಿರಿ. ನಾನು ಸಾಮಾನು ಕಳಿಸಿ ಕೊಡತೇನಿ. ಕರಿಗಡಬು ಮಾಡಿಬಿಡ್ರಿ; ಅಂದ್ರ ಲಗೂನs ಆಗತsದ. ಅನಾಯಾಸ ಶಂಕರಭಟ್ರೂ ಬಂದಾರ. ಅವರಿಗೆ ಬ್ರಾಹ್ಮಣರಿಗೆ ಹೇಳಿ ಬಿಡ್ರಿ. ಅವರ ಮನೀಗೆ ಯಾರೋ ನಾಟಕಾ ಕಲಿಸೋರು ಬಂದಾರಂತ; ಅವರಿಗೂ ಊಟಕ್ಕ ಹೇಳಿರಿ." ಎಂದು ಜೋಳವನ್ನು ಕೊಟ್ಟು ಗಂಗಾಸಾನಿ ರಾಧಕ್ಕನನ್ನು ಮನೆಗೆ ಕಳಿಸಿದಳು. ಹೊರಗೆ ಹೋದವರನ್ನು ಕೂಗಿ ನಿಲ್ಲಿಸಿ, "ಇಲ್ಲಿ ನೋಡ್ರಿ ರಾಧಕ್ಕ, ಸುಭಗಾಗೂ ಅಡಿಗೀ ಮಾಡಿಕೋಬ್ಯಾಡಾ ಅಂತ ಹೇಳ್ರಿ. ಎಲ್ಲಾರದೂ ಊಟ ಆದ ಮ್ಯಾಲೆ, ಬಡಿಸಿ ಇಟ್ಟು ಬರವಂತ್ರಿ ಅಂತ" ಎಂದು ಹೇಳಿದಳು.

ಗಂಗಾಸಾನಿ ಮೈತೊಳೆದು ಶಂಭುಲಿಂಗನ ಬಾವಿಯನ್ನು ಬಿಟ್ಟಾಗ, ಮಟಮಟ ಮಧ್ಯಾಹ್ನವಾಗಿತ್ತು. ಆಕೆ ತಪತಪ ತೊಯಿದ ಸೀರೆಯನ್ನು ಉಟ್ಟಿದ್ದಳು; ಸೆರಗನ್ನು ಬಿಗಿಯಾಗಿ ಕಟ್ಟಿಕೊಂಡಿದ್ದಳು; ನುರಿಯಾಗಿ ಒರೆಸಿ ಕೊಂಡು ಕೂದಲುಗಳನ್ನು ಹಾಗೆಯೇ ಹಿಂದೆ ಮಾಡಿಕೊಂಡಿದ್ದಳು; ಹಣೆಯ ತುಂಬ ಕುಂಕುಮ ಹಚ್ಚಿಕೊಂಡಿದ್ದಳು. ತೋಪಿನಲ್ಲಿಯ ಮೂರ್ತಿಗೆ ಹಣ್ಣು-ಕಾಯಿ ಮಾಡಿಸಿ, ಅಲ್ಲಿಂದಲೇ ಹೆಜ್ಜೆ-ನಮುಸ್ಕಾರ ಸುರುವು ಮಾಡಿದಳು. ಕೈಯಲ್ಲಿ ಮೊಳ ಉದ್ದ ದಂಟು ಹಿಡಿದು, ಬೆಟ್ಟದ ಕಡೆಗೆ ಮೋರೆ ಮಾಡಿ,

ದಾರಿಗುಂಟ ಸಾವಕಾಶ ಸಾಷ್ಟಾಂಗನಮಸ್ಕಾರ ಹಾಕಿ, ಬಕ್ಕಬರಲೆ ಮಲಗಿ ಕೊಂಡೇ ಕೈಯನ್ನು ಮುಂದೆ ಚಾಚಿ ದಂಟಿನ ತುದಿ ನಿಲುಕುವಲ್ಲಿ ಅದ ರಿಂದಲೇ ಗೆರೆಕೊರೆಯುತ್ತಿದ್ದಳು. ಎದ್ದು ದಂಟಿನ ಗೆರೆ ಮೂಡಿದಲ್ಲಿಯ ವರೆಗೆ ನಡೆದು, ಗೆರೆಯಲ್ಲಿ ಕಾಲ್ಬೆರಳುಗಳನ್ನಿಟ್ಟು ಮತ್ತೆ ಅದೇ ಕ್ರಮವನ್ನು ಮುಂದುವರಿಸುತ್ತಿದ್ದಳು. ಅವಳ ಒಗೆದ ಬಟ್ಟೆಗಳನ್ನು ಹೊದ್ದುಕೊಂಡು ಹಿಂಬಾಲಿಸಿದ ಮುಸುರೆ ತಿಕ್ಕುವಾಕೆ ಆಗಾಗ ಆಕೆಯ ಕೈಯಲ್ಲಿಯ ದಂಟನ್ನು ಬದಲಿಸುತ್ತಿದ್ದಳು.

ಈ ರೀತಿ ಸಾಗಿದ ಗಂಗಾಸಾನಿಗೆ ಬೆಟ್ಟದ ಮೆಟ್ಟಲುಗಳನ್ನು ಮುಟ್ಟಲು ಒಂದು ತಾಸು ಹಿಡಿಯಿತು. ಸೂರ್ಯನ ಪ್ರಖರತೆ ನೆತ್ತಿ ಸಿಡಿಯುವಷ್ಟು ಇತ್ತು. ಅವರ ಮೈಮೇಲಿನ ಸೀರೆ ಪೂರ್ಣ ಒಣಗಿ, ಬೆವರಿನಿಂದ ಮತ್ತೆ ಹಸಿಯಾಗಹತ್ತಿದ್ದಿತು. ಬೆವರು ತುಂಬಿದ ಮುಖ ಮ್ಲಾನವಾಗಿದ್ದರೂ, ಅದರಲ್ಲಿ ಬೇಸರಿಕೆಯ ಲಕ್ಷಣವಿರಲಿಲ್ಲ. ದೇವಚಿಂತನೆಯಲ್ಲಿಯೇ ' ಹರಹರ ಮಹಾದೇವ ' ಎಂಬ ಶಬ್ದೋಚ್ಚಾರ ಮಾಡುತ್ತ ಹೊರಟ ಆಕೆಯ ದಾರಿ ಯನ್ನು ಇಬ್ಬರು ಗೊರವರು ನೋಡುತ್ತಿದ್ದರು. ನಿಃಶಕ್ತಳಾಗಿ ಮಲಗಿದ ವಳಿಗೆ ಮೇಲೆ ಏಳಲು ಬಾರದಾದೊಡನೆ, ಆಕೆಯ ಎಡಬಲದಲ್ಲಿ ನಿಂತು ತೋಳು ಹಿಡಿದು ಮೇಲೆ ಎತ್ತುತ್ತ ಆಕೆಯೊಡನೆ ಸಾಗಹತ್ತಿದರು. ಅಖಂಡ ವಾಗಿ ಹೀಗೆ ನಮಸ್ಕಾರ ಹಾಕುತ್ತಲೇ ಶಂಭುಲಿಂಗನ ಗುಡಿಯ ಸುತ್ತಲೂ ಐದು ಬಾರಿ ಪ್ರದಕ್ಷಿಣೆಯಾದ ಮೇಲೆ, ಆಕೆ ಗುಡಿಯ ಮುಂದೆ ನಿಂತು ಕೊಂಡಳು. ರಾಧಕ್ಕ ದೀಪಮಾಲೆಯ ಕಟ್ಟೆಯ ಮೇಲೆ ನಿಂತು ಅವಳ ತಲೆಯ ಮೇಲೆ ಒಂದು ಕೊಡ ತಣ್ಣೀರು ಸುರುವಿದರು; ಹಚ್ಚಿಕೊಳ್ಳಲು ಅರಿಸಿಣ-ಕುಂಕುಮ ಕೊಟ್ಟರು. ಉಟ್ಟುಕೊಳ್ಳಲು ಜರದ ಸೀರೆ ಸಿದ್ಧವಿತ್ತು. ಹೊಸ ಸೀರೆಯನ್ನು ಉಟ್ಟುಕೊಂಡ ಮೇಲೆ, ಆಕೆ ಹೆಜ್ಜೆ-ನಮಸ್ಕಾರವನ್ನು ಹಾಕಿದ ಸೀರೆಯನ್ನು ಮಾದರಿಗೆ ಮುಟ್ಟಿಸಿದಳು; ಸುತ್ತಲು ನೆರೆದ ಗೊರವ ರಿಗೆ ದಕ್ಷಿಣೆ ಕೊಟ್ಟು ' ಉಫೀ ' ಎನಿಸಿದಳು.

ಅಭಿಷೇಕ-ನೈವೇದ್ಯ ಮುಗಿದು, ಬ್ರಾಹ್ಮಣರು ರಾಧಕ್ಕನವರ ಮನೆ ಯಲ್ಲಿ ಭೋಜನಕ್ಕೆ ಕುಳಿತೊಡನೆ, ಡೋಣಿಗೆ ನೀಡಿಸಿ, ಗಂಗಾಸಾನಿ ಶಂಭು ಲಿಂಗನ ಮೂರ್ತಿಯ ಮುಂದೆ ಕುಳಿತುಕೊಂಡಳು. ಎರಡೇ ನಿಮಿಷಗಳಲ್ಲಿ

ಆಕೆಯ ಕಣ್ಣು ತೊಯ್ದವು. 'ದೇವ, ನನ್ನ ಯಜಮಾನರ ತಪ್ಪನ್ನು ಕ್ಷಮಿಸು.' ಎಂದು ಆಕೆಯ ಬಾಯಿಯಿಂದ ಶಬ್ದ ಹೊರಟಾಗ ದುಃಖವುಕ್ಕಿ ತುಟಿ ನಡುಗಿದವು.

ಎಂಟಾನೆಂಟು ದಿನ ಬೆಂದು ಬಳಲಿದ ಗಂಗಾಸಾನಿಯ ಮನ ಇಂದು ಸ್ವಲ್ಪ ಹಗುರಾಯಿತು.

## ೨೧

ನಾಲ್ಕು ದಿನ ರಾಮೂನ ವಸತಿ ಶಂಕರಭಟ್ಟರಲ್ಲಿಯೇ ಆಯಿತು. ಅಷ್ಟರಲ್ಲಿ ಊರ ಪ್ರಮುಖರೆಲ್ಲ ದೇವಸ್ಥಾನದ ಆಡಳತೆಗಾರರಿಗೆ ಬಿನ್ನವಿಸಿ ಕೊಂಡು ಶಂಭುಲಿಂಗನ ಪವಳಿಯಲ್ಲಿಯ ಧರ್ಮಸಾಲೆಯೊಳಗಿನ ಕೋಣೆ ಯೊಂದರ ಕೀಲಿಯ ಕೈಯನ್ನು ರಾಮೂನಿಗೆ ಕೊಡಿಸಿದರು. ಕಾಲ್ ಪಿಯಾನೋವನ್ನು ಕೊಂಡು ಉಳಿದ ಹಣದಲ್ಲಿಯ ಐವತ್ತು ರೂಪಾಯಿ ಗಳನ್ನು ಅವನಿಗೆ ಖರ್ಚಿಗಾಗಿ ಕೊಟ್ಟುದೂ ಆಯಿತು. ರಾಮೂ ಆ ಕೋಣೆ ಯಲ್ಲಿಯೇ ತನ್ನ ಸಂಸಾರ ಹೂಡಿದನು. ದೇವಸ್ಥಾನದವರೇ ಅವನಿಗೆ ಅಡಿಗೆಗೆ ಬೇಕಾಗುವ ಪಾತ್ರೆಗಳನ್ನು ಕೊಟ್ಟರು. ಶೆಟ್ಟರ ಶಂಕ್ರಪ್ಪ ಎರಡು ಚಿಟ್ಟೆಯಷ್ಟು ಅಕ್ಕಿಯನ್ನೂ ಕೊಟ್ಟನು. ಗವಳಿಗರ ಎಲ್ಲಮ್ಮ ತನ್ನ ಮೊಮ್ಮಗನನ್ನು ನಾಟಕದಲ್ಲಿ ಸೇರಿಸಿಕೊಂಡ ಉಬ್ಬಿನಿಂದ ರಾಮೂನಿಗೆ ದಿನಾಲು ಪಾವುಸೇರು ಹಾಲನ್ನು ನೀರು ಕೂಡಿಸದೆಯೇ ಪುಕ್ಕಟೆಯಾಗಿಯೇ ತಂದುಕೊಡಹತ್ತಿದಳು. ರಾಮೂನ ಸಣ್ಣ ಪುಟ್ಟ ಕೆಲಸಕ್ಕೆ ಸಂಗಪ್ಪ ಸಿದ್ಧನಾಗಿ ನಿಂತ. ಶ್ಯಾನುಭೋಗರ ಶಿವಪ್ಪನವರು ರಾಮೂನ ಅಡಿಗೆಗೆ ಬೇಕಾಗುವ ಮಸಾಲಿಯ ಪುಡಿ, ಮೆಂಥೆಯ ಹಿಟ್ಟು ಮುಂತಾದವುಗಳನ್ನು ಪೂರೈಸಿದರಷ್ಟೇ ಅಲ್ಲ; ತಮ್ಮ ಮನೆಗೆ ಹೊಡೆಯುತಲಿದ್ದ ನೀರಿನ ಗಾಡಿಯೊಳಗಿಂದ ದಿನಾಲು ಎರಡು ಕೊಡ ನೀರನ್ನೂ ಕೊಡಲು ಹತ್ತಿದರು.

ನಾಲ್ಕು ಊರು ತಿರುಗಾಡಿ ಬಂದ ರಾಮೂನಿಗೆ ಆ ಹಳ್ಳಿಯ ಜೀವನ ದಲ್ಲಿ ಸಮರಸನಾಗಲು ಬಹಳ ದಿನ ಹಿಡಿಯಲಿಲ್ಲ. ಹದಿನೈದೇ ದಿನಗಳಲ್ಲಿ

ಜನಪ್ರಿಯನಾದ. ಕಂಡವರ ಬಾಯಿಯಲ್ಲಿ ' ವೀಣೆಯ ರಾಮಣ್ಣ 'ನೇ. ಊರಲ್ಲಿ ಅವನ ವೀಣಾವಾದನವನ್ನು ಕೇಳದವರಿಲ್ಲ ; ಕೇಳಿ ಆನಂದಪಡದವರಿಲ್ಲ. ಕಂಡಕಂಡವರು ಅವನಿಗೆ ನಮಸ್ಕಾರ ಮಾಡದೆ ಮುಂದೆ ಹೋಗುತಿರಲಿಲ್ಲ. ಪರಸ್ಥಳದವನು ಎಂದು ಅವನಿಗೆ ಎಲ್ಲರೂ ಪರಾಮರಿಕೆ ಮಾಡುವವರೇ. ಊರಿಗೆ ಒಂದೇ ಒಂದಾದ ಉಡುಪಿಯ ಹೋಟಲಿನವನು ಸಹ, ರಾಮೂನು ಅಕಸ್ಮಾತ್ತಾಗಿ ಚಹಾಕ್ಕೆ ಬಂದರೆ, ಅವನಿಂದ ರೊಕ್ಕ ತೆಗೆದುಕೊಳ್ಳುತಿರಲಿಲ್ಲ.

ರಾಮೂ ಮುಂಜಾನೆ ಎದ್ದೊಡನೆ ನೆಟ್ಟಗೆ ಶಂಭುಲಿಂಗನ ಬಾವಿಗೆ ಹೋಗಿ ಸ್ನಾನ ಮಾಡಿಕೊಂಡು ಬರುತ್ತಿದ್ದನು. ಬರುವದರಲ್ಲಿಯೇ ಶೀನೂ ಚಹವನ್ನು ತಯಾರಿಸಿರುತ್ತಿದ್ದನು. ಚಹವಾದ ಮೇಲೆ ಹನ್ನೆರಡರ ವರೆಗೆ ಅಡಿಗೆ-ಊಟದ ಕೆಲಸವೇ ಆಗುತ್ತಿತ್ತು. ಮಧ್ಯಾಹ್ನವನ್ನೆಲ್ಲ ಹರಟೆ ಹೊಡೆಯುವದರಲ್ಲಿಯೋ, ಹಾಡು ಹೇಳುವದರಲ್ಲಿಯೋ, ವಾದನಗಳನ್ನು ಬಾರಿಸುವದರಲ್ಲಿಯೋ, ಕಳೆಯುತ್ತಿದ್ದನು. ತಾಸೆರಡು ತಾಸು ನಿದ್ರೆಯೂ ಆಗುತ್ತಿತ್ತು. ರಾತ್ರಿಯ ಬಹುಭಾಗ ನಾಟಕದಲ್ಲಿಯೇ ಗತಿಸುತ್ತಿತ್ತು. ಇದು ರಾಮೂನ ನಿತ್ಯದ ಕಾರ್ಯಕ್ರಮ.

## ೨೨

ಹುಟ್ಟಿದಂದಿನಿಂದ ಪರದೇಶಿಯಾಗಿಯೇ ಬೆಳೆದ ರಾಮೂನಿಗೆ ಹೆಂಗಸರ ಸಂಪರ್ಕ ಹೆಚ್ಚಿಗೆ ಬಂದಿರಲಿಲ್ಲ. ಅವನು ನಾಟಕ ಕಂಪನಿಯಲ್ಲಿ ಇದ್ದಾಗ, ಹನ್ನೆರಡು-ಹದಿಮೂರು ವರುಷದ ಹುಡುಗನಿದ್ದುದರಿಂದ, ಅಲ್ಲಿಯ ನಟಿಯರೊಡನೆ ಇರುವ ಅವನ ಸಲುಗೆ ಬರಿ ಹುಡುಗತನದ ಸಲುಗೆಯಾಗಿದ್ದಿತು. ಮುಂದೆ ಕೀರ್ತನಕಾರರ ಹಿಮ್ಮೇಳದಲ್ಲಿ ಇದ್ದಾಗಂತೂ ಹೆಣ್ಣು-ಮಕ್ಕಳ ಸಂಬಂಧವೇ ಬಂದಿರಲಿಲ್ಲ. ಕೀರ್ತನೆ ನಡೆದಾಗ ಕೀರ್ತನಕಾರರ ಹಾಡುಗಳನ್ನು ತನ್ನ ವೀಣೆಯಲ್ಲಿ ನುಡಿಸುತ್ತಿದ್ದಾಗಿನ ಅದರ ಸುಶ್ರಾವ್ಯ ನಿನಾದ, ಮೇಳದಲ್ಲಿಯ ಉಳಿದ ಎಲ್ಲ ವಾದ್ಯಗಳಲ್ಲಿಯೇ ಎದ್ದು ಕೇಳಿಸಿದೊಡನೆ, ಗುಂಪುಗಟ್ಟಿ ಕೀರ್ತನೆ ಕೇಳಲು ಕುಳಿತ ಹೆಂಗಸರು ತಮ್ಮ ಕಣ್ಣು

ಗಳನ್ನು ಇವನ ಕಡೆಗೆ ಹೊರಳಿಸುತ್ತಿದ್ದುದು ರಾಮೂನಲ್ಲಿ ಕಂಪನ ಹುಟ್ಟಿಸುತ್ತಿತ್ತು.

ಅಂತೆಯೇ ಶಂಭಕರಭಟ್ಟರ ಮನೆಯಲ್ಲಿ ಇರಹತ್ತಿದ ಮೊದಲೆರಡು ದಿನ ರಾಮೂ ಸುಭಗೆಯನ್ನು ಕಣ್ಣೆತ್ತಿ ಹೆಚ್ಚಿಗೆ ನೋಡಿರಲಿಲ್ಲ. ವಯಸ್ಸಿಗೆ ಬಂದ ಯುವಕನಲ್ಲಿ ಹರಯದ ಹೆಂಗಸಿನ ಬಗೆಗೆ ಮೂಡುವ ಸಹಜ ಕುತೂಹಲವೇನೋ ಅವನ ಕಣ್ಗಳನ್ನು, ಸುಭಗೆ ಮುಂದೆ ಸುಳಿದಾಗೆಲ್ಲ, ಆಕೆಯ ಕಡೆಗೆ ಹೊರಳಿಸುತ್ತಿದ್ದಿತಾದರೂ ಸೌಜನ್ಯದಿಂದಲೋ, ನಾಚಿಕೆಯಿಂದಲೋ, ಅಂಜಿಕೆಯಿಂದಲೋ ಆತ ದೃಷ್ಟಿಯನ್ನು ಮರುಕ್ಷಣ ಕೆಳಗೆ ಚೆಲ್ಲುತ್ತಿದ್ದ. ಆದರೂ ಸುಭಗೆಯ ರೂಪ, ಲಾವಣ್ಯ, ವಿನಯ, ಆದರಾತಿಥ್ಯ, ಹಸನ್ಮುಖ ಮುಂತಾದವು ಅವನ ಹೃದಯದಲ್ಲಿ ಆವಳೊಡನೆ ಮಾತಾಡಬೇಕು ಎಂಬ ಲವಲವಿಕೆಯನ್ನು ಹುಟ್ಟಿಸುತ್ತಿದ್ದವು. ಆದರೆ ಪರಕೀಯ ಸ್ತ್ರೀಯೊಡನೆ ಮಾತಾಡುವದೆಂತು ?

ಪರಸ್ಪರರಲ್ಲಿ ಮಾತುಕತೆಯಾಗಲಿಲ್ಲವಾದರೂ ಅಕಸ್ಮಾತ್ತಾಗಿ ಉದ್ದೇಶ ರಹಿತವಾಗಿ ಸಂಭವಿಸಿದ ಒಂದೆರಡು ಘಟನೆಗಳು ಅವರಿಬ್ಬರನ್ನು ಮುಗುಳು ನಗೆಯ ಮುಖಾಂತರ ಮೌನವಾಗಿಯೇ ಮಾತಾಡಲು ಹಚ್ಚಿದ್ದವು; ಪರಸ್ಪರ ಪರಿಚಯವನ್ನು ಬೆಳೆಯಿಸಿದ್ದವು. ಒಮ್ಮೆ ರಾಮೂ ಊಟಕ್ಕೆ ಕುಳಿತಾಗ ಸುಭಗೆ ಅವನ ಎಲೆಯಲ್ಲಿಯ ಬಕ್ಕರಿಯ ಮೇಲೆ ಅದೇ ಕಾಸಿದ ತುಪ್ಪ ಹಾಕುತ್ತಿದ್ದಳು. ರಾಮೂ ತುಪ್ಪ ಬೇಡವೆಂಬುದನ್ನು ಸೂಚಿಸಲು ಕೈ ಮುಂದೆ ಮಾಡಿದನು. ತುಪ್ಪ ಹಸ್ತದ ಮೇಲೆ ಬಿದ್ದಿತು. ಸುಭಗೆಯ ಮುಖದ ಮೇಲಿನ ಗಾಬರಿ ‘ ಕೈ ಸುಟ್ಟಿತೇ ? ’ ಎಂದು ಕೇಳಿತು. ಅವನ ಮುಖದ ಮೇಲಿನ ಮುಗುಳು ನಗೆ ‘ ಇಲ್ಲ ’ ಎಂದಿತು. ಸುಭಗೆಯ ಮುಖವೂ ಆಗ ಅದೇ ನಗೆಯನ್ನೇ ಪ್ರತಿಬಿಂಬಿಸಿತು. ಇನ್ನೊಮ್ಮೆ ರಾಮೂ ಸ್ನಾನಕ್ಕೆಂದು ಹೆಗಲ ಮೇಲೆ ಟಾವೆಲ್ಲನ್ನು ಹಾಕಿಕೊಂಡು ಬಚ್ಚಲಮನೆಗೆ ಹೊರಟಿದ್ದ. ಹಿತ್ತಲಿನಲ್ಲಿ ಬಿಸಿಲೊಳಗೆ ತಂಬಿಗೆ ತಿಕ್ಕಿ ಒಳಗೆ ತರುತ್ತಲಿದ್ದ ಸುಭಗೆಗೆ, ಬಿಸಿಲಿನಿಂದ ಒಳಗೆ ಬಂದುದರ ಮೂಲಕ, ಬಾಗಿಲದಲ್ಲಿಯ ರಾಮೂ ಕಾಣಿಸಲಿಲ್ಲ. ಆಕೆ ಅವನನ್ನು ಹಾಯುವವಳಿದ್ದಳು. ರಾಮೂ ಹಿಂದೆ ಸರಿದ. ಆಕೆಯೂ ಹಿಂದೆ ಸರಿದುಕೊಂಡಳು. ಸುಭಗೆಯ ಮುಖದ ಮೇಲಿನ

ನಾಚಿಕೆ ಕ್ಷಮೆ ಬೇಡಿತು. ಒಬ್ಬರನ್ನೊಬ್ಬರು ನೋಡಿದರು. ನಾಲ್ಕೂ ಕಣ್ಣುಗಳು ನಕ್ಕವು.

ರಾತ್ರಿ ತಾಲೀಮು ನಡೆದಾಗ ಸುಭಗೆ ನಿದ್ರೆ ಬರುವ ವರೆಗೆ ಹೊರಗೆ ನಡೆದ ಮೋಜನ್ನೇ ನೋಡುತ್ತ ಕೂಡುವದು ವಾಡಿಕೆಯಾಗಿತ್ತು. ರಾಮೂ ಹಾಡಹತ್ತಿದಾಗ, ಅವನು ಬಾರಿಸಹತ್ತಿದಾಗ, ಏಕಚಿತ್ತತೆಯಿಂದ ಆಲಿಸುತ್ತಿದ್ದಳು. ಹಾಡು ಕಲಿಸುವ ಸಮಯದಲ್ಲಿ ಅವನು ಕಲಿಯುವವರ ಅಪಸ್ವರದ ಅಣಕ ಮಾಡಿದೊಡನೆ ಎಲ್ಲರಿಗಿಂತ ಹೆಚ್ಚು ಸುಭಗೆ ನಗುತ್ತಿದ್ದಳು. ಅವನು ದಶರಥನಾಗಿ ಮುದುಕನಂತೆ ಮಾತನಾಡುವದು, ಕೈಕೇಯಿಯಾಗಿ ರಕ್ಕಸತನ ಮಾಡುವದು, ಮಂಥರೆಯಾಗಿ ಹೇವವನ್ನು ವ್ಯಕ್ತಮಾಡುವದು, ಭರತನಾಗಿ ಶೋಕರಸವನ್ನು ಉಕ್ಕಿಸುವದು, ಸೀತೆಯಾಗಿ ಪಾತಿವ್ರತ್ಯವೇ ಮೂರ್ತಿಮಂತಾಗಿ ಬಂದಂತೆ 'ಅಭಿನಯಿಸುವದು— ಎಲ್ಲವೂ ಸುಭಗೆಯಲ್ಲಿ ಅಚ್ಚರಿಯನ್ನು ಉಂಟುಮಾಡುತ್ತಿದ್ದಿತು; ಆನಂದವನ್ನು ಉಕ್ಕಿಸುತ್ತಿದ್ದಿತು. ಅವನು ಇವಳನ್ನು ನೋಡುವ ವರೆಗೂ ಇವಳ ನೋಟ ಅವನಲ್ಲಿಯೇ. ಆತನು ತನ್ನನ್ನು ನೋಡಿದನೆಂದು ತಿಳಿದ ಕ್ಷಣ ತಲೆಯನ್ನು ಕೆಳಗೆ ಹಾಕುತ್ತಿದ್ದಳು.

## ೨೩

ಇತ್ತೀಚೆಗೆ ಸುಭಗೆ ಗಂಗಾಸಾನಿಯೊಡನೆ ಎರಡು ದಿನಕ್ಕೊಂದು ಸಲ ತಪ್ಪದೆ ಒಗೆಯಲು ಬಾವಿಗೆ ಹೋಗಹತ್ತಿದಳು. ರಾಮೂ ಸ್ನಾನ ಮುಗಿಸಿಕೊಂಡು ಇವರೀರ್ವರಿಗೆ ಬೆಟ್ಟದ ಅಡಿಯಲ್ಲಿ ಭೆಟ್ಟಿಯಾಗುತ್ತಿದ್ದನು. ಗಂಗಾಸಾನಿಯೊಡನೆ ಹರಟೆಹೊಡೆಯುತ್ತ ಸಾಗಿದ ಸುಭಗೆ ಎದುರಿಗೆ ಬರುವ ರಾಮೂನನ್ನು ನೋಡಿದೊಡನೆ ಹರಟೆಯನ್ನು ತಡೆಯುತ್ತಿದ್ದಳು. ಗಂಗಾಸಾನಿಯ ಜೊತೆಗೇ ಹೆಜ್ಜೆಹಾಕುತ್ತಿದ್ದವಳು, ಸ್ವಲ್ಪ ಹಿಂದೆ ಉಳಿದು, ಬದಿಯಲ್ಲಿ ಹಾಯ್ದು ಹೋದ ರಾಮೂನನ್ನು ತಿರುಗಿ ನೋಡುತ್ತಿದ್ದಳು. ಅವನೂ ಹಿಂದೆ ತಿರುಗಿನೋಡಿದಾಗ ಇಬ್ಬರ ದೃಷ್ಟಿಗಳೂ ಕೂಡಿ ಸುಭಗೆಯ ಮೈ ಜುಮ್ಮೆನ್ನುತ್ತಿತ್ತು.

ಆ ದಿನ ರಾಮೂ ಬಾವಿಗೆ ತಡವಾಗಿಯೇ ಹೋದ. ಅವನು ಹೋಗುವ ಹೊತ್ತಿಗೆ ಗಂಗಾಸಾನಿ-ಸುಭಗೆಯರ ಒಗೆಯುವ ಕೆಲಸ ಮುಗಿದಿತ್ತು.

ಬಾವಿಯ ನಾಲ್ಕೂ ನಿಟ್ಟಿಗೆ ಮೆಟ್ಟಿಲುಗಳಿದ್ದವಾದ್ದರಿಂದ, ಗಂಗಾಸಾನಿ ಹಲ್ಲು ತಿಕ್ಕುತ್ತ ಕುಳಿತ ಬದಿಯನ್ನು ಬಿಟ್ಟು, ರಾಮೂ ಬೇರೊಂದು ಕಡೆಗೆ ಹೋದ.

ಸುಭಗೆ ದೂರದಲ್ಲಿ ಮಾವಿನ ಟೊಂಗೆಗಳಿಗೆ ತನ್ನ ಸೀರೆಯನ್ನು ಕಟ್ಟಿ ಎಳೆಬಿಸಿಲಿಗೆ ಅದನ್ನು ಒಣಗಿಸುತ್ತ ನಿಂತಿದ್ದಳು. ರಾಮೂ ಬಾವಿಯಲ್ಲಿ ಇಳಿಯುವವನಿದ್ದ. ಅಷ್ಟರಲ್ಲಿ ಸುಭಗೆ ಚಿಟ್ಟನೆ ಚೀರಿದ ದನಿ ಕೇಳಿತು. ರಾಮೂ ಒಮ್ಮೆಲೆ ಆಕೆಯ ಕಡೆಗೆ ಗಾಬರಿಯಿಂದ ಓಡಿದ.

" ಯಾಕೋ ಚೀರಿದಿರಲ್ಲ ? " ಎಂದ ರಾಮೂ.

ಸುಭಗೆಗೆ ಮಿತಿಮೀರಿ ನಾಚಿಕೆ. ಮರುಕ್ಷಣದಲ್ಲಿಯೇ ತಡೆಯಲಾರದ ನಗೆ ಉಕ್ಕಿ ಬಂದು ಆಕೆಯ ಮುಖವನ್ನೂ ಕಣ್ಗಳನ್ನೂ ಅರಳಿಸಿತು. ಬಾಯಿಯನ್ನು ಬಿರಿಯಿಸಿತು. ಮುಖ ಅರಳಿದ ಗುಲಾಬಿಯಾಯ್ತು. ಬಣ್ಣ ಮುಂಜಾವಿನ ಬಿಸಿಲಿನ ಬಣ್ಣದೊಡನೆ ಒಂದಾಯ್ತು. ತಿಕ್ಕಿ ತೊಳೆದಿದ್ದುದರಿಂದ ಅರ್ಧ, ಚಳಿಯಿಂದ ಅರ್ಧ, ಕೆನ್ನೆಗಳು ಕೆಂಪೇರಿದ್ದವು. ಹಲ್ಲುಗಳು ಬೆಳ್ಳಗೆ ಬೆಳಗಿದವು. ಮುಂಗೂದಲುಗಳೆರಡು ಉಂಗರವಾಗಿ ಹಣೆಯ ಮೇಲೆ ಜೋತಾಡಿದವು. ರಾಮೂ ಮುಗ್ಧನಾದ.

" ಯಾಕೂ ಇಲ್ಲ. ಏನೋ ಹುಚ್ಚುಚ್ಚಳಾಂಗ ಚೀರಿಬಿಟ್ಟೆ ! ಮಂಗಗಳು ಕಡಿದಾಡಿ ಮ್ಯಾಲಿನಿಂದ ಕೆಳಗೆ ಬಿದ್ದವು. ನನ್ನ ಮೈಮ್ಯಾಲೇ ಬೀಳೋವಿದ್ವು. ಸ್ವಲ್ಪದರಾಗ ತಪ್ಪಿತು. ಖೋಡಿಗಳು ಅಲ್ಲಿ ಹೋಗಿ ಹ್ಯಾಂಗ ಕೂತಾವ ನೋಡ್ರಿ ! " ಎಂದು ಒಂದು ಮಾವಿನ ಮರದ ಕಡೆಗೆ ಮುಖ ಹೊರಳಿಸಿದಳು.

ಅಡ್ಡ ಹಚ್ಚಿಕೊಂಡು ನೀರಲ್ಲಿಳಿದ ಗಂಗಾಸಾನಿ ಮೇಲೆ ಬರುವಂತಿರಲಿಲ್ಲ. " ಸುಭಗಾ, ಯಾಕದು ಚೀರಿದೆಲ್ಲ ? " ಎಂದು ಆಕೆ ಬಾವಿಯೊಳಗಿನಿಂದಲೇ ಕೇಳಿದ್ದಕ್ಕೆ ಉತ್ತರ ಕೊಟ್ಟು ಸುಭಗೆ ರಾಮೂನ ಕಡೆಗೆ ತಿರುಗಿದಳು.

ರಾಮೂ-ಸುಭಗೆಯರು ಮಾತಾಡಿದುದು ಇದೇ ಮೊದಲ ಸಲ.

ಇಬ್ಬರಿಗೂ ಮಾತು ಮುಂದುವರಿಸಬೇಕೆನಿಸಿತು. ರಾಮೂ ವಿಷಯ ಬದಲಿಸಿ ಅಂದ :

"ಎರಡು ದಿನಕ್ಕೊಮ್ಮೆ ತಣ್ಣೀರು ಮೈ ತೊಳಕೀರಿ ಕಾಣತsದ. ತಡೀತsದೇನು ನಿಮಗ ?"

ಸುಭಗೆ ಕಾಲ್ಬೆರಳಿನಿಂದ ನೆಲ ಕೆದರಿದಳು. ದೃಷ್ಟಿಯನ್ನು ಬೆರಳಿನಲ್ಲಿಟ್ಟು ಉತ್ತರ ಕೊಟ್ಟಳು :

"ರೂಢೀ ಬಿದ್ದsದ ನನಗ. ನೀರು ಮಾತ್ರ ಚೊಲೋವಲ್ಲ. ಕಲ್ಲಾಗಿನ ನೀರು ಬಹಳ ಶೀತ. ನೀವು ಸುಮ್ಮನs ಮನಿಯಾಗs ಸ್ನಾನಾ ಮಾಡಿದ್ದರ ಆಗತಿತ್ತು. ಈ ನೀರಿಗೆ ಹೊಸಬರು ನೀವು. ಸ್ವಲ್ಪ ಜ್ವಾಕಿಯಿಂದ ಇರಬೇಕ್ರೀ."

"ಏನಾಗತದರಿ ? ಮನೀಕಿಂತಾ ಇಲ್ಲೇ ಆರಾಮು ಅನಸತsದ."

"ನೀವು ಭಿಡೇ ಸ್ವಭಾವದವರು ಕಾಣತsದ ?" ಎಂದು ಸುಭಗೆ ಮುಖವನ್ನು ಕೆಳಗೆ ಇಟ್ಟು, ಮುಗುಳುನಗೆಯಿಂದ, ಓರೆಗಣ್ಣಿನಿಂದ, ಕೇಳಿದಳು.

ರಾಮೂ ನಕ್ಕ.

ಅವರ ಮಾತಿನಲ್ಲಿ ಅರ್ಥವಿರಲಿಲ್ಲ; ಮಾತಾಡಲು ವಿಷಯವೂ ಇರಲಿಲ್ಲ. ಆದರೂ ಇಬ್ಬರಿಗೂ ಇನ್ನೂ ಮಾತಾಡುತ್ತ ನಿಲ್ಲಬೇಕೆನಿಸಿತು. ಒಂದು ನಿಮಿಷ ಸುಮ್ಮನೆ ನಿಂತರು.

"ಸುಭಗಾ, ಬಾ ಅವ್ವ, ಇನ್ನು ಹೊತ್ತಾಯ್ತು." ಎಂದು ಬಾವಿಯಿಂದ ಧ್ವನಿ ಬಂತು.

"ಹೂಂ, ಬಂದೆ." ಎಂದು ಗಟ್ಟಿಸಿ ಅಂದು, ಸುಭಗೆ ರಾಮೂನ ಕಡೆಗೆ ಹೊರಳಿ ವಿನಯದಿಂದ "ಹೋಗತೇನಿ !" ಎಂದು ತಲೆಯಾಡಿಸಿದಳು.

ಅವಳು ನಿಡಿದಾದ ಬೆರಳುಗಳನ್ನು ಮಣಿಮಣಿಸಿ ಮರಕ್ಕೆ ಕಟ್ಟಿದ ಸೀರೆಯ ಗಂಟನ್ನು ಉಚ್ಚುತ್ತಿದ್ದಾಗ ರಾಮೂ ಅಲ್ಲಿಯೇ ನಿಂತಿದ್ದ.

ಗಂಗಾಸಾನಿ-ಸುಭಗೆಯರಿಬ್ಬರೂ ಒಗೆದ ಬಟ್ಟೆಗಳ ಗಂಟುಗಳನ್ನು ತಲೆಯ ಮೇಲೆ ಇಟ್ಟುಕೊಂಡು ಮನೆಯ ಕಡೆಗೆ ಸಾಗಿದಾಗ ಸುಭಗೆ ಗಂಗಾಸಾನಿಯನ್ನು ಕೇಳಿದಳು :

"ಅವರು ವೀಣಾನ್ನ ಭಾಳ ಛಂದ ಬಾರಸತಾರ ಅಲ್ಲ, ಗಂಗಕ್ಕ ?"

“ ಹೌದು. ಆ ಕಲಾ ಛೋಲೋ ಸಾಧಿಸೇದ ಅವರಿಗೆ. ಶಾಸ್ತ್ರೋಕ್ತ ಕಲಿತರೆಲ್ಲ ಮುಂದ ಬಂದಾರು; ಪಾಪ, ಬಡವರು. ಹ್ಯಾಂಗ ಸಾಧ್ಯ ಆದೀತು ? ”

“ ನಾನೂ ಕಲೀಲೇನು, ಗಂಗಕ್ಕಾ ? ”

“ ಕಲೀಯಲ್ಲ. ಏನು ತಪ್ಪಾತು. ದಿನಾ ಅರ್ಧ ತಾಸು ಹೇಳಿಸಿಗೋ. ಹ್ಯಾಂಗಾದರೂ ಮನೀಗೆ ಬರತಾರ. ”

“ ಹೋಗು ನಮ್ಮವ್ವ ನಾಚಿಗಿ ಆಗತೈದ. ಮೇಲಾಗಿ ಮಂದಿ ಆಡಿಕೋತಾರ. ಈಗಾಗಲೇ ಅಂತಾರಲ್ಲ. ಬಸವೀ ಹಾಂಗ ಕುಣಿಯೋದು ಕಲೀಲಿಕ್ಕೆ ಹತ್ಯಾಳ ಅಂತ. ”

“ ನಾ ಒಂದು ಹೇಳಲ್ಯಾ ಸುಭಗಾ ? ಅನ್ನೋ ಜನ ಅಂತಾನೈ ಇರತಾರ. ಅದರಾಗೈ ನಿಮ್ಮ ಬ್ರಾಂಬರಾಗ— ನಿನಗ ಸಿಟ್ಟು ಬಂದರೂ ಚಿಂತಿಲ್ಲ— ಆಡಿಕೊಂಬೋದು ಭಾಳ. ಅಂಥಾವಕೆಲ್ಲ ಕಾಳಜೀ ಮಾಡ ಬಾರದು ನೋಡು. ಕುಣಿಯೋರೆಲ್ಲ ಬಸವೇರೈ ಆದಾಂಗಾತೇನು ? ಕುಣೀ ದಿದ್ದೋರು ಎಲ್ಲಾರೂ ಗರತೇರೈ ಇದ್ದಾರೇನು ? ನಿಮ್ಮ ಸಮಾಜದಾಗ ಮಾತುಮಾತಿಗೆ ಕಟ್ಟು ನಿಟ್ಟು. ಇರಬೇಕು; ಇರಬಾರದೂ ಅಂತ ಅಲ್ಲ. ಅವನ್ನ ಮಾಡಿದ ಹಿರಿಯರೇನೂ ಧಡ್ಡರಿದ್ದಿಲ್ಲ. ಆದರೂ ಈ ಹುಚ್ಚು ಹುಚ್ಚು ನೇಮುಗಳು ಅತೀ ಆಗಬಾರದು. ನಡಸಲಿಕ್ಕೆ ಬರೋ ಹಾಂಗ ಇರಬೇಕು. ಪರಿಸ್ಥಿತಿಗೆ ತಕ್ಕ ಹಾಂಗ ಇರಬೇಕು. ಪ್ರತಿಯೊಂದಕ್ಕೂ ಅರ್ಥ ಇರಬೇಕು. ನಾನಂತೂ ಯಾರು ಏನು ಅಂದ್ರೂ ಹಚಿಗೊಂಬೋದಿಲ್ಲ ನೋಡು ಸುಭಗಾ. ಶಂಭುಲಿಂಗಗ ಮಾತ್ರ ಹೆದರತೇನಿ. ಮತ್ತ ಯಾರಿಗೂ ಇಲ್ಲ. ”

## ೨೪

ದಿನಗಳು ಗತಿಸಿದಂತೆ ರಾಮೂನಿಗೆ ಬೆಟ್ಟದ ಜೀವನವು ಅರ್ಥಪೂರ್ಣ ವಾಗಹತ್ತಿತು. ಪ್ರತಿಯೊಂದು ತಾಸಿನಲ್ಲಿ, ಪ್ರತಿಯೊಂದು ನಿಮಿಷದಲ್ಲಿ, ಉತ್ಸಾಹವನ್ನು ಕಾಣಹತ್ತಿದನು. ಹರಕು ಬಟ್ಟೆಗಳ ಬದಲು ಹೊಸ ಬಟ್ಟೆ

ಗಳು ಬಂದವು ಎಂದಲ್ಲ; ಎರಡು ಹೊತ್ತು ನಿಶ್ಚಿಂತೆಯಿಂದ ಆಹಾರ ದೊರೆಯುತ್ತಿತ್ತು ಎಂದಲ್ಲ; ಕಂಡಕಂಡವರು ಮನ್ನಣೆ ಮಾಡುತ್ತಿದ್ದರು, ಪ್ರೀತಿಸುತ್ತಿದ್ದರು ಎಂದಲ್ಲ. ತನ್ನ ವೀಣೆಗೆ ಮರುಳಾಗದ ಜನರೇ ಇರಲಿಲ್ಲ ಎಂದಲ್ಲ; ತನ್ನ ಹೊಣೆಯಾದ ನಾಟಕದ ತಯಾರಿ ತೃಪ್ತಿಕರವಾಗಿ ಸಾಗಿದ್ದಿತು ಎಂದೂ ಅಲ್ಲ.

ಅವನು ಶಂಕರಭಟ್ಟರ ಮನೆಯಲ್ಲಿ ಹೆಜ್ಜೆಯಿಡುವದೊಂದೇ ತಡ, ಪ್ರತಿಕ್ಷಣವೂ ಹಕ್ಕಿಗಿಂತಲೂ ಹಗುರಾಗಿ ಹಾರಿಹೋಗುತ್ತಿತ್ತು. ಮನವು ಮುಂಜಾನೆಯ ಮಲ್ಲಿಗೆಯಂತೆ ಅರಳುತ್ತಿತ್ತು. ಹೃದಯದಲ್ಲಿ ಸಂತಸದ ತೆರೆಗಳು ಏಳುತ್ತಿದ್ದವು. ಸುಭಗೆ ಎಲ್ಲಿ ಕುಳಿತು ಮಾತನಾಡಿದರೂ ಅವಳ ಮಾತು ಆತನಿಗೆ ಸಂಗೀತ. ಅವಳು ಸುಳಿದಲ್ಲೆಲ್ಲ ಅವನಿಗೆ ವಸಂತಕಾಲ; ಅವಳು ನೋಡಿದಲ್ಲೆಲ್ಲ ಅವನಿಗೆ ಬೆಳ್ದಿಂಗಳು. ಅಂತೆಯೇ ರಾಮೂ ಒಂದಿಲ್ಲೊಂದು ನೆವದಿಂದ ಶಂಕರಭಟ್ಟರ ಮನೆಯಲ್ಲಿ ಸುಳಿಯಹತ್ತಿದ.

ರಾತ್ರಿ ಎಂಟೂವರೆಯ ಸುಮಾರು ನಗಾರಿ ಬಡಿಯುತ್ತಿದ್ದಿತು. ಗುಡಿಯಲ್ಲಿ ಮಂಗಳಾರತಿ ನಡೆದಿದ್ದಿತು. ರಾಮೂ ಊಟ ಮುಗಿಸಿಕೊಂಡು ದಿನದಂತೆ ಶಂಕರಭಟ್ಟರ ಮನೆಗೆ ಹೋದ.

ಮನೆಯ ಮುಂದೆ ಹೋದಾಗ ನಡುಮನೆಯಲ್ಲಿ ದೀವಿಗೆಯೇನೋ ಕಂಡಿತು. ವಾಡಿಕೆಯಾಗಿ ಈ ಹೊತ್ತಿನಲ್ಲಿ ದೂರದಲ್ಲಿಯೇ ಕೇಳಬರಬಹುದಾಗಿದ್ದ ಹಾರ್ಮೋನಿಯಮ್‌ದ ಹರಕು-ಮುರಕು ದನಿಯಾಗಲೀ ತಬಲದ ನಿನಾದವಾಗಲೀ ನಾಟಕದ ಜನ ಗುಣಗುಟ್ಟುವ ಪದಗಳಾಗಲೀ ಕೇಳಿಸಲಿಲ್ಲ. ಜನರ ಸುಳುವೂ ಇರಲಿಲ್ಲ. ಆದರೆ ಆಗೊಮ್ಮೆ ಈಗೊಮ್ಮೆ ವೀಣೆಯ ದನಿ ಮಾತ್ರ ಕೇಳಿಸುತ್ತಿತ್ತು. ಹಿಂದೆ ಮುಂದೆ ನೋಡುತ್ತ ರಾಮೂ ಹೊಸ್ತಿಲದಲ್ಲಿ ಕಾಲಿಟ್ಟ.

ನಡುಮನೆಯಲ್ಲಿ ಸುಭಗೆಯೊಬ್ಬಳೇ ಕುಳಿತಿದ್ದಳು. ರಾಮೂನ ವೀಣೆಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದಳು. ಅದರ ತಂತಿಗಳಲ್ಲಿಯೇ ದೃಷ್ಟಿಯನ್ನಿಟ್ಟು ಅದನ್ನು ನುಡಿಸಲು ಪ್ರಯತ್ನಿಸುತ್ತಿದ್ದಳು.

“ ಶಂಕರಭಟ್ಟರು ಇಲ್ಲರೇ ? ” ಎಂದ ರಾಮೂ.

ಸುಭಗೆ ಬೆಚ್ಚಿದಳು. ಒಳಗೆ ಬಂದ ರಾಮೂನನ್ನು ನೋಡಿರಲಿಲ್ಲ.

ಕೆಳಗೆ ಬಿದ್ದ ಸೆರಗನ್ನು ಹೊದ್ದುಕೊಂಡಳು. ಕೈಯಲ್ಲಿಯ ವೀಣೆಯನ್ನು ಕೆಳಗೆ ಇಟ್ಟು, ಮೇಲೆ ಏಳುತ್ತ ಆಕೆಯೆಂದಳು: "ಇಲ್ಲ; ಗುಡಿಗೆ ಹೋಗ್ಯಾರ."

"ಇನ್ನೂ ಯಾರೂ ಬಂದಿಲ್ಲs ?"

"ಯಾರ್‍ಯಾರೋ ಬಂದಿದ್ರು. ಗಂಗಕ್ಕ ಕಾರ್ತೀಕಾ ಹಚ್ಯಾಳ; ಎಲ್ಲಾರೂ ಗುಡೀಗೆ ಹೋಗ್ಯಾರ. ನೀವು ಹೋಗಲಿಲ್ಲ ?" ಈಗಾಗಲೇ ಸುಭಗೆ ಅಡಿಗೆಯ ಮನೆಯಲ್ಲಿ ಇದ್ದಳು. ಬಾಗಿಲ ಚೌಕಟ್ಟಿನ ತಲೆಯಲ್ಲಿಯ ಕಬ್ಬಿಣ ಕೊಂಡಿಯಲ್ಲಿ ಬೆರಳಿರಿಸಿ ನಿಂತಿದ್ದಳು.

"ಇಲ್ಲ ಹೋಗಲಿಲ್ಲ. ವೀಣಾ ಬಾರಿಸಲಿಕ್ಕೆ ಬರತsದs ನಿಮಗ? ಬರ್‍ರೆಲ್ಲ ಬಾರಿಸರಿ, ನೋಡೋಣ!" ಎಂದ ರಾಮೂ.

ಸುಭಗೆ ನಗುತ್ತ ತಲೆಯನ್ನು ಎಡಬಲಕ್ಕೆ ತೂಗಾಡಿದಳು. "ಸುಮ್ಮನೆ ಹಿಡಿದುಕೊಂಡಿದ್ದೆ; ನನಗೆಲ್ಲಿ ಬರಬೇಕ್ರಿ. ಕಠಿಣೇನ್ರಿ ಬಾರಸೋದು ?" ಸುಭಗೆಯ ಪ್ರಶ್ನೆಯಲ್ಲಿ ಸಲಿಗೆಯ ಧ್ವನಿಯಿತ್ತು.

"ರೂಢೀ ಮಾಡಿದರ, ಅಷ್ಟೇನೂ ಬಿಗೀ ಅಲ್ಲ." ಎಂದ ರಾಮೂ ತಲೆಬಾಗಿಲಿಗೆ ಭುಜವನ್ನು ಆನಿಸಿಕೊಂಡು.

ಸುಭಗೆ ಮತ್ತೆ ಹೊರಗೆ ಬಂದಳು; ವೀಣೆಯನ್ನು ಮತ್ತೆ ಕೈಯಲ್ಲಿ ತೆಗೆದುಕೊಂಡಳು. ರಾಮೂ ಆಕೆಗೆ ತೊಡೆಯಮೇಲೆ ತೊಡೆ ಹಾಕಿ ಕೂಡಲು ಹೇಳಿದ; ವೀಣೆಯನ್ನು ಎಡದ ತೊಡೆಯಲ್ಲಿ ಇರಿಸಲು ಸೂಚಿಸಿದ. 'ಕೈಯನ್ನು ಹಾಗೆ ಹಿಡಿಯಿರಿ; ತಂತಿಯನ್ನು ಹೀಗೆ ಮಿಡಿಯಿರಿ.' ಎಂದು ಅವನು ದೂರದಿಂದಲೇ ತಿಳಿಸಿದುದು ಆಕೆಗೆ ತಿಳಿಯಲಿಲ್ಲ. ಆಕೆ ಅವನನ್ನು ನೋಡಿ ನಕ್ಕಳು. ರಾಮೂ ಮುಂದೆ ಬಂದ. ಸುಭಗೆಯ ಎದೆ ಹಾರಹತ್ತಿತು.

ಗುಡಿಯ ನಗಾರಿ ಇನ್ನೂ ಬಾರಿಸುತ್ತಿತ್ತು. ಅವಳ ಎದೆ ನಗಾರಿಗಿಂತಲೂ ಗಟ್ಟಿಯಾಗಿ ಬಡಿಯುತ್ತಿತ್ತು.

ಮುಂದೆ ಬಂದ ರಾಮೂ ವೀಣೆಯ ಮೇಲ್ಭಾಗವನ್ನು ಅವಳ ಎಡದ ಭುಜದಲ್ಲಿ ಸರಿಯಾಗಿ ಇರಿಸಿದ. ಅವಳ ಎಡದ ಕೈಯನ್ನು ಮುಟ್ಟಿ ವೀಣೆಯನ್ನು ಹಿಡಿಯುವ ರೀತಿಯನ್ನು ತೋರಿಸಿದ.

ಸುಭಗೆಯ ಮೈ ಜುಮ್ಮೆಂದಿತು; ಕೂದಲು ನಿಮಿರಿದುವು; ಮೈಯ

ಲ್ಲಿಯ ರಕ್ತವೆಲ್ಲ ಮುಖದಲ್ಲಿಯೇ ಶೇಖರಿಸಿದಂತಾಯ್ತು. ಬೆವೆತ ತುಟಿಯ ಮೇಲ್ಭಾಗವನ್ನು ಒರೆಸಿಕೊಂಡಳು.

" ಬಾರಿಸಲಿಕ್ಕೆ ಕಲಿಸತೀರಾ ನನಗೂ ? "

" ನನಗ ಕುಣಿಯೋದು ಕಲಿಸಿರಿ; ನಿಮಗ ವೀಣಾ ಕಲಿಸತೇನಿ ! " ರಾಮೂ ಸಲಿಗೆಯಿಂದ ಚೇಷ್ಟೆ ಮಾಡಿದ.

ಸುಭಗೆ ರಾಮೂನ ಮೋರೆಯನ್ನು ನೋಡಿದಳು; ನಕ್ಕಳು.

" ನಿಮಗ ಯಾರು ಹೇಳಿದರು ಇದನ್ನ ? "

" ಸಂಗಪ್ಪ. "

" ಅಂವಾ ಯಾವಾಗ ನೋಡಿದ್ದನೋ ಕಳ್ಳ ! ನೋಡಲಿಕ್ಕೆ ಹುಚ್ಚ ನಾಂಗ ಕಂಡ್ರೂ ಹ್ಯಾಂಗ ಇದ್ದಾನ ನೋಡ್ರಿ. ಗಂಗಕ್ಕ ಛಂದ ಕುಣೀತಾಳ."

" ಹೌದು. "

" ನೀವು ಯಾವಾಗ ನೋಡಿದಿರಿ ? "

" ಹೋದ ಸೋಮವಾರ. ನೀವು ಅವರಿಗಿಂತ ಚಲೋ ಕುಣೀತೀರಿ ಅಂತ ! "

" ಮಂದೀ ಮುಂದ ಬಬ್ಬಾಟಾ ಮಾಡಬ್ಯಾಡ್ರಿ ಮತ್ತ. ಈ ಊರಾಗ ಜನಾ ಭಾಳ ಕೆಟ್ಟ ಅದ. "

ಕೆಳಗಿಟ್ಟ ವೀಣೆಯನ್ನು ಸುಭಗೆ ಮತ್ತೆ ಕೈಯಲ್ಲಿ ತೆಗೆದುಕೊಂಡಳು. ರಾಮೂ ನಿರ್ದೇಶನ ಮಾಡಿದಂತೆ ತಂತಿಗಳನ್ನು ಮಿಡಿಯತೊಡಗಿದಳು. ಅವಳ ಹೃದಯವೀಣೆಯೂ ಮಧುರವಾಗಿ ಮಿಡಿಯಹತ್ತಿದ್ದಿತು.

ಒಂದು ನಿಮಿಷ ಇಬ್ಬರೂ ಸುಮ್ಮನಿದ್ದರು.

ಸುಭಗೆ ವೀಣೆಯಲ್ಲಿ ನಟ್ಟ ದೃಷ್ಟಿಯಲ್ಲಿ ಮೃದುಹಾಸ ಬೆರೆಯಿಸಿ ರಾಮೂನ ಕಡೆ ಹೊರಳಿಸಿದಳು. ರಾಮೂ ಏನೋ ಅನ್ನುವವನಿದ್ದ. ಅಷ್ಟರಲ್ಲಿ " ಸುಭಗಕ್ಕನೋರಃ " ಎಂದು ಸಂಗಪ್ಪ ಒದರುತ್ತ, ಕೈಯಲ್ಲಿ ಪಂಚಕಜ್ಜಾಯದ ತಬಕವನ್ನು ಹಿಡಿದುಕೊಂಡು ಒಳಗೆ ಬಂದ.

" ಗಂಗಾಸಾನಿ ಕೊಟ್ಟಾಳ ನೋಡ್ರಿ, ನಿಮಗ ಕೊಡೂ ಅಂತ. ಯಾಕ್ರೀ ರಾಮಣ್ಣೋರ ನೀವು ಬರಲೇ ಇಲ್ಲಲ್ಲ ಕಾರ್ತೀಕಕ್ಕ ? " ಎನ್ನುತ್ತಲೇ ಆತ ತುಂಬ ತುಂಬಿದ್ದ ತಬಕವನ್ನು ಸುಭಗೆಯ ಮುಂದಿಟ್ಟು, ಮುಷ್ಟಿತುಂಬ

ಕಜ್ಜಾಯ ಹಿಡಿದ ಹಿಡಿಯನ್ನೆಲ್ಲ ಬಾಯಿಯಲ್ಲಿ ತುಂಬಿಕೊಂಡ. ಕಟವಾಯಿಗೆ ಹತ್ತಿದುದನ್ನು ಒರೆಸಿಕೊಳ್ಳುವ ಪರವೆಯೂ ಇಲ್ಲದೇ "ತಗದು ಇಡಿರಿ ಸುಭಗಕ್ಕಾ ಪರಸಾದಾನ. ಗುಡೀಗೆ ಹೋದ ಮಂದಿ ಬಂತು. ಈಗ ಎಲ್ಲಾ ಆಗಿ ಮಾಡಿಬಿಟ್ಟಾರು" ಎಂದ.

ರಾಮೂ ಮನೆಯ ಹೊರಗೆ ಹೋಗಿ ನಿಂತ. ಗುಡಿಯ ಪವಳಿಯ ಕಡೆಗೆ ನೋಡಿದ. ಎರಡು ಅಂತಸ್ತಿನ ನಗಾರಖಾನಿಯಿಂದ ಆಚೆ ಆಗಸದ ವರೆಗೂ ಎದ್ದು ನಿಂತ ಶಿಖರದ ತುಂಬ ಸಾಲುಗಟ್ಟಿ ಹತ್ತಿಯ ಕಾಳಿನ ಗಂಟು ಗಳು ಉರಿಯುತ್ತಿದ್ದವು. ಕತ್ತಲೆಯೆಲ್ಲ ಚದರಿ ಪವಳಿಯ ವಾತಾವರಣ ಪ್ರಸನ್ನವಾಗಿದ್ದಿತು. ರಾಮೂನ ಮನ ಅದಕ್ಕಿಂತ ಹೆಚ್ಚು ಪ್ರಸನ್ನವಾಗಿತ್ತು.

## ೨೫

ಮರುದಿನ ಸುಭಗೆ ಗಂಗಾಸಾನಿಯ ಮನೆಗೆ ಹೋದವಳು ತಿರುಗಿ ತನ್ನ ಮನೆಗೆ ಸಂಜೆಯ ಮುಂದೆಯೇ ಬಂದಳು. ಮೂರು ತಾಸುಗಟ್ಟಲೇ ಅವರೀರ್ವರು ಏನೇನೋ ಮಾತಾಡಿದರು. ಗಂಗಾಸಾನಿಯ ಮನೆಯಿಂದ ಸುಭಗೆ ಹೊರಗೆ ಬಂದಾಗ, ಅವಳ ಕಣ್ಣುಗಳು ಕೆಂಪಾಗಿದ್ದವು. ಬಹಳ ಅತ್ತಿದ್ದಳೇನೋ. ಮನೆಯ ಬಾಗಿಲಿನಲ್ಲಿಯೇ ನಿಂತಿದ್ದ ಗಂಗಾಸಾನಿಯ ಮುಖದ ಮೇಲೆ ಗಾಂಭೀರ್ಯ-ನಿಷ್ಠುರತೆಗಳು ಒಡೆದು ಕಾಣುತ್ತಿದ್ದವು.

ಸುಭಗೆ ಮನೆಗೆ ಬಂದೊಡನೆ ದೀಪ ಮೂಡಿಸಿ, ಧೇನಿಸುತ್ತ ಸುಮ್ಮನೆ ಕುಳಿತುಬಿಟ್ಟಳು. ಆಕೆಯ ಮನಸ್ಸಿನ ಪ್ರತೀಕವೋ ಏನೋ ಎನ್ನುವಂತೆ, ಹೊರಗೆಲ್ಲ ಬಿರುಗಾಳಿ ಬಿಟ್ಟದ್ದಿತು. ಆಕಾಶದಲ್ಲೆಲ್ಲ ಅಡ್ಡಮಳೆಯ ಮೋಡ ಕವಿದಿತ್ತು. ಅದೇ ಸಂಜೆಯಾಗಿದ್ದರೂ ಎಲ್ಲೆಡೆಗೆ ಕತ್ತಲೆ ಮುಸುಗಿತ್ತು. ಆಗಾಗ ಗುಡುಗುತ್ತಿದ್ದಿತು. ಮಿಂಚೂ ಇತ್ತು.

ಅಡ್ಡಮಳೆ ನೆಚ್ಚಿಗೆಯದಲ್ಲ ಎಂದು ಶಂಕರಭಟ್ಟರು, ಕಂದೀಲು ತೆಗೆದು ಕೊಂಡು ಬೆಳಕಿಂಡಿಗಳನ್ನು ಮುಚ್ಚಿ ಬಂದರು. ಅಷ್ಟರಲ್ಲಿ ಗಾಳಿ ಕಡಿಮೆ ಯಾಗಿ ಚಿಟಿಚಿಟಿ ಮಳೆ ಸುರುವಾಗಿದ್ದಿತು.

ಸಂಗಪ್ಪ ಗುಡಿಯ ಪವಳಿಯಿಂದ ಓಡಿ ಬಂದು "ಶಂಕರಭಟ್ರ ಶಿಖರದ ವ್ಯಾಗ ಸ್ವಾಮಿ ಹೊಂಟೈತಿ, ನೋಡಾಕ ಹೋಗೋದಿಲ್ರೇ ?" ಎಂದ.

ಶಂಕರಭಟ್ಟರು "ಸುಭಗಾ, ನೀ ನೋಡಿ ಬರತಿದ್ರ ಬಾರವ್ವಾ. ನಾನು ಮನಿಯಾಗ ಇರತೇನಿ. ಮಾಡ ಛಲೋ ಆಗಿತ್ತು. ಈಗ ಒಂದು ಮಳೀ ಆಗಿದ್ರ ಎಲ್ಲಾ ನೆಟ್ಟಗಿತ್ತು. ದೇವರು ಹೊಂಟವ್ಯಾಲ. ಮಳೀ ಆಗತsದೋ ಇಲ್ಲೋ" ಎಂದು ರಾತ್ರಿಯ ಅಡಿಗೆಯ ತಯಾರಿ ನಡೆಸಿದರು.

ಸುಭಗೆ ಹೊರಗೆ ಹೋದಳು. ಎಲ್ಲೆಲ್ಲಿಯೂ ಕಗ್ಗತ್ತಲು. ಜಿಟಿಜಿಟಿ ಮಳೆ ಸಾಗಿಯೇ ಇದ್ದಿತು. ಆಕೆ ಮೇಲೆ ನೋಡಿದಳು. ಒಂದೂ ನಕ್ಷತ್ರ ಕಾಣಲಿಲ್ಲ. ಸೆರಗನ್ನು ತಲೆಯ ಮೇಲೆ ಹೊದ್ದುಕೊಂಡು ಪವಳಿಯ ಕಡೆಗೆ ಸಾಗಿದಳು. ನಾಲ್ಕಾರು ಜನ ಕೈಯಲ್ಲಿ ಒಂದೊಂದು ಟೆಂಗಿನಕಾಯಿ ಹಿಡಿದು ಕೊಂಡು ದೇವರ ದರ್ಶನಕ್ಕೆ ಹೊರಟಿತ್ತು.

ಶಿಖರದ ಮೇಲೆ ದೇವರು ಹೊರಡುವದೊಂದು ಶಂಭುಲಿಂಗನ ದೇವ ಸ್ಥಾನದ ವೈಚಿತ್ರ್ಯ. ಆ ಉನ್ನತವಾದ ಬೆಟ್ಟದ ತುದಿಗಿರುವ ಆ ಎತ್ತರವಾದ ದೇವಸ್ಥಾನದ ಅತ್ಯುನ್ನತವಾದ ಶಿಖರದ ತುಟ್ಟತುದಿಯಲ್ಲಿ ಮೂರು ಆಳಿ ನಷ್ಟು ಎತ್ತರವಾದ ಕಬ್ಬಿಣದ ಕಂಬಿಯಿದೆ. ಅದರ ತುದಿ ಅತಿಶಯ ಚೂಪಾಗಿದೆ. ಆಕಾಶದಲ್ಲಿ ಸುಳಿದಾಡುವ ಕರಿಯ ಮೋಡಗಳು ಭೂಮಿಯ ಹತ್ತಿರ ಬಂದಾಗ ಈ ಕಂಬಿಯನ್ನು ಚುಂಬಿಸಿ ಹೋಗುವವೋ ಏನೋ ಅನ್ನುವಂತೆ ಭಾಸವಾಗುತ್ತಿರುತ್ತದೆ. ಇಂದಿನಂತೆ ಜಿಟಿಜಿಟಿ ಮಳೆ ಹಿಡಿದು, ಆಗಸದಲ್ಲಿ ನಕ್ಷತ್ರಗಳ ಸುಳಿವೂ ಇಲ್ಲದಾಗಿ, ಆ ಕಂಬಿಯ ಬದಿಗೆ ಸುಳಿದಾಡುವ ಕಾರ್ಮೋಡಗಳು ಕಣ್ಣುಕುಕ್ಕುವ ಮಿಂಚನ್ನು ಕೊರೆ ಬಾಗ, ಕಂಬಿಯ ತುದಿಗೆ 'ಜೊಂಯ್' ಎಂಬ ನಾದ ಹೊರಟು, ತತ್‌ಕ್ಷಣ ಕ್ಷಣವೇ ಅಲ್ಲಿ ಕೆಂಪುಮೂಡಿಯ ಮಂದತೇಜದ ತಾರೆಯೊಂದು ಒಂದು ವೈದೋರಿ ಮಾಯವಾಗುವದು; ಅದು ಕೂಡಲೆ ಸುತ್ತಲು ಸುಳಿದಾಡುವ ಮೋಡಗಳನ್ನು ಚದುರಿಸಿಬಿಡುವದು. ಇದೇನು ಆಕಸ್ಮಿಕ ಘಟನೆಯೋ, ಪೂರ್ವಕಾಲದ ವಾಸ್ತುಶಿಲ್ಪಿಗಳ ಚಾತುರ್ಯವೋ, ಹೇಳಲಿಕ್ಕೆ ಆಗದಾದರೂ ಶಂಭುಲಿಂಗನಲ್ಲಿ ವಿಶ್ವಾಸವಿಟ್ಟ ಭಕ್ತರು ಶಂಭುಲಿಂಗನೇ ಶಿಖರದ ತುದಿಗೆ ವೈದೋರುವನೆಂದೂ ಪಾಪಿಗಳಿಗೆ ಕಾಣದೇ ಪುಣ್ಯವಂತರಿಗಷ್ಟೇ ಪ್ರಸನ್ನ

ನಾಗುವನೆಂದೂ ಹಿಂದಿನಿಂದಲೇ ನಂಬಿಕೊಂಡು ಬಂದಿರುವರು.

ದೇವರು ಹೊರಟಿದುದು ಹಳ್ಳಿಯಲ್ಲಿ ಸಾಕಷ್ಟು ಪ್ರಚಾರವಾಗಿರಲಿಲ್ಲವೋ ಏನೋ. ಸುಭಗೆ ಪವಳಿಯಲ್ಲಿ ಕಾಲಿಟ್ಟಾಗ ಕೆಲವೇ ಜನ ಅಲ್ಲಿ ಇಲ್ಲಿ ಸದ್ದುಮಾಡದೇ ಶಿಖರದ ತುದಿಯನ್ನೇ ನಿಟ್ಟಿಸುತ್ತ ನಿಂತಿದ್ದರು. ದೇವರ ದರ್ಶನದ ಲಾಭ ಪಡೆದೊಡನೆ ಚಟ್ಟನೆ ಕಾಯಿ ಒಡೆಯುತ್ತಿದ್ದರು.

ಸುಭಗೆಗೆ ಆ ಜನರಲ್ಲಿ ಹೋಗಿ ನಿಲ್ಲಲು ಮನಸ್ಸಾಗಲಿಲ್ಲ. ತೀರ್ಥ ಕೊಂಡದ ಬಳಿ ಯಾರೂ ಕಾಣಲಿಲ್ಲವಾದ್ದರಿಂದ, ಅದರ ಬಳಿಯಲ್ಲಿಯೇ ದಟ್ಟವಾಗಿ ಬೆಳೆದ ಒಂದು ನಿಂಬೆಯ ಗಿಡದ ಬುಡದಲ್ಲಿ ನಿಂತುಕೊಂಡಳು. ಮೇಲೆ ನಿಟ್ಟಿಸಹತ್ತಿದಳು.

" ಸುಭಗಾ ! " ಎಂದು ಹಿಂದಿನಿಂದ ದನಿ ಬಂತು.

ಸುಭಗೆಗೆ ರಾಮೂನ ದನಿ ತತ್‌ಕ್ಷಣ ತಿಳಿಯಿತು. ಆಗ ಮಾತ ನಾಡಲಿಲ್ಲ.

ರಾಮೂ ಮತ್ತೆ ' ಸುಭಗಾ ! ' ಎಂದು ಹತ್ತಿರ ಬಂದ. ಆಕೆಗೆ ಬಾಯಿ ಬಿಗಿಹಿಡಿಯುವದಾಗಲಿಲ್ಲ. ಅತ್ತಿತ್ತ ನೋಡಿದಳು. ಯಾರೂ ಕಾಣಲಿಲ್ಲ. " ನಿಮಗೆ ದೇವರು ಕಂಡಿತೇ ? " ಎಂದಳು ಮೆಲ್ಲಗೆ. ' ಹೂಂ ' ಎಂದ. ಇನ್ನೂ ಹತ್ತಿರ ಬಂದ. ಸುಭಗೆಯ ಕಣ್ಣು ಶಿಖರದ ಕಡೆಗಿದ್ದರೂ, ಆಕೆಯ ಕಿವಿ ರಾಮೂನ ಕಡೆಗಿದ್ದಿತು. ಆತ ಹತ್ತಿರ ಬರುತ್ತಿದ್ದುದು ತಿಳಿಯಿತು.

ರಾಮೂ ಆಕೆಯ ಕೈ ಹಿಡಿದ. ಗಾಳಿ ಬೀಸಿ ನಿಂಬಿಯ ಗಿಡವು ಅಲುಗಾಡಿಸಿತು. ಎಲೆಗಳಲ್ಲಿ ಅಂಟಿಕೊಂಡಿದ್ದ ಮಳೆಯ ಹನಿಗಳು ಮಿಂಚಿನ ಬೆಳಕಿನಲ್ಲಿ ಮುತ್ತುಗಳಂತೆ ಹೊಳೆಯುತ್ತ ಅವರ ಮೇಲೆ ಉದುರಿದವು.

ಸುಭಗೆ ಯಾರಾದರೂ ನೋಡಿದರೋ ಏನೋ ಎಂದು ಹೆದರಿದಳು. ಆದರೂ ಕೈ ಕೊಸರಿಕೊಳ್ಳುವ ಮನಸ್ಸಾಗಲಿಲ್ಲ. ತನ್ನ ಕೈಹಿಡಿದ ರಾಮೂನ ಕೈ ಕಂಪಿಸುತ್ತಿದ್ದುದು ಅವಳಿಗೆ ತಿಳಿಯದಿರಲಿಲ್ಲ.

ಮತ್ತೆ ಮಿಂಚಿತು. ಸುಭಗೆ ಎದೆಯೊಡೆದಳು. "ಇಲ್ಲಿಂದ ಹೋಗಿರಿನ್ನು, ಮಂದಿ ನೋಡ್ಯಾರು." ಎಂದಳು. ರಾಮೂ ಸರಿಯಲಿಲ್ಲ.

ಇನ್ನೊಮ್ಮೆ ಮಿಂಚಿತು. ಅಗಸಿಯ ಹತ್ತಿರ ಯಾರೋ ನಿಂತಿದುದನ್ನು

ಕಂಡಳು ಸುಭಗೆ. ಅಂಜಿಕೆಯು ಮೇರೆ ಮೀರಿತು. ಆಕೆ ಹುಬ್ಬುಗಂಟು ಹಾಕಿದುದು ರಾಮೂನಿಗೆ ಕಾಣಲಿಲ್ಲ. ಕೈ ಕೊಸರಿಕೊಂಡಳು. ಅವನ ಕಪಾಳಕ್ಕೆ ಒಂದು ಏಟು ಕೊಟ್ಟಳು.

ಮತ್ತೆ ಮಿಂಚಿದಾಗ ಆಕೆ ಅಲ್ಲಿ ಇರಲೇ ಇಲ್ಲ.

## ೨೬

ಶ್ರೀಕಂಠಶಾಸ್ತ್ರಿಗಳು ಸುಭಗೆಯೊಡನೆ ಅಧಿಕಪ್ರಾಸಂಗಿಕವಾಗಿ ವರ್ತಿಸಿ ಮೊದಕ್ಕಾಗಿ ತಮ್ಮ ಹುರುಳನ್ನು ಅವಳು ಬೈಲಿಗೆಲ್ಲಿ ಎಳೆಯುವಳೋ ಎಂಬ ಭಯದಿಂದ ರಾತ್ರಿಯೆಲ್ಲ ನಿದ್ರೆ ಮಾಡಿದ್ದಿಲ್ಲ. ಮರುದಿನ ತಮ್ಮ ಮೇಲೆ ಯಾವ ಪ್ರಸಂಗ ಬರುವದೋ ಎಂಬ ಅಂಜಿಕೆಯಿಂದ, ಸಂಚಾರದ ನೆವಮಾಡಿ ಬೆಳಗುಹರಿಯುವದರಲ್ಲಿಯೇ ಊರು ಬಿಟ್ಟಿದ್ದರು.

ಅವರಿಗೆ ಬೇಗ ಊರಿಗೆ ಬರಲು ಮನಸ್ಸಾಗಲಿಲ್ಲ. ಅತ್ತಿತ್ತ ತಿರುಗಾಡಿದರು. ದೇಶಾವರದ ಆಶೆಯ ಚಿಹ್ನಗಳೂ ತೋರಲಿಲ್ಲ. ಸಿಕ್ಕ ನಾಲ್ಕಾರು ರೂಪಾಯಿಗಳು ಮುಂದಿನ ಸ್ಥಳಕ್ಕೆ ಪ್ರಯಾಣ ಬೆಳೆಸುವದರಲ್ಲಿ ಖರ್ಚಾಗಿ ಕೈಬರಿದಾಗಿಯೇ ಇರುತ್ತಿತ್ತು. ಎರಡು ಹೊತ್ತು ಊಟದ ಸಲುವಾಗಿಯೇ ಸಂಚಾರದ ಕಾರ್ಯ ಕೈಕೊಂಡಂತೆ ಆಗಿತ್ತು. ಆದರೂ ತಿಂಗಳುಗಟ್ಟಲೆ ಬೆಟ್ಟಕ್ಕೆ ಮರಳುವ ಧೈರ್ಯ ಆಗಿರಲಿಲ್ಲ.

ಮಂದಿಯ ಮನೆಯಲ್ಲಿ ಊಟಮಾಡುತ್ತ ತಿರುಗಾಡುವದಾದರೂ ಎಷ್ಟು ದಿನ ? ಒಂದಿಲ್ಲೊಂದು ದಿನ ಅವರು ಊರಿಗೆ ಬರಲೇಬೇಕಾಯಿತು.

ಅವರು ಊರಿಗೆ ಬಂದುದು ಶಿಖರದ ಮೇಲೆ ದೇವರು ಕಾಣಿಸಿಕೊಂಡ ಮರುದಿನವೇ. ಬೆಟ್ಟವನ್ನೇರುವಾಗ ಹೆದಹೆದರುತ್ತ ಕಂಡಕಂಡವರನ್ನು ನಿಲ್ಲಿನಿಲ್ಲಿಸಿ ಊರ ಸಮಾಚಾರವನ್ನು ಕೇಳಿಕೊಂಡರು. ಸಾಲೆಯನ್ನು ಮುಗಿಸಿಕೊಂಡು ಮನೆಗೆ ಹೊರಟ ಮಾಸ್ತರರು ತಮ್ಮ ನಾಟಕದ ತಯಾರಿಯ ಬಗ್ಗೆ ಸವಿಸ್ತಾರವಾಗಿ ಹೇಳಿದ ಮೇಲೆ ಶ್ರೀಕಂಠಶಾಸ್ತ್ರಿಗಳಿಗೆ ಸಂಬಂಧಿಸಿದ ಮತ್ತೊಂದು ಸುದ್ದಿಯನ್ನು ತಿಳಿಸಿದರು— ಬೆಳಗುಮುಂಜಾನೆ ಸರವು

ಗಟ್ಟಿ ಹೊಡೆದ ಮಳೆಯ ಹೊಡೆತಕ್ಕೆ ಅವರ ಮನೆಯ ಗೋಡೆಯೊಂದು ಬಿದ್ದಿರುವದಾಗಿ.

ಮನೆಗೆ ಹೋದಾಗ, ರಾಧಕ್ಕ ಬಚ್ಚಲಮನೆಯಲ್ಲಿಯೇ ಅಡಿಗೆ ಹೂಡಿದ್ದರು. ಗಂಡ ಬಂದೊಡನೆ 'ಹೋ' ಎಂದು ಗೋಳಿಡುತ್ತಲೇ ಇದ್ದಲೆಯ ಒಲೆಯಲ್ಲಿ ಕೆಂಡ ಹಾಕಿ ಚಹಾಕ್ಕೆ ಎಸರಿಟ್ಟರು. ಮನೆಯಲ್ಲಿ ಏನು ಇದೆ, ಏನು ಇಲ್ಲ, ಎಂಬುದರ ಅರಿವೂ ಇಲ್ಲದೆ, ತಿಂಗಳುಗಟ್ಟಲೆ ಅವರು ಎಲ್ಲಿಯೋ ಹೋಗಿ ಕುಳಿತುದಕ್ಕೆ ತಮ್ಮ ದೈವವನ್ನೇ ತಾವು ಬೈದುಕೊಂಡರು. ಬರುವಾಗ ತಮ್ಮ ತವರೂರಿಗೆ ಇಳಿದು ಮಕ್ಕಳನ್ನಾದರೂ ಕರೆದುಕೊಂಡು ಬರಬಹುದಿತ್ತಲ್ಲ ಎಂದು ಒಟಗುಟ್ಟಿದರು. ಗೋಡೆ ಬಿದ್ದುದನ್ನು ತೋರಿಸಿ ತಾವೂ ತಮ್ಮ ಕೂಸೂ ಸ್ವಲ್ಪದರಲ್ಲಿಯೇ ಹೇಗೆ ಪಾರಾದರೆಂಬುದನ್ನು ಹೇಳಿದರು. ಜೀವ 'ವಲವಲ' ಅನ್ನುತ್ತ ಮರ್ಯಾದೆಗೆಟ್ಟು ಬಾಳುವೆ ಮಾಡುವದಕ್ಕಿಂತ ಬಿದ್ದ ಗೋಡೆ ತಮ್ಮ ಮೇಲೆಯೇ ಬಿದ್ದು ಮುತ್ತೈದೆಯಾಗಿ ಕಣ್ಣುಮುಚ್ಚಿದ್ದರೆ ತಾವು ಪುಣ್ಯಮಾಡಿದಂತಾಗುತ್ತಿತ್ತೆಂದು ಆರ್ಭಟಿಸಿದರು. ಕಣ್ಣುಗಳನ್ನು ಪಿಳಿಪಿಳಿ ಬಡೆಯುತ್ತ ಡಬ್ಬಣದಪ್ಪ ಗಡ್ಡ-ಮೀಸೆಗಳ ಮೇಲೆ ಕೈಯಾಡಿಸುತ್ತ ಮೂಗಿನಲ್ಲಿ ನಸ್ಯದ ಪುಡಿಯನ್ನು ತುಂಬುತ್ತ ಸುಮ್ಮನೆ ಕುಳಿತ ಶ್ರೀಕಂಠಶಾಸ್ತ್ರಿಗಳ ಮುಂದೆ ಚಹದ ಕಪ್ಪನ್ನಿಟ್ಟು, "ಅಯ್ಯ, ನನ್ನ ಮರವಿಗೆ ಬೆಂಕೀ ಹಚ್ಲೀ; ಚಹಾಕ್ಕ ಸಕ್ರೀನಃ ಹಾಕಿಲ್ಲ, ತಡೀರಿ;" ಎಂದು ನಕ್ಕು, ಎರಡು ಚಮಚೆ ಸಕ್ಕರಿಯನ್ನು ಹಾಕಿ ಕೈಯಾಡಿಸಿದರು. "ಕುಡಿಬ್ಯಾಡ ತಡೀರಿ. ಮೊನ್ನೆ ಗಂಗಾಸಾನಿ ಪಂಚಖಜ್ಜಾಯ ಕಳಿಸಿಕೊಟ್ಟಿದ್ದಳು; ನಿಮಗಃ ಅಂತ ಒಂದಿಷ್ಟು ತಗದು ಇಟ್ಟೇನಿ. ಬಾಯಾಗ ಹಾಕಿಕೊಂಡು ಕುಡೀರಂತ." ಎಂದು ಕಲ್ಲುಪರಟಿಯಲ್ಲಿಯ ಪಂಚಖಜ್ಜಾಯವನ್ನು ಮುಂದೆ ಸರಿಸಿದರು.

ಶ್ರೀಕಂಠಶಾಸ್ತ್ರಿಗಳು ಹೀಗೆ ಎಂದೂ ಸುಮ್ಮನೆ ಕುಳಿತಿರಲಿಲ್ಲ. ರಾಧಕ್ಕ ಎಂದೂ ಹೀಗೆ ಮಾತಾಡಿರಲಿಲ್ಲ.

ಚಹವನ್ನು ಕುಡಿದು ಶ್ರೀಕಂಠಶಾಸ್ತ್ರಿಗಳು ಬಿದ್ದ ಗೋಡೆಯನ್ನು ನೋಡಿ ಬಂದರು; ತಲೆಬಾಗಿಲಲ್ಲಿ ನಿಂತು ತಲೆ ಕೆದರಿಕೊಂಡರು; ನೆಟ್ಟಗೆ ಗಂಗಾಸಾನಿಯ ಮನೆಯ ಕಡೆಗೆ ಹೊರಟರು.

"ಏನು ನಡದದ, ಗಂಗಾ ?" ಎಂದು ಒಳಗೆ ಹೋಗಿ ನಡುಮನೆಯಲ್ಲಿಯ ಜೋಳದ ಚೀಲದ ಮೇಲೆ ಕುಳಿತುಕೊಂಡರು. ಅವರ ದನಿಯಲ್ಲಿ ಹಿಂದಿನ ಅಚ್ಚೆ ಇರಲಿಲ್ಲ.

"ಅಡಿಗೀ ಮಾಡತೇನಿ, ಕೂಡ್ರಿ." ಎಂದಳಾಕೆ ಒಳಗಿನಿಂದಲೇ. ಅವಳ ದನಿಯಲ್ಲಿ ಹಿಂದಿನ ಆದರ ಇರಲಿಲ್ಲ.

ಇವರು ಇಲ್ಲಿಂದಲೇ ಮಾತನಾಡಿದರು; ಆಕೆ ಅಲ್ಲಿಂದಲೇ ಮಾತನಾಡಿದಳು :

"ಯಾವಾಗ ಬಂದ್ರಿ ಊರಿಂದ ?"

"ಇದs ಬಂದೆ."

"ಹುಡುಗರು ಬಂದ್ರೇನು ?"

"ಇಲ್ಲ ಮಾರಾಯಳs. ಆಕೀ ತವರೂರಿಗೆ ಹೋಗೋದು ಆಗಲಿಲ್ಲ."

"ಪಾಪ, ರಾಧಕ್ಕ ಎಷ್ಟು ಗೋಳಾಡತಾರ. ಕರಕೊಂಡು ಬರಬಾರದಿತ್ತs. ತಾಯೀ ಕರುಳು. ಮಕ್ಕಳನ್ನ ನೋಡದ ಎಷ್ಟು ದಿನ ಆತು. ಎಲ್ಲಿಗೆ ಹೋಗಿದ್ರಿ ಮತ್ತ ಇಷ್ಟು ದಿನ ?"

"ಹೋಗಿದ್ದೆ ಹೀಂಗs, ಸಂಚಾರಕ್ಕ."

"ಏನಾರs ದುಡ್ಡು ಕೂಡಿತs ?"

"ಎಲ್ಲಿ ಬಂತು ಮಹಾರಾಯಳೇ ! ಮುಂದೀ ಕೈಯಾಗ ದುಡ್ಡs ಇಲ್ಲ. ಬರೇ ಕೈಯಿಂದ ಬಂದೆ."

"ನೀವs ಹಿಂಗ ಅಂದ್ರ ಆ ಹೆಣ್ಣುಮಗಳು ಏನು ಮಾಡಬೇಕು ? ಒಪ್ಪತ್ತು ಉಂಡ್ರ, ಒಪ್ಪತ್ತು ನಿರಾರ. ಆ ಸಭ್ಯಪ್ರಾಣಿಯ ಗೋಳು ಕಟಿಗೋಳ್ಳಿಕ್ಕೆ ಹ್ಯಾಂಗ ಆಗತದೋ ಮನಸು !"

"ನಿನ್ನಿನ ಮಳೀಗೆ ನಮ್ಮ ಅಡಿಗೀಮನೀ ·ಗ್ವಾಡೀನs ಬಿದ್ದು ಹೋಗೇದ !"

"ಹಾದಂತ; ಕೇಳಿದೆ."

"ಅಡಿಗೀ ಮಾಡೋದs ಫಜೀತಿ. ಬಚ್ಚಲಮನಿಯಾಗs ಮಾಡಲಿಕ್ಕೆ ಹತ್ತ್ಯಾಳ. ತುಂಬಾ ಹೊಗಿ.....

"ಏನು ಮಾಡ್ಯಾರು ಪಾಪ. ಗ್ವಾಡಿ ಮೊದಲಃ ಬಿರೀ ಬಿಟ್ಟು ನೀರು ಸಾಯಿತಿತ್ತಂತಲ್ಲ?"

"ಹ್ಯಾಂಗರಃ ಮಾಡಿ ಅದನ್ನ ಹಾಕಸಲಿಕ್ಕಂತೂ ಬೇಕಲ್ಲ ಈಗ. ಇನ್ನೂರು-ಮುನ್ನೂರು ರೂಪಾಯಿ ಖರ್ಚು ಮತ್ತಃ!"

"ಹೂಂ. ಹಿಡದಾವು ಮತ್ತ."

"ಸುಗ್ಗೀ ತಲೀಮ್ಯಾಲ ಆಗಿದ್ರ ಎಲ್ಲಾ ನಾನೂರು-ಐನೂರು ರೂಪಾಯಿ ಬರತಿದ್ವು. ಈಗ ತ್ರಾಸು ಬಂದಃದ....ನಿನ್ನ ಕಡೀಗೆ ಏನಾರಃ ಸಿಕ್ಕ್ಯಾವೇನು?"

"ನನ್ನ ಹತ್ತರ ಒಂದು ದಂಬ್ಡಿ ಬೇಕಂದ್ರ ಇಲ್ಲ."

"ಒಂದಃ ತಿಂಗಳು. ಆಮ್ಯಾಲೆ ನಿನ್ನ ರೊಕ್ಕಾ ನೀ ತಗೊಂಡು ಬಿಡು. ಬೇಕಾದರ, ಬಂದ ಜ್ವಾಳಾನೆಲ್ಲ ನಿನ್ನ ಮನೀಗೆ ಹೊರಸೋಣಂತ."

"ನಿಮ್ಮ ಜ್ವಾಳಾನೂ ಬ್ಯಾಡ; ನನ್ನಲ್ಲಿ ರೊಕ್ಕಾನೂ ಇಲ್ಲ."

ಗಂಗಾಸಾನಿಗೆ ಅದೇಕೋ ಸಿಟ್ಟುಬಂದಿದೆ ಎನಿಸಿತು ಶ್ರೀಕಂಠಶಾಸ್ತ್ರಿಗಳಿಗೆ. ಗಲ್ಲವನ್ನು ಕೆರೆಯುತ್ತ ಹೊರಗೆ ಹೋದರು.

ಶ್ರೀಕಂಠಶಾಸ್ತ್ರಿಗಳು ಪೂಜೆಗೆ ಹೋದಾಗ ಅವರ ಮನೆಗೆ ಹೋದಳು. ಅಲ್ಲಿಷ್ಟು ಇಲ್ಲಿಷ್ಟು ನಿಂತು ಬಿದ್ದ ಗೋಡೆಯನ್ನು ನೋಡಿಕೊಂಡಳು. ರಾಧಕ್ಕ ಸಣ್ಣಮೋರೆ ಮಾಡಿ ಎಂದರು:

"ನೋಡಿದೇನವ್ವ ಗಂಗಾಸಾನಿ ನನ್ನ ಸಂಸಾರಾನ? ಇಂಥಾದ್ರಾಗ ಮತ್ತ ಹುಣ್ಣಿವಿಗೆ ಯಾವದೋ ಇಲಾಖಸಾಹೇಬ್ರೋ, ಪಲಾಕಸಾಹೇಬ್ರೋ ಬರೋರಂತ. ಅವರ ಹೇಣತಿನ್ನ ಮನಿಯಾಗಃ ಇಳಿಸಿಕೊಂಬೋರಂತ. ಅವರಿಗೆ ಮೇಜವಾನಿ ಆಗೋದಂತ. ಮತ್ತ ನನ್ನ ಜೀವಕ್ಕ ಉರ್ಲು, ನಿನಗ ತ್ರಾಸು."

ಗಂಗಾಸಾನಿ ನಗುತ್ತಲೇ ಎಂದಳು: "ಸ್ವಭಾವಕ್ಕ ಏನು ಮಾಡೋದದ ರಾಧಕ್ಕ? ತಿದ್ದಲಿಕ್ಕೆ ಬ್ಯಾರೆ ಸಾಧ್ಯ ಅದಃನಃ? ಸಾಗೂದಃ ಹೀಂಗಃ."

"ನೀನಃ ಹ್ಯಾಂಗರಃ ಮಾಡಿ ನಮ್ಮ ಮನೀ ಭೆಟ್ಟಗ ಮಾಡು ನಮ್ಮವ್ವ. ನಿನಗ ಪುಣ್ಯಾ ಬರತಃದ. ಅವರೇನು? ಮತ್ತೆಲ್ಲೆರ ಕಿತಿಗೊಂಡು ಹೊಂಟ್ರೊ ಹೊಂಟ್ರಃ. ಕೂಸಿಗೆ ಅಂತ ನಮ್ಮ ಅಪ್ಪ ಮಾಡಿಸಿಕೊಟ್ಟ ಎರಡು ಬಿಂದ್ಲಿ ಅವಃ ನನ್ನ ಹತ್ರ. ದೀಡ ತೊಲಿ-ಎರಡು ತೊಲಿ ಆಗ

ಬಹುದು. ಅವನ್ನ ಎಲ್ಲ್ಯಾರಃ ಮಾರು ನೀನಃ. ಏನಾರಃ ಮಾಡಿ ಕಟ್ಟೋ ಕೆಲಸಾ ಸುರುವುಮಾಡಿಸು ನಮ್ಮವ್ವ."

ಗಂಗಾಸಾನಿಯ ಎದೆ ಕರಗಿತು. "ನೀವು ಸುಮ್ಮನೆ ಕೂಡ್ರಿ ರಾಧಕ್ಕ. ನಿಮ್ಮ ಹತ್ತರ ಭಂಗಾರ ಅದಃ ಅಂದ್ರ ಅವರು ಕಸಗೊಂಡುಬಿಟ್ಟಾರು. ಅವರಃ ಏನು ಮಾಡತಾರೋ ಮಾಡಲಿ. ನಾನೂ ಧಾರವಾಡಕ್ಕ ಹೋಗಿ, ಬರೋ ಹಣ ಎಷ್ಟು ಬರತಃದೋ ನೋಡತೇನಿ. ಏನಾರಃ ಮಾಡಬೇಕು ಮತ್ತ. ಕಣ್ಣೀಲೇ ನೋಡೋದು ಅದಃನಃ? ನಿಮ್ಮ ಮಾನಾ-ಮರ್ಯಾದಿ ಅಂದ್ರೂ ಒಂದಃ, ನನ್ನ ಮಾನಾ-ಮರ್ಯಾದಿ ಅಂದ್ರೂ ಒಂದಃ." ಎಂದಂದು ಗಂಗಾಸಾನಿ ಮನೆಗೆ ತೆರಳಿದಳು.

## ೨೭

ಇಲ್ಲಿಯ ವರೆಗೆ ಸುಭಗೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ರಾಮೂನಿಗೆ ಅವಳು ಗುಡಿಯ ಬದಿ ತನ್ನೊಡನೆ ನಡೆದ ರೀತಿ ಅನಿರೀಕ್ಷಿತ ಎನಿಸಿತು. ಅವಳ ಒಲುವು ತನ್ನ ಕಡೆಗೆ ಇರಲಿಕ್ಕಿಲ್ಲ ಎಂಬ ಕಲ್ಪನೆಯ ಒಂದು ಅಂಶವಾದರೂ ಅವನ ಮನಸ್ಸಿನಲ್ಲಿ ಮೂಡಿದ್ದರೆ ಈ ರೀತಿ ಧೈರ್ಯ ಮಾಡುತ್ತಿರಲಿಲ್ಲ. ಆದುದರಿಂದ ರಾಮೂ ಕಪಾಳಕ್ಕೆ ಏಟು ಬಿದ್ದೊಡನೆ ಧೈರ್ಯಗುಂದಿದ; ನಿರಾಶನಾದ. ಆವನಿಗೆ ಮರ್ಯಾದೆ ಹೋದಂತೆ ಎನಿಸಿತು. ಇನ್ನೊಂದು ಕ್ಷಣ ಸುಭಗೆ ಅಲ್ಲಿ ನಿಂತಿದ್ದರೆ, ಅವನು ಆಕೆಯ ಕ್ಷಮೆಯನ್ನೂ ಬೇಡಬಹುದಿತ್ತು. ಹೆಂಗಸಿನ ನೆಲೆ ತಿಳಿಯದು ಎನಿಸಿತವನಿಗೆ.

ರಾಮೂ ಆ ಘಟನೆಯ ತರುವಾಯ ನೆಟ್ಟಗೆ ತನ್ನ ಕೋಣೆಗೆ ಹೋದ. ತುಂಬ ಹೊದ್ದುಕೊಂಡು ಮಲಗಿ ಬಿಟ್ಟ. ಮಧ್ಯಾಹ್ನದಿಂದಲೇ ಸ್ವಲ್ಪ ತಲೆ ಹೊಡೆಯುತ್ತಿದ್ದಿತು; ಕಣ್ಣು ಉರಿಯುತಿದ್ದವು. ಮನಸ್ಸಿನ ಅಶಾಂತಿಯ ಮೂಲಕ ದೇಹದ ಸ್ವಾಸ್ಥ್ಯ ಇನ್ನಷ್ಟು ಕೆಟ್ಟು ರಾಮೂನಿಗೆ ರಾತ್ರಿ ಸ್ವಲ್ಪ ಜ್ವರ ಬಂದವು.

ಮಳೆಯಿಂದ ಅರ್ಧ, ರಾಮೂನ ಅಸ್ವಾಸ್ಥ್ಯದಿಂದ ಅರ್ಧ, ಅಂದು ನಾಟಕದ ತಾಲೀಮು ಆಗಲಿಲ್ಲ. ಸಂಗಪ್ಪನೂ ಶೀನೂನೂ ರಾಮೂನ

ಕೋಣೆಯಲ್ಲಿಯೇ ಮಲಗಿಕೊಂಡರು. ರಾಮೂ ನೆರಳಿದಾಗೆಲ್ಲ ಸಂಗಪ್ಪ ತಲೆಯೊತ್ತುತ್ತಲಿದ್ದ; ಶೀನೂ ಕಾಫಿಯನ್ನು ಮಾಡಿಕೊಡುತಲಿದ್ದ. ಇಡಿಯ ರಾತ್ರಿ ರಾಮೂ ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಮನಸ್ಸನ್ನು ಆ ಘಟನೆಯಿಂದ ಬೇರೆ ಕಡೆಗೆ ತಿರುಹದಾದ. ತಲೆ ಇನ್ನೂ ಕಾಯಿತು. ಅದರ ಫಲವಾಗಿ ದೇಹವೂ ಹೆಚ್ಚು ಕಾಯಿತು. ಕಳವಳಿಸಿದ; ಹಾಸಿಗೆಯ ತುಂಬ ಹೊಯ್ದಾಡಿದ; ಕನವರಿಸಿದ. ಜ್ವರ ನಿಂತ ಕೂಡಲೇ ಆ ಊರಿನಿಂದ ತೊಲಗಿ ಹೋಗುವದಾಗಿ ನಿಶ್ಚಯಿಸಿಕೊಂಡ.

* * * *

ಅತ್ತ ಸುಭಗೆಯ ಮನಸ್ಸಿನಲ್ಲಿಯೂ ಬಿರುಗಾಳಿ ಬೀಸುತ್ತಿತ್ತು. ಗುಡಿಯಿಂದ ಮನೆಗೆ ಹೋಗಿ ಊಟಕ್ಕೆ ಕುಳಿತಾಗ ಊಟ ರುಚಿಸಲಿಲ್ಲ. ಹೇಗೋ ಹೇಗೊ ಕೆಲಸ ಮುಗಿಸಿ ಹಾಸಿಗೆ ಹಿಡಿದಳು. ಮುಸುಕು ಹಾಕುವದೊಂದೇ ತಡ, ಎರಡೂ ಕಣ್ಣುಗಳು ನೀರಿನ ಒರತೆಯಾದವು.

ಮಧ್ಯಾಹ್ನದಲ್ಲಿಯೇ ಗಂಗಾಸಾನಿ ಆಕೆಯ ತಲೆಯನ್ನು ಸಾಕಷ್ಟು ಕೆಡಿಸಿದ್ದಳು; ಎದೆಯೊಡಸಿದ್ದಳು. ಹರೆಯದ ಗಂಡಸಿನೊಡನೆ ತೀರ ಸಲಿಗೆಯಿಂದ ವರ್ತಿಸುವದು— ಅದರಲ್ಲಿಯೂ ಸುಭಗೆಯಂಥ ಹರೆಯದ ಚಲುವೆಯಾದ ವಿಧವೆ ರಾಮೂನೊಡನೆ ಆ ರೀತಿ ಸಲಿಗೆಯಿಂದ ಇರುವದು—ಹಿತಕರವಲ್ಲವೆಂದೂ ಜನರಲ್ಲಿ ಸುಮ್ಮನೆ ಸಂಶಯಕ್ಕೆ ಆಸ್ಪದ ಕೊಡಬಹುದೆಂದೂ ಒಂದಿದ್ದರೆ ಹತ್ತು ಮಾಡಿ ಕತೆ ಕಟ್ಟುವ ಕುಂಟಲಗಿತ್ತಿಯರಿಗೇನೂ ಆ ಬೆಟ್ಟದಲ್ಲಿ ಕೊರತೆ ಇರಲಿಲ್ಲವೆಂದೂ ಗಂಗಾಸಾನಿ ಮಧ್ಯಾಹ್ನದಲ್ಲಿ ಸೌಮ್ಯ ರೀತಿಯಿಂದ ಪರ್ಯಾಯದಿಂದ ಎಚ್ಚರಿಕೆ ಕೊಟ್ಟಿದ್ದಳು. ಇಬ್ಬರ ನಡುವೆ ಈ ವಿಷಯದಲ್ಲಿ ವಾದ-ವಿವಾದವಾಗಿತ್ತು. ಗಂಗಾಸಾನಿ ಕಡೆಗೆ ಸ್ವಲ್ಪ ನಿಷ್ಠುರಳೂ ಆಗಿದ್ದಳು. ಸುಭಗೆ ಮಧ್ಯಾಹ್ನದಲ್ಲಿಯೇ ಸಾಕಷ್ಟು ಕಣ್ಣೀರಿಟ್ಟಿದ್ದಳು. ರಾಮೂನೊಡನೆ ಸಲಿಗೆ ಕಡಿಮೆ ಮಾಡಬೇಕೆಂದೂ ಮಾತಾಡುವದನ್ನೂ ಬಿಟ್ಟುಬಿಡಬೇಕೆಂದೂ ನಿಶ್ಚಯಿಸಿಕೊಂಡಿದ್ದಳು. ಅವಳು ಈ ಬಗೆಯ ಮಾನಸಿಕ ಪರಿಸ್ಥಿತಿಯಲ್ಲಿದ್ದಾಗ, ರಾಮೂ ಆ ತೆರದ ಧೈರ್ಯ ತೋರಿದುದು ಆಕೆಗೆ ಸರಿಬರಲಿಲ್ಲ. ಆದುದರಿಂದಲೇ ಅವಳು ಹಾಗೆ ಸಿಟ್ಟಿಗೆದ್ದಿದ್ದಳು.

ಈಗ ಆಕೆ ಪಶ್ಚಾತ್ತಾಪದಿಂದ ಬೇಯಹತ್ತಿದಳು. ತನ್ನ ಹೃದಯವನ್ನೇ ತಾನು ಪರೀಕ್ಷಿಸಿಕೊಳ್ಳಲು ಪ್ರಯತ್ನಿಸಿದಳು. ರಾಮೂನ ಆ ರೀತಿ ತನಗೆ ನಿಜವಾಗಿಯೂ ಸೇರಲಿಲ್ಲವೇ? ಆತ ಕೈ ಹಿಡಿದುದು ಅಂಜಿದ ಮನಸ್ಸಿಗೆ ಬೇಡವಾಗಿದ್ದರೂ, ಆಗ ಅರಳಿದ ಹೃದಯ ನಲಿಯುತ್ತಿದ್ದಿತೇಕೆ? ಅರೆಕ್ಷಣ ತಾನು ಜಗತ್ತನ್ನು ಮರೆತಿದ್ದುದೇಕೆ? ಮನಸ್ಸನ್ನೂ ಮೀರಿ ದೇಹ ಅವನೆಡೆ ಸರಿದುದೇಕೆ?........ ಹೀಗೆಯೇ ರಾತ್ರಿಯೆಲ್ಲ ವಿಚಾರಚಕ್ರವನ್ನು ತಿರುಗಿಸಿದಳು; ತೊಳಲಿದಳು; ತನ್ನನ್ನೇ ತಾನು ಬೈದುಕೊಂಡಳು, ತನ್ನ ಹೃದಯಾಂತರಾಳದ ಬಟ್ಟಬಯಲಿನಲ್ಲಿ. ಅಂದ-ಚಂದ ಜೇಡವೊಂದು ಚಿನ್ನದ ಎಳೆಯಿಂದ ಚಿತ್ರವಿಚಿತ್ರವಾದ ಜಾಲವನ್ನು ಆಕಸ್ಮಿಕವಾಗಿ ಕಟ್ಟುತ್ತಿದ್ದಾಗ, ತಾನಾಗಿಯೇ ಕಲ್ಲು ಎಸೆದು ಅದನ್ನು ಕೆಡಿಸಿದಂತೆ ಮಾಡಿದೆನಲ್ಲ---ಎಂದು ಚಡಪಡಿಸಿದಳು. ಜೀವನವೇ ಮತ್ತೆ ಹಾಳುಹಾಳು ಸುರಿಯಹತ್ತಿದಂತಾಯ್ತು. ಹಾಗೆ ಹೀಗೆ ಹೊರಳಾಡಿ ರಾತ್ರಿ ಕಳೆದಳು.

* * * *

ಶಂಕರಭಟ್ಟರು ಮುಂಜಾನೆ ರಾಮೂನ ಕೋಣೆಗೆ ಬಂದಾಗ ಜ್ವರ ಹಾಗೆಯೇ ಇದ್ದವು. ಕೈಹಿಡಿದು ನಾಡಿಯನ್ನು ನೋಡಿದರು. ತಂಡಿಯ ಜ್ವರವೆಂದು ನಿಶ್ಚಯಿಸಿ ತಾವು ತಂದ ಗುಳಿಗೆಯನ್ನು ನುಂಗಿಸಿದರು. ರಾಮೂ ಎಷ್ಟೇ ಬೇಡವೆಂದು ಹೇಳಿದರೂ ಹಟಹಿಡಿದು, ಅವನನ್ನು ಜುಲುಮೆಯಿಂದ ತಮ್ಮ ಮನೆಗೇ ಕರೆದುಕೊಂಡು ಹೋದರು. ಮಂಚದ ಮೇಲೆ ಗಾದಿಯನ್ನು ಹಾಸಿ, ಮಲಗಿಸಿ, ಬಿಸಿಬಿಸಿ ಕಾಫಿಯನ್ನು ಕುಡಿಸಿದರು.

ಸುಭಗೆ ನಡುಮನೆಯಲ್ಲಿ ಬಂದಿರಲೇ ಇಲ್ಲ.

ಶಂಕರಭಟ್ಟರು ಸ್ನಾನ-ಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ಮಧ್ಯಾಹ್ನ ಹನ್ನೆರಡರ ಸುಮಾರಿಗೆ ಗುಡಿಗೆ ಅಭಿಷೇಕಕ್ಕೆ ಹೋದರು. ಮನೆಯಲ್ಲಿ ಸುಭಗೆಯೇ ಸುಭಗೆ; ರಾಮೂನೆ ರಾಮೂ.

ಶಂಕರಭಟ್ಟರು ಗುಡಿಗೆ ಹೋಗಿ ಐದು ನಿಮಿಷಗಳಾಗಿರಲಿಕ್ಕಿಲ್ಲ; ಸುಭಗೆ ಮನೆಯ ಹೊರಗೆ ಬಂದಳು. ಆಕೆಯನ್ನು ನೋಡಿದೊಡನೆ ರಾಮೂ ಮುಖವನ್ನು ಗೋಡೆಯ ಕಡೆಗೆ ಹೊರಳಿಸಿದ. ಸುಭಗೆ ತುಳಸಿಯ ಕಟ್ಟೆಯ ಬಳಿ ನಿಂತು ಅತ್ತಿತ್ತ ನೋಡಿದಳು. ಯಾರೂ ಕಾಣಿಸಲಿಲ್ಲ. ಎಡಗೈಯ

ಹೆಬ್ಬೆರಳ ಉಗುರನ್ನು ಕಡಿಯುತ್ತ ಶೂನ್ಯದೃಷ್ಟಿಯನ್ನು ಅಚಲವಾಗಿ ಎದುರಿಗೆ ನಡಿಸಿ, ಧೇನಿಸಹತ್ತಿದಳು. ಸುತ್ತುಮುತ್ತಲಿನ ಸಮಾಜವನ್ನು ಕಡ್ಡಿಗಿಂತಲೂ ಗೀಳಾಗಿ ಕಾಣುವಂತೆ ಮುಖಚರ್ಯೆಯನ್ನು ಬದಲಿಸಿದಳು. ದೃಢನಿಶ್ಚಯದಿಂದ ಒಳಕ್ಕೆ ಹೋದಳು. ಮಂಚದ ಬಳಿ ನಿಂತು ಮೆಲ್ಲಗೆ ಕೇಳಿದಳು;

"ಜ್ವರಾ ಭಾಳ ಬಂದಾವೇನು ?"

ರಾಮೂ ಮಾತನಾಡಲಿಲ್ಲ.

"ನಿದ್ದಿ ಹತ್ತೇದ ?"

ರಾಮೂ ಮಿಸುಗಲಿಲ್ಲ.

ಆಕೆ ಅವನ ಭುಜವನ್ನು ಮುಟ್ಟಿ ಮೆಲ್ಲಗೆ ಅಲುಗಾಡಿಸಿದಳು.

ರಾಮೂ ಸುಭಗೆಯ ಕಡೆಗೆ ನೋಟ ತಿರುಹಿದ. ಜ್ವರದಿಂದ ಕೆಂಪೇರಿದ ಕಣ್ಣಳ ತುಂಬ ನೀರು ತುಂಬಿದ್ದವು. ತಲೆ ಮುಟ್ಟಿ ನೋಡಿದಳು; ಎದೆ ಮುಟ್ಟಿ ನೋಡಿದಳು; ಮೈ ಇನ್ನೂ ಕಾಯ್ದಿತ್ತು.

"ನಿನ್ನೆ ನಾನು ತಪ್ಪು ಮಾಡಿದೆ. ಮನಸಿನ್ಯಾಗ ನೆಟ್ಟಗಿದ್ದಿಲ್ಲ. ಮಧ್ಯಾಹ್ನದಾಗ ಗಂಗಕ್ಕ ಭಾಳ ಹೆದರಿಸಿದ್ದಳು. ಗುಡೀ ಮುಂದ ಜನಾ ನಿಂತಿತ್ತು. ನೀವು ಹಾಂಗ ಮಾಡಬಾರದಿತ್ತು. ನನ್ನ ಮ್ಯಾಲೆ ಸಿಟ್ಟಿಗೆದ್ದೀರೇನು ?"

ರಾಮೂನ ಮುಖ ಹಿಗ್ಗಿತು. ಸುಭಗೆಯ ಕೈಯನ್ನು ಹಿಡಿದು ಎದೆಯ ಮೇಲೆ ಇಟ್ಟುಕೊಂಡು ಅವಳ ಮುಖವನ್ನೇ ನೋಡಿದ. ಗಲ್ಲಗುಣಿಗಳಲ್ಲಿ ನಗೆ ತುಂಬಿಕೊಂಡಿತ್ತು. ಸುಭಗೆ ಗುಲಾಬಿಯ ನಂಜು ಏರಿದ ನೋಟದಿಂದ ಅವನ ನಗೆಯ ಸೊಬಗನ್ನೇ ನೋಡುತ್ತ ನಿಂತಾಗ ರಾಮೂ ತನ್ನ ಕಾಯ್ದ ಕೈಯನ್ನು ಸುಭಗೆಯ ಗಲ್ಲದಲ್ಲಿ ಇರಿಸಿದ. ಆಕೆ ನಾಚಿದಳು.

## ೨೮

ರಾಮೂನಿಗೆ ಜ್ವರದಿಂದ ಸಾವರಿಸಿಕೊಳ್ಳಲು ಬಹಳ ದಿನ ಹಿಡಿಯಲಿಲ್ಲ. ಅವನ ಹಳ್ಳಿಯ ಜೀವನ ಮತ್ತೆ ಮೊದಲಿನಂತೆ ಹರಿಯಹತ್ತಿತು.

ಒಮ್ಮೆ ರಾಮೂ ಬಿಸಿಲೇರಿದ ಮೇಲೆಯೇ ಶಂಭುಲಿಂಗನ ಬಾವಿಗೆ ಹೋಗಿದ್ದ. ಮನಸ್ಸು ಉಲ್ಲಸಿತವಿತ್ತು. ಧೋತರಗಳನ್ನು ಬಾವಿಯ ದಂಡೆಗೆ ಒಗೆದು ಅವುಗಳ ಮೇಲೆ ಸುಮ್ಮನೆ ಕುಳಿತುಕೊಂಡ. ಬಾವಿಯಲ್ಲಿ ನೀರು ತುಂಬ ತುಂಬಿತ್ತು. ಪ್ರಶಾಂತವಾಗಿತ್ತು. ಸುತ್ತಲು ನೋಡಿದ. ಮಾವಿನ ತೋಪು, ಗಿಡಗಂಟಿಗಳು, ಬಾವಿಯ ದಂಡೆಯ ಸುತ್ತಲಿನ ಕರಿಕೆ, ಆಚೆಯ ಹೊಲಗಳು, ಹೊಲದಲ್ಲಿಯ ಬೆಳೆ, ಎಲ್ಲೆಲ್ಲೂ ಹಚ್ಚಹಸಿರು. ಹಕ್ಕಿಗಳ ಕಿಲಿ ಕಿಲಿ ಸಪ್ಪಳ, ಮುಂಗಗಳ ಕಿರುಚುವ ದನಿ, ಇವುಗಳನ್ನುಳಿದು ಬೇರೆ ಸಪ್ಪಳ ಇರಲಿಲ್ಲ. ಬೇಸಿಗೆಯಾಗಿದ್ದರೆ ಬೆಟ್ಟದ ಸುತ್ತಲಿನ ಸಣ್ಣ ಪುಟ್ಟ ಕೆರೆ-ಕಟ್ಟೆಗಳು ಬತ್ತಿಹೋಗಿ, ಈ ಹೊತ್ತಿಗೆ ಒಗೆಯುವ ಜನರೆಲ್ಲ ಈ ಬಾವಿಯಲ್ಲಿಯೇ ತುಂಬಿಕೊಳ್ಳುತ್ತಿದ್ದರು. ವಾರದ ಹಿಂದಿನ ಮಳೆಯಿಂದ ಅವೆಲ್ಲ ತುಂಬಿಕೊಂಡಿದ್ದವಾದ್ದರಿಂದ, ಜನ ಇಷ್ಟು ದೂರ ಬರುವ ತೊಂದರೆ ತೆಗೆದುಕೊಂಡಿರಲಿಲ್ಲ. ಅಂತೆಯೇ ಬಾವಿ ನಿರ್ಜನವಾಗಿತ್ತು.

ಆತ ಕೂತಲ್ಲಿಯೇ ಧೇನಿಸುತ್ತ ಕುಳಿತು, ನೀರಿನಲ್ಲಿ ಹರಳುಗಳನ್ನೆಸೆದು ತೆರೆಯೆಬ್ಬಿಸಿದ. ಬಾವಿಯಲ್ಲಿ ಇಳಿಯುವ ಮನಸ್ಸು ಆಗಲಿಲ್ಲ.

ದಾರಿಯ ಕಡೆ ನೋಡಿದ. ಸುಭಗೆಯನ್ನು ಕಂಡ.

ಎಡದ ಬಗಲಲ್ಲಿ ಬರಿಗೊಡವನ್ನೊಂದನ್ನೂ ತಲೆಯ ಮೇಲೆ ಅರಿವೆಯ ಗಂಟನ್ನೂ ಇಟ್ಟುಕೊಂಡು ಬರುತ್ತಿದ್ದಳಾಕೆ. ಒಬ್ಬಳನ್ನೇ ಕಂಡ. ಎದೆ ಬಡಿಯಹತ್ತಿತು. ಕಣ್ಣುಗಳನ್ನು ಹಿಂದೆ ದೂರ ಓಡಿಸಿದ. ಗಂಗಾಸಾನಿ ಕಾಣಲಿಲ್ಲ. ಯಾವನೋ ಪರಸ್ಥಳದವನು ಹಣೆಯ ಮೇಲೆ ಭಂಡಾರ ಹಚ್ಚಿಕೊಂಡು, ಗೊಂಗಡಿಯ ಮೂಲೆಯ ಕುಂಚಿಗೆಯಲ್ಲಿ ತೆಂಗಿನಕಾಯಿಯ ಹೋಳಕೆಗಳನ್ನು ಹಾಕಿಕೊಂಡು ಊರಿಗೆ ಮರಳಿದ್ದ. ಮತ್ತೆ ಯಾರೂ ಇರಲಿಲ್ಲ.

ರಾಮೂ ಸುಭಗೆಯನ್ನು ನೋಡಿದ. ಬಿರಿಬಿರಿ ನೋಡಿದ. ಅವಳು ನಗುವ ವರೆಗೂ ನೋಡಿದ.

"ಯಾಕೋ ಒಬ್ಬರೇ ಇದ್ದೀರಿ ಇಪ್ಪೊತ್ತು? ಗಂಗಾಸಾನಿ ಬರಲಿಲ್ಲೇ?"

"ಇಲ್ಲ" ಎಂದು ತಲೆ ಹಾಕಿದಳು ಸುಭಗೆ. "ಧಾರವಾಡಕ್ಕ ಹೋದಳು ನಿನ್ನೆ. ಅನಕಾತಾ ಬರೋದಿಲ್ಲ."

ಸೀರೆಯ ಗಂಟನ್ನು ಕೆಳಗೆ ಒಗೆದು ಕೊಡವನ್ನು ಅಲ್ಲಿಯೇ ಇಟ್ಟಳು. ಬಾವಿಯ ಮೆಟ್ಟಿಲುಗಳ ಬದಿಗೆ ಸಾಲಾಗಿ ನೆಟ್ಟ ಅಡ್ಡಗಲ್ಲೊಂದಕ್ಕೆ ಆತು ಕೊಂಡು ನಿಂತಳು.

" ಧಾರವಾಡಕ್ಕ ಯಾಕ ಹೋಗ್ಯಾರೋ ? "

" ಆಕೀ ಮನೀ ಅದ ಅಲ್ಲಿ. ಬಾಡಿಗಿ ಬರತದ. ಅಲ್ಲೇ ಅವರ ಅಜ್ಜೀ ತಮ್ಮನ ಮನೀನೂ ಅದ. ಅಜ್ಜಿ ಭಾಳ ಹಣ್ಣು ಆಗ್ಯಾಳಂತ. ಆಕೀನ್ನ ನೋಡಿದಾಂಗ ಆತ್ಯು, ಬಾಡಿಗೀ ವಸೂಲು ಮಾಡಿದಾಂಗ ಆತ್ಯು ಅಂತ ಹೋಗ್ಯಾಳ. ವರುಷಕ್ಕೊಮ್ಮೆ ಈ ದಿನದಾಗ ಹೋಗತಿರತಾಳ. ಹತ್ತು-ಹದಿನೈದು ದಿನ ಇದ್ದು ಬರತಿರತಾಳ. "

" ಯಾಕs ನಿಂತ್ರಿ ಅಲ್ಲ. ಭಾವ್ಯಾಗ ಇಳೀರಿ ! "

" ನೀವು ಯಾಕ ಕೂತ್ರಿ ? "

" ಸುಮ್ಮಗs. "

" ನಾನೂ ಸುಮ್ಮನೇ ನಿಂತೆ ! "

ರಾಮೂ ಸುಭಗೆಯತ್ತ ಕಣ್ಣು ಪಿಳುಕಿಸದೇ ದಿಟ್ಟಿಸಿದ. ಆಕೆಯೂ ಹಾಗೇ ಮಾಡಿದಳು. ಇಬ್ಬರೂ ನಕ್ಕರು.

" ನೀವು ಕೂದಲಾ ಕಟ್ಟೋದಕಿಂತ, ಉದ್ದಕ ಹೆಗಲ ಮ್ಯಾಲೆ ಇಳಿ ಬಿಟ್ಟರ ಛಂದ. " ಎಂದ ರಾಮೂ.

ಸುಭಗೆ ಕೂದಲುಗಳನ್ನು ಉಚ್ಚಿ, ಹರವಿಕೊಂಡು, " ಹೀಂಗs ? " ಎಂದಳು. ಕೂದಲುಗಳು ತೊಡೆಯ ವರೆಗೆ ಬಂದವು. ಅವಳ ಚಲುವಿಕೆ ಯನ್ನು ಹೆಚ್ಚಿಸಿದವು. ರಾಮೂ ತನ್ನ ಕಣ್ಣುಗಳನ್ನು ಆಕೆಯಿಂದ ಕಿತ್ತದಾದ. ಅವನು ನೋಡಿದಂತೆ ಸುಭಗೆಯ ನಾಚಿಕೆ ಹೆಚ್ಚಿತು. ತಲೆ ಕೆಳಗೆ ಬಾಗಿಸಿದಳು.

ರಾಮೂ ಸುತ್ತಲೂ ನೋಡಿದ. ಯಾರೂ ಇರಲಿಲ್ಲ. ಹತ್ತಿರವೇ ದಟ್ಟ ವಾಗಿ ಬೆಳೆದ ಜೋಳದ ಬೆಳೆಯ ಕಡೆಗೆ ಹೋದ. ಸುಭಗೆಯ ಕಣ್ಣು ಅವನನ್ನೇ ಹಿಂಬಾಲಿಸಿದವು. ರಾಮೂ ಜೋಳದ ಬೆಳೆಯಲ್ಲಿ ನಿಂತು ತೊಗರಿಯ ಕಾಯಿಯನ್ನು ಹರಿದು ಸುಲಿದು ತಿನ್ನ ಹತ್ತಿದ. " ಸುಭಗಾ,

ತೊಗರೀಕಾಯಿ ಬೇಕೇನು ?" ಎಂದು ಬೆಳೆಯಲ್ಲಿ ಹೊಕ್ಕ. ಸುಭಗೆ ನಕ್ಕಳು ಮಾತ್ರ.

ಬೇಲಿಯಲ್ಲಿ ಮುಂಗಲಿ ಸಪ್ಪಳ ಮಾಡಿತು. ಸುಭಗೆ ಅತ್ತ ನೋಡಿದಳು. ಅದು ಒಂದೇ ಇರಲಿಲ್ಲ. ಇನ್ನೊಂದು ಮುಂಗಲಿ ಅದರೊಂದಿಗೇ ಓಡಿಹೋಯಿತು. ಶಿಬಿರದ ಕಲ್ಲಿನ ಬೋದಿನಲ್ಲಿ ಗುಬ್ಬಿಯೊಂದು ಚಿಂವ್ ಗುಟ್ಟಿತು. ಸುಭಗೆಯ ದೃಷ್ಟಿ ಅತ್ತ ಹೊರಳಿತು. ಅದೂ ಒಂದೇ ಇರಲಿಲ್ಲ; ಇನ್ನೊಂದರೊಡನೆ ಚಿನ್ನಾಟವಾಡುತಿತ್ತು. ಆಕೆಯ ಚಿತ್ತ ನಿಂತಲ್ಲಿಯೇ ನಿಲ್ಲಲಿಲ್ಲ; ಅತ್ತ ಬಾವಿಯಿಂದಾಚೆಗೆ ಹೊನ್ನರಿಕೆಯ ಗಿಡದ ಕಡೆಗೆ ಹೋಯಿತು. ಗಿಡತುಂಬ ಹೂವು ಬಿಟ್ಟಿತ್ತು. ಗುಂಗೆಯ ಹುಳವೊಂದು ಹೂವಿನ ಮೇಲೆ ಕುಳಿತಿತ್ತು. ಸುಭಗೆ ಮನದಲ್ಲಿಯೇ 'ಹೂವಿಗೆ ಸಹ ಜತೆ ಅದಃ ಅಲ್ಲಾ!' ಎಂದು ನಕ್ಕಳು.

ಆಕೆ ಮತ್ತೆ ಜೋಳದ ಬೆಳೆಯ ಕಡೆಗೆ ನೋಡಿದಳು. ರಾಮೂ ಕಾಣಲಿಲ್ಲ. ಬೆಳೆ ತುಂಬ ಬೆಳೆದು 'ಮಲಮಲ' ಎನ್ನುತ್ತಿದ್ದಿತು. ಪ್ರತಿಯೊಂದು ದಂಟೂ ಆಳುದ್ದ ತಲೆಯೆತ್ತಿ ನಿಂತಿದ್ದಿತು. ಆ ತುದಿಯಿಂದ ಈ ತುದಿಯ ವರೆಗೆ—ಕಣ್ಣು ನಿಲುಕುವ ವರೆಗೂ—ಹಬ್ಬಿದ ಜೋಳದ ನೂರಾರು, ಸಾವಿರಾರು ದಂಟುಗಳಲ್ಲಿ ಒಂದೂ ತೆನೆಯಿಲ್ಲದೆ ಇರಲಿಲ್ಲ. 'ಹುಟ್ಟಿ ಬೆಳೆದು, ದೊಡ್ಡದಾದುದೆಲ್ಲ ನೂರಾರು ಮುತ್ತುಗಳಿಂದ ಕೂಡಿದ ಆ ತೆನೆಗಳ ಸಲುವಾಗಿ; ಹುಟ್ಟಿದುದು, ಬೆಳೆದುದು, ಇದೀಗ ಸಾರ್ಥಕವಾಯಿತು; ಇದೇ ಜೀವನ; ಇದೇ ಜೀವನದ ಧ್ಯೇಯ.' ಎಂದು ಸಂತುಷ್ಟಿಯಿಂದ ನಲಿಯುತಿರುವಂತೆ ಕಂಡವು ಸುಭಗೆಗೆ.

ತನ್ನ ಬಾಳನ್ನು ನೆನೆದು ಆಕೆಯ ಮನ ಮುದುಡಿತು. ತನ್ನಲ್ಲಿ ಜೋಳದ ದೇಟಿನಂತೆ ಪರಿಪೂರ್ಣವಾದ ಬೆಳವಣಿಗೆಯಿದೆ; ಹೊನ್ನರಿಕೆಯ ಹೂವಿನಂತೆ ಸೌಂದರ್ಯವಿದೆ. ಮುಂಗಲಿಯಂತೆ ಚುರುಕುತನವಿದೆ; ಗುಬ್ಬಿಯ ಸರಳತೆಯಿದೆ. ಆದರೂ ಅವೆಲ್ಲವುಗಳ ಜೀವನ ಸಾರ್ಥಕ; ತನ್ನ ಜೀವನ ನಿರರ್ಥಕ— ಎಂದು ಆಕೆ ಉಸಿರುಗರೆದಳು.

ಆಕೆ ದೃಷ್ಟಿಯನ್ನೊಮ್ಮೆ ಬೆಟ್ಟದ ಮೇಲಿನ ಮನೆಗಳ ಕಡೆಗೆ ಹೊರಳಿಸಿದಳು. ಎಂಥ ತಾರತಮ್ಯ! ಅದು ಮಾನವನಿರ್ಮಿತ ಸಮಾಜ. ಪೊಳ್ಳಾದ

ಕಟ್ಟುನಿಟ್ಟುಗಳು, ಉದಾತ್ತ ತತ್ವಗಳ ಮುಸುಕಿನಲ್ಲಿ ಅಡಗಿದ ಡಾಂಭಿಕತೆ, ಸ್ವಾರ್ಥ, ಮುಂತಾದವುಗಳ ತವರುಮನೆ ಅದು. ಇದೋ ಪ್ರಕೃತಿದೇವಿಯ ಸಮಾಜ. ಸ್ವಾತಂತ್ರ್ಯ, ನ್ಯಾಯ-ಸಮಾನತೆಗಳೇ ಈ ಸಮಾಜದ ನಿಯಮಾವಳಿ; ಗುಬ್ಬಿ ಗುಬ್ಬಿಯೊಡನೆ ಚಿನ್ನಾಟವಾಡುವವೂ, ಮುಂಗಲಿ ಮುಂಗಲಿಯನ್ನು ಬೆನ್ನಹತ್ತುವವೂ, ಗುಂಗಿ ಹೊನ್ನರಿಕೆಯನ್ನು ಮುತ್ತಿಡುವವೂ ಜೋಳ ಬೆಳೆದು ತೆನೆ ಮೂಡಿ ಒಂದು ಕಾಳು ಸಾವಿರ ಕಾಳಾಗುವದೂ ಇವೆಲ್ಲವೂ--ನಿಸರ್ಗದ ತ್ರಿಕಾಲಧರ್ಮ, ವಿಶ್ವಧರ್ಮ. ಆದರೆ ವಿಶ್ವದ ಒಂದು ಅಂಶವಾದ, ಪ್ರಕೃತಿಯ ಪ್ರತಿರೂಪವಾದ, ತಾನೊಬ್ಬಳೇ ಇದಕ್ಕೆ ಹೊರತೇ ? ಎಂದು ಆಕೆ ವಿಚಾರಿಸಿದಳು.

"ಸುಭಗಾ !" ಎಂದು ಬೆಳೆಯ ಅಂತರಾಳದಿಂದ ಧ್ವನಿ ಬಂತು. ಮರುಕ್ಷಣ ಜೋಳದ ನಿಲುವು ಆವಳನ್ನು ಜಿಟ್ಟದಿಂದ--ಮಾನವ ಸಮಾಜದಿಂದ—ಮರೆಮಾಡಿತು.

ಸುಭಗೆ ತಿರುಗಿ ಬೆಳೆಯಿಂದ ಹೊರಗೆ ಬರುವಾಗ ಸಾವಿರಾರು ತೆನೆಗಳು ಆಕೆಗೆ 'ಆ ಸಮಾಜದ ಬಳಿ ಮತ್ತೆ ಹೋಗಬೇಡ!' ಎಂದು ತಲೆಯಾಡಿಸಿದವು; ಪುಂಡಿಯು ಗಿಡದ ಟೊಂಗೆ ಸೆರಗನ್ನು ಹಿಡಿದು ಜಗ್ಗಿತು; ಹೀರಿಯ ಬಳ್ಳಿ ಕಾಲು ಹಿಡಿದು ಹೇಳಿತು. ಸುಭಗೆಗೆ ಆಗ ಇವುಗಳ ಅರ್ಥ ಆಗಲಿಲ್ಲ.

## ೨೯

ನಾಟಕವನ್ನು ಹಟ್ಟಿಯ ಹಬ್ಬದಲ್ಲಿಯೇ ಆಡಬೇಕೆಂದು ಇಚ್ಛೆಯಿದ್ದ ಮಾಸ್ತರರು, ಶಟ್ರ ಶಂಕ್ರೆಪ್ಪನವರು, ಮುಂತಾದವರಿಗೆ ಇಚ್ಛೆ ಈಡೇರದ್ದಕ್ಕೆ ಅಸಮಾಧಾನವಾಯಿತು. ಕಾರ್ತಿಕಮಾಸ ಮುಗಿದರೂ ತಯಾರಿ ಆಳವಿನಲ್ಲಿ ಬಾರದ್ದಕ್ಕೆ ಅವರು ನಾಟಕದ ಬಗ್ಗೆ ಉದಾಶೀನರಾಗಹತ್ತಿದರು ನಾಟಕದ ಉಳಿದ ಜನರಲ್ಲಿ ಮೊದಲಿನ ಎರಡುತಿಂಗಳು ಕಂಡುಬಂದ ಹುರುಪು ಮುಂದೆ ಕಾಣದಾಯಿತು. ರಾಮೂನು ಸಹ ಇತ್ತೀಚೆಗೆ ನಾಟಕದ ಬಗ್ಗೆ ಆಷ್ಟು ಉತ್ಸುಕತೆ ತೋರದೆ ಇದ್ದುದೂ ಔದಾಶೀನ್ಯವನ್ನು ವ್ಯಕ್ತಮಾಡುತ್ತಿ

ದುದೂ ಕಂಡುಬರಹತ್ತಿತು. ಎಷ್ಟೋ ಜನ ಸುಗ್ಗಿಯ ತಯಾರಿ ನಡೆಸಿದ್ದ ರಾದ್ದರಿಂದ, ಪ್ರತಿನಿತ್ಯ ಎಲ್ಲರೂ ನಾಟಕ ಕಲಿಯಲು ತಪ್ಪದೆ ಬರುವದಕ್ಕೂ ಅಡ-ತಡೆಯಾಮುದೊಂದು ನಾಟಕ ಕುಂಟುತ್ತ ನಡೆಯಲು ಬಲವಾದ ಕಾರಣವಾಗಿತ್ತು.

ನಾಟಕದ ಮಂದಗತಿಗೆ ಶ್ರೀಕಂಠಶಾಸ್ತ್ರಿಗಳೂ ಒಂದು ಬಗೆಯಿಂದ ಕಾರಣರಾಗಿದ್ದರು.

ಅವರು ಊರಿಗೆ ಬಂದಮೇಲೆ ಒಂದೆರಡು ದಿನ ಮೈ ಚಳಿ ಬಿಟ್ಟು ಓಡಾಡಿ ರಲಿಲ್ಲ. ಜನರು ತಮ್ಮ ಬಗೆಗೆ ಏನಾದರೂ ಗುಜುಗುಜು ಮಾತಾಡುವರೋ ಏನೋ ಎಂಬ ಕಸಿವಿಸಿಕೆಯಲ್ಲಿ ಇದ್ದರು. ಗಂಗಾಸಾನಿ ವಾರ ಎರಡು ವಾರ ತಮ್ಮೊಡನೆ ಬಿಗುವಿನಲ್ಲಿಯೇ ಇದ್ದುದು ಅವರ ಅಂಜಿಕೆಯನ್ನು ಹೆಚ್ಚಿಸಿದ್ದಿತು. ಆದರೆ ಆಕೆ ಯಾವ ವಿಷಯದ ಬಗ್ಗೆಯೂ ಏನೂ ಮಾತಾಡಲಿಲ್ಲವಾದ್ದ ರಿಂದಲೂ, ಅಲ್ಲೊಬ್ಬರು ಇಲ್ಲೊಬ್ಬರು ರಾಮೂ-ಸುಭಗೆಯರ ಸಲುಗೆಯ ಮಾತು-ಕತೆಗಳ ಬಗೆಗೆ ಉಪ್ಪು-ಕಾರ ಹಚ್ಚಿ ಹಾಸ್ಯ ಮಾಡುತ್ತಲಿದ್ದರಾದ್ದ ರಿಂದಲೂ ಶ್ರೀಕಂಠಶಾಸ್ತ್ರಿಗಳು ಮತ್ತೆ ಚಿಗಿತರು.

ಶಂಕರಭಟ್ಟರ ಮನೆಗೆ ತಿರುಗಿ ಹೆಜ್ಜೆಯನ್ನು ಸಹ ಇಡುವದನ್ನು ಬಿಟ್ಟು ಬಿಟ್ಟರು. ರಾಮೂ ಕಣ್ಣಿಗೆ ಬಿದ್ದಾಗ ಅವನನ್ನು ಕಣ್ಣು ಹೊರಳಿಸಿ ಕೆಕ್ಕರು ಗಣ್ಣಿನಿಂದ ನೋಡುತ್ತಿದ್ದರು. ತಮ್ಮ ಮತ್ತೂ ಅವನ ಸಂಬಂಧವಿಲ್ಲದಿದ್ದರೂ, ಅವನೊಡನೆ ಸಂಪರ್ಕ ಸಂಭಾಷಣೆಗಳೂ ಇಲ್ಲದಿದ್ದರೂ ಅವನನ್ನು ಕಂಡಾಗ ಅಸೂಯೆಭಾವನೆ ತೋರುತ್ತಿದ್ದರು. ಒಂದೆರಡು ಸಲ, ಸುಭಗೆ ತಮ್ಮನ್ನು ನೋಡಿದಾಗ ತಲೆ ಕೆಳಗೆ ಹಾಕುತ್ತಿದ್ದುದನ್ನೂ, ಮರುಕ್ಷಣ ರಾಮೂ ಹತ್ತಿರ ಹಾಯ್ದಾಗ ಅವನನ್ನು ಓರೆಗಣ್ಣಿನಿಂದ ನೋಡುತ್ತಿದ್ದುದನ್ನೂ, ಅವಳಿಗೆ ತಿಳಿಯ ದಂತೆ ಸೂಕ್ಷ್ಮವಾಗಿ ನಿರೀಕ್ಷಿಸಿ, ಮನಸ್ಸಿನಲ್ಲಿಯೇ ತಳಮಳಿಸುತ್ತಿದ್ದರು.

ಅವನು ದಿನಾಲು ತಪ್ಪದೆ ಬಾವಿಗೆ ಹೋಗುವದೂ, ಹತ್ತಿರ ಹೊಂಡ ಗಳಿದ್ದರೂ ಸುಭಗೆ ಅವನು ಹೋದ ಬಾವಿಗೇ ಒಗೆಯಲು ಹೋಗುವದೂ ಶ್ರೀಕಂಠಶಾಸ್ತ್ರಿಗಳ ಸಂಶಯ ಕೆರಳಿಸದೆ ಬಿಡಲಿಲ್ಲ. ಒಂದೆರಡು ಸಲ ಏನೂ ಕೆಲಸವಿಲ್ಲದೆ, ಶಂಭುಲಿಂಗನ ಬಾವಿಯ ಬಳಿ ಸುಳಿದಾಡಿದ್ದೂ ಆಗಿದ್ದಿತು. ಅವರೀರ್ವರ ಬಗ್ಗೆ ಶ್ರೀಕಂಠಶಾಸ್ತ್ರಿಗಳ ಕುತೂಹಲ ಹೆಚ್ಚಿದಂತೆ, ಮನಸ್ಸಿನ

ಅಸೂಯೆ ತಳಮಳ ಇಮ್ಮಡಿಸಿ ನೂರ್ಮಡಿಸಿ ರಾತ್ರಿ ಅವರ ನಿದ್ರೆಗೂ ಅಡ್ಡಿ ಬರುತ್ತಿದ್ದವಾದ್ದರಿಂದ, 'ಹೇಸಿ ಖೋಡಿಗಳು! ಹಾಳುಗುಂಡಿಯನ್ನು ಬೀಳಲಿ' ಎಂದು ಮನಸ್ಸನ್ನು ಬೇರೆ ಕಡೆಗೆ ತಿರುಹಲು ಪ್ರಯತ್ನಿಸುತ್ತಿದ್ದರು. ಆದರೂ ಆ ಅಸೂಯೆಯು ದ್ವೇಷದ ಬಣ್ಣ ತಾಳಿತು. ಅಂತೆಯೇ ಅವರು ಸುಮ್ಮನೆ ಕೂಡಲಿಲ್ಲ.

ಗವಳಿಗರ ಎಲ್ಲಮ್ಮ ತಮ್ಮ ಮನೆಗೆ ಹಾಲು ಕೊಡಲು ಬಂದಾಗ ಶ್ರೀಕಂಠಶಾಸ್ತ್ರಿಗಳು ಆಕೆಯನ್ನು ಕೂಡಿಸಿಗೊಂಡು ಆಕೆಗೆ ಅಂದರು: " ಎಲ್ಲಮ್ಮ, ನಾನು ನಿನಗೊಂದು ಮಾತು ಹೇಳೋದದ. ನಾನು ಸ್ಪಷ್ಟ ಮಾತಾಡತೇನಿ ಅಂತ ನನ್ನ ಮ್ಯಾಲೆ ಸಿಟ್ಟಿಗೇಳಬ್ಯಾಡಾ. ನಿನ್ನ ಮೊಮ್ಮಗ ಏನೋ ಆ ನಾಟಕಾ ಆಡೋ ಪಳಂಕರ ಸಹವಾಸಕ್ಕ ಬಿದ್ದಾನ ಅಂತ ಕೇಳೇನಿ. ಛಲೋ ಹುಡುಗ; ಶ್ಯಾಣ್ಯಾ ಇದ್ದಾನ, ಅಂಥಾ ಹುಡುಗನ್ನ ನೀನು ಅಡ್ಡದಾರಿಗೆ ಹಚ್ಚೇಯಲ್ಲ! ನಾಟಕಾ ಅಂದ್ರ, ಅದೊಂದು ಕೆಟ್ಟ ಚಟಾ ಇದ್ದಾಂಗ. ಅದರ ಹವ್ಯಾಸಕ್ಕ ಬಿದ್ದು ಎಂತೆಂಥಾ ಒಳ್ಳೇ ಹುಡುಗರು ಕೆಟ್ಟುಹೋಗ್ಯಾನ. ನಿನಗ ಇದು ಹ್ಯಾಂಗ ತಿಳಿಯೋದಿಲ್ಲ ಅಂತೇನಿ. ನನ್ನ ಮಾತು ಕೇಳಿ, ಆ ಹುಡುಗ್ಗ ಸಿಟ್ಟುಮಾಡಿ ಅಂಕಿತದಾಗ ಇಟುಗೋ. ಛೊಲೋ ಓದು ಅನ್ನು; ಪರೀಕ್ಷಾ ಪಾಸಾಗು ಅನ್ನು; ನಾನು ಏನಾರು ಖಟಪಿಟಿ ಮಾಡಿ ನೌಕರೀ ಕೊಡಸತೇನಿ. ಬಡಹುಡುಗ. ಮುಂದಕರು ಬಂದಾನು."

ಗವಳಿಗರ ಎಲ್ಲಮ್ಮನಿಗೆ ಮೊಮ್ಮಗ ನವಕರಿ ಮಾಡುವ ಆಸೆ ಹುಟ್ಟಿತು. ಮರುದಿನವೇ ಹುಡುಗನಿಗೆ ನಾಟಕದ ಮನೆಯು ಕಡೆಗೆ ಹೆಜ್ಜೆಯಿಕ್ಕಕೂಡ ದೆಂದು ಕಟ್ಟಪ್ಪಣೆ ಮಾಡಿದಳು. ಆಕೆ ರಾಮೂನಿಗೆ ಪುಕ್ಕಟೆ ಕೊಡುತಲಿದ್ದ ಹಾಲೂ ಅಂದಿನಿಂದಲೇ ನಿಂತುಹೋಯಿತು.

* * * *

" ಏನು ನಡದದ ರಂಗೂಬಾಯಿಯವರೇ ? " ಎಂದು ಇನ್ನೊಮ್ಮೆ ಶ್ರೀಕಂಠಶಾಸ್ತ್ರಿಗಳು ಜೋಯಿಸರ ಶೀನೂನ ತಾಯಿಯನ್ನು ಕೇಳಿದರು.

" ಬರ್ರಿ. ಯಾಕೋ ಸವಾರಿ ಇತ್ತಲಾಗ ಬಂದಿತ್ತು ? "

" ಏನೂ ಇಲ್ಲ. ನಿಮಗ ಒಂದು ವಿಷಯಾ ಹೇಳೋದಿತ್ತು."

" ಏನದು ? "

" ನಿಮ್ಮ ಶೀನೂಗ ನೀವು ಭಾಳ ಸಲಗೀ ಕೊಟ್ಟಂಗ ಕಾಣಸತsದ? "

" ಯಾಕs ? "

" ಅಲ್ಲರೀ, ತಾನು ಯಾವ ಜಾತಿಯಾವಾ, ಯಾವ ಮನಿತನದಾಗ ಹುಟ್ಯಾನ, ತನ್ನ ಉದ್ಯೋಗ ಏನು, ಅಂಬೋದರ ಕಲ್ಪನಾನs ಇಲ್ಲ ಅಲ್ರಿ ಅವನಿಗೆ ? ಅದೇನೋ ನಾಟಕಂತ ಸಾಟಗಾ. ಅಲ್ರೀ, ಬಣ್ಣಾ ಬಡಕೊಂಡು ಜ್ಯಾತಿಗಾರ ಹಂಗ ಕುಣಿಯೋದು ನಮ್ಮ ಬ್ರಾಂಬರ ಜ್ಯಾತಿಗೆ ಒಗ್ಗತs ದೇನ್ರಿ? ಆ ಹಿಂಡು ಹೊಲೆಯರ ಜೋಡಿ ಚಹಾ ಕುಡಿಯೋದು ಸ್ವಾಮಿಗಳ ಕಿವಿಗೆ ಬಿದ್ರ ಇಂವಗ ಬಹಿಷ್ಕಾರಾ ಹಾಕ್ಯಾರು ಬಹಿಷ್ಕಾರಾ! ಅಂವಾ ಒಬ್ಬ ಶಂಕರಭಟ್ಟ, ಗಡ್ಡಾ ಮೀಸಿ ಬೆಳ್ಳಗಾದರೂ ಬುದ್ಧಿ ಬರಲಿಲ್ಲ ಇನ್ನೂ! ಮನಿಯಾಗ ಹರೇದ ಮಗಳನ್ನ ಇಟಗೊಂಡು, ಹಿಂಡು ಹೊಲೆಯ ರಿಗೆ ಬೆಳತನಕ ಥಾಂದಲೆ ಹಾಕಲಿಕ್ಕೆ ಅವಕಾಶ ಕೊಟ್ಟಾನ. ಅಂವಾ ಯಾವನೋ ಒಬ್ಬ ಬಂದಾನಲ್ಲ—ಲಫಂಗಾ—ಆತನ ದಾಸಾನುದಾಸ ಆಗಿ ಅವನ ಮನೀಗೆ ನೀರು ಹೊರಬೇಕೇನ್ರಿ ಇಂವಾ? ಥೂ ನಮ್ಮ ಊರ ಪರಿಸ್ಥಿತಿ ಕೆಟ್ಟುಹೋಗೇದ. ನಿಮ್ಮ ಯಜಮಾನ್ರು ಇದ್ದಿದ್ರ ಇಂಥಾದೆಲ್ಲ ಸಹನ ಆಗತಿತ್ರೇ ಅವರಿಗೆ ? ಒಂದs ಉಸರಿಗೇ ನಿಮ್ಮ ಮಗನ ಜೀವಾ ತೆಗೀತಿದ್ರು. ಒಟ್ಟಿಗೇನ್ರಿ? ನೀವು ಅವನ್ನ ಅಂಕಿತದಾಗ ತೊಗೊಂಡ್ರಿ ಅಂದ್ರ ಅಂವಾ ದಾರಿಗೆ ಬರತಾನ; ನಿಮ್ಮ ಮನಿತನದ ಅಬ್ರು ಉಳೀತsದ. ಇಲ್ಲದೇ ಇದ್ರ, ನೀವು ಅವನ ಆಶಾ ಬಿಡೋದs. "

ರಂಗೂಬಾಯಿಯವರು ಗಾಬರಿಯಾದರು. ಮೊದಲಿಸಿಂದ ಬಡತನ ಸೋಸಿದ ಅವರು ಶೀನೂನಲ್ಲಿಯೇ ವಿಶ್ವಾಸವಿಟ್ಟುಕೊಂಡು ಕುಳಿತಿದ್ದರು. ಸುಭಗೆಯ ಬಗೆಗೆ ಮಂದಿ ಏನೇನೋ ಮಾತಾಡುತ್ತಿದ್ದುದು ಅವರ ಕಿವಿಗೆ ಬಿದ್ದಿತ್ತು. ಶೀನೂನನ್ನು ಇಲ್ಲಿ ಇಟ್ಟುಕೊಳ್ಳುವದೇ ಬೇಡವೆಂದೂ ಆತನ ಸೋದರಮಾವನಲ್ಲಿಗೆ ದಾಟಿಹಾಕಿಬಿಡಬೇಕೆಂದೂ ನಿಶ್ಚಯಿಸಿಕೊಂಡರು.

* * * *

ಶ್ರೀಕಂಠಶಾಸ್ತ್ರಿಗಳು ಇಷ್ಟಕ್ಕೇ ಸುಮ್ಮನೆ ಕೂಡಲಿಲ್ಲ. ದೇವಸ್ಥಾನದ ಪಂಚಕಮೀಟಿಯ ಅಧ್ಯಕ್ಷರಿಗೆ ಭೆಟ್ಟಿಯಾದರು. ಭಕ್ತಜನರ ಸಲುವಾಗಿ

ಕಟ್ಟಿಸಿದ ಧರ್ಮಶಾಲೆಯ ಕೋಣೆಯನ್ನು ಬಾಡಿಗೆಯಿಲ್ಲದೇ ಆರುತಿಂಗಳ ಗಟ್ಟಲೇ ಒಬ್ಬ ಲಫಂಗ ಹುಡಗನಿಗೆ ಇರಲು ಕೊಟ್ಟದ್ದು 'ಬೆ-ೀಕಾಯಿದೇಶೀರ' ಆಗುವದೆಂದೂ ಅವನನ್ನು ಬಿಡಿಸದಿದ್ದರೆ, ತಾವು ದೇವಸ್ಥಾನದ 'ಅರ್ಚಕ' ಎಂಬ 'ನಾತೆ'ಯಿಂದ ಮೇಲಿನವರಿಗೆ ಅರ್ಜೀ ಮಾಡುವ ಪ್ರಸಂಗ ಬರಬಹುದೆಂದೂ ಅವರಿಗೆ ತಿಳಿಸಿದರು. ಶ್ರೀಕಂಠಶಾಸ್ತ್ರಿಗಳ ಸ್ವಭಾವವನ್ನು ಅರಿತ ಅವರು ಇಲ್ಲದ ಗೊಂದಲವೇ ಬೇಡವೆಂದು ದೇವ ಸ್ಥಾನದ ಆಡಳತೆಗಾರರಿಗೆ ಆ ಕೋಣೆಯನ್ನು ತಿರುಗಿ ತಮ್ಮ ವಶಕ್ಕೆ ತೆಗೆದು ಕೊಳ್ಳಲು ಹೇಳಿದರು. ಅಧ್ಯಕ್ಷರ ಅಪ್ಪಣೆಯ ಮೇರೆಗೆ, ಆಡಳತೆಗಾರರು ರಾಮೂನಿಗೆ ಹದಿನೈದು ದಿನಗಳಲ್ಲಿ ಧರ್ಮಶಾಲೆಯ ಕೋಣೆಯನ್ನು ತೆರವು ಮಾಡಲು ಹೇಳಿದರು.

* * * *

ಮತ್ತೊಂದು ದಿನ ಶ್ರೀಕಂಠಶಾಸ್ತ್ರಿಗಳು ಮುಂಜಾನೆ ಎದ್ದ ಕೂಡಲೇ ಅಂಗಿ-ರುಮಾಲಗಳನ್ನು ಹಾಕಿಕೊಂಡು ಕಾಲಲ್ಲಿ ಪುಣೆಯ ಮೊಚ್ಚೆಗಳನ್ನು ಧರಿಸಿ, ಬಡಿಗೆಯನ್ನು ತಿರುವುತ್ತ ಸಾಲೆಗೆ ಹೊರಟರು. ಏಳೂವರೆಯಾಗಿತ್ತು. ಹುಡುಗರು ಸಾಲೆಯ ಬಾಗಿಲ ಮುಂದೆ ಸಾಲಾಗಿ ನಿಂತು ಕೈಕಟ್ಟಿ ಒಟ್ಟಾಗಿ ಗಟ್ಟಿಯಾಗಿ ಒಬ್ಬೊಬ್ಬರು ಒಂದೊಂದರಂತೆ ಏಳೂಸ್ವರಗಳಲ್ಲಿ "ಉದಯ ವಾಗಲಿ." ಎಂದು ಪ್ರಾರ್ಥನೆಯ ಹಾಡನ್ನು ಹೇಳಹತ್ತಿದರು.

ಶ್ರೀಕಂಠಶಾಸ್ತ್ರಿಗಳು ನೇರವಾಗಿ ಒಳಗೆ ಹೋದರು. ಮಾಸ್ತರರು ಕಾಣಲಿಲ್ಲ. ಪ್ರಾರ್ಥನೆಯನ್ನು ತಪ್ಪಿಸಿ ಒಳಗೆ ಹುರಕಡ್ಲಿಯನ್ನು ತಿನ್ನುತ್ತ ಕುಳಿತ ಒಬ್ಬ ಹುಡುಗನನ್ನು "ಮಾಸ್ತರರು ಎಲ್ಲೋ?" ಎಂದು ವಿಚಾರಿಸಿ ದರು. ಉಳಿದ ಹುಡುಗರು ಒಳಗೆ ಬರುವದರಲ್ಲಿಯೇ ಎಲ್ಲ ಕಡಲೆಯನ್ನು ಮುಗಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಆ ಹುಡುಗ ಬಾಯಿತುಂಬ ತುಂಬಿ ಕೊಂಡಿದ್ದನಾದ್ದರಿಂದ ಅವನಿಗೆ ಮಾತಾಡಲು ಬರಲಿಲ್ಲ. ಆ ಹುಡುಗ ಬಾಗಿಲು ಮುಂದಕ್ಕೆ ಮಾಡಿದ ಕೋಣೆಯ ಕಡೆಗೆ ಬೊಟ್ಟುಮಾಡಿದ.

ಶ್ರೀಕಂಠಶಾಸ್ತ್ರಿಗಳು "ಮಾಸ್ತರಃ?" ಎಂದು ಒದರಿದರು. ಕಾರದ ಮಂಡಕ್ಕಿಯನ್ನು ತಿಂದು ಚಹವನ್ನುಕುಡಿಯುತ್ತಿದ್ದ ಮಾಸ್ತರರು ಬಾಯಿ

ಚಪ್ಪರಿಸುತ್ತ ತುಟಿಗೆ ಹತ್ತಿದ ಕಾರದ ಮೇಲೆ ಕೈಯಾಡಿಸಿ ಕೋಟಿಗೆ ಒರಸಿ ಕೊಂಡು ಗಡಬಿಡಿಯಿಂದ ಹೊರಗೆ ಬಂದರು.

"ಹುಡುಗರು ಯಾಕೋ ಬಂದಿಲ್ಲಲ್ಲ, ಎಂಟು ಹೊಡೀಲಿಕ್ಕೆ ಬಂತು? ಹೀಂಗs ಕಾಣಸತsದ ನೀವೂ! ಸಾಲೀ ಕಸಾ ಎಷ್ಟು ದಿನದ ಹಿಂದ ಹೊಡೆಸೀರಿ?" ಎಂದು ಕೆಳಗೆ ಸೂರೆಯಾಗಿದ್ದ ಬಟಗಡಲೆಯ ಸಿಪ್ಪೆ ಯೊಂದರ ಮೇಲೆ ಬಡಿಗೆಯನ್ನು ಊರಿದರು.

ಮಾಸ್ತರರು ಮಾತಾಡಲಿಲ್ಲ. ಬಲಗೈಯಿಂದ ಎಡಗೈಯ ಬೆರಳು ಗಳನ್ನು ಮುರಿಯುತ್ತ ದೇಶಾವರೀ ನಗೆ ನಕ್ಕರು ಮಾತ್ರ.

"ಹುಡುಗರನೆಲ್ಲಾ ಕರೀರಿ ಒಳಗೆ." ಎಂದು ಶ್ರೀಕಂಠಶಾಸ್ತ್ರಿಗಳು ತಾವು ಸಾಲೆಯ ಪಂಚರಿರುವರೆಂಬ ದರ್ಪದಿಂದ ಅಪ್ಪಣೆಮಾಡಿದರು.

ಹುಡುಗರು ಬಂದರು; ತಮ್ಮ ತಮ್ಮ ಸ್ಥಳಗಳಲ್ಲಿ ಮೌನವಾಗಿ ಕುಳಿ ತರು; ಒಬ್ಬರನ್ನೊಬ್ಬರು ನೋಡುತ್ತ ಗುಜುಗುಜು ಮಾತಿಗೆ ಸುರುವು ಮಾಡಿದರು.

ಶ್ರೀಕಂಠಶಾಸ್ತ್ರಿಗಳು ಕೋಲನ್ನು ತಿರುವುತ್ತ ಗೋಡೆಗಳ ಮೇಲಿನ ನಾಣ್ನುಡಿಗಳನ್ನು ಓದುತ್ತ ನಿಂತರು. ಮಾಸ್ತರರು ಸಾಲೆಯ ಪಂಚರಿ ಗಾಗಿಯೇ ಕಾಯ್ದಿಟ್ಟ ಎಲ್ಲ ವಿನಯವನ್ನೂ ವೆಚ್ಚಮಾಡಿ, "ಖುರ್ಚಿ ವ್ಯಾಗ ಕುಂತಗೊಳ್ರಿ ಶಾಸ್ತ್ರಿಗಳs" ಎಂದರು. ಖುರ್ಚಿಯ ಮೇಲೆ ಫಳ ವನ್ನು ಒರೆಸುವ ಅರಿವೆ ಬಿದ್ದಿದುದನ್ನು ಶ್ರೀಕಂಠಶಾಸ್ತ್ರಿಗಳು ನೋಡಿರಲಿಲ್ಲ; ಮಾಸ್ತರರ ಲಕ್ಷ್ಯಕ್ಕೂ ಬಂದಿರಲಿಲ್ಲ. ಅವರು ಅರಿವೆಯ ಮೇಲೆಯೇ ಕುಳಿತು ಕೊಂಡರು.

ತತ್‌ಕ್ಷಣ ಹುಡುಗರೆಲ್ಲ 'ಖೊಳ್' ಎಂದು ನಕ್ಕರು. ನಗೆಯ ಕಾರಣ ಅವರೀರ್ವರಿಗೂ ತಿಳಿಯಲಿಲ್ಲ. ಶಾಸ್ತ್ರಿಗಳು ಕಣ್ಣು ತೆಗೆದರು. ಮಾಸ್ತರರು ಹುಚ್ಚರಾದರು.

"ಇವರು ಎಷ್ಟನೇ ಎತ್ತಾದೋರು?"

"ಒಂದನೇ ಎತ್ತಾದೋರ್ರಿ."

"ಇವರು?"

" ಆ ಕಂಬದ ತನಕಾ ಎರಡನೇ ಎತ್ತಾ. ಮುಂದಿನವರು ಮೂರನೇ ಎತ್ತಾದೋರು. ಆ ಹುಡುಗಾ ನಾಲ್ಕನೇ ಎತ್ತಾದವಾ. "

"ಎರಡನೇತ್ತಾದೋರು ಎದ್ದು ನಿಂದರ್ರಿ, ತವ್ಮಾ. ಮಾಸ್ತರಃ ಖಡೂ ತರ್ರಿ, ಇಲ್ಲೆ." ಎಂದು ಶಾಸ್ತ್ರಿಗಳು ಫಳದ ಕಡೆಗೆ ನಡೆದರು. ಫಳವೊರೆಸುವ ಅರಿವೆಗೆ ಅಂಟಿದ ಖಡುವಿನ ಹುಡಿಯೆಲ್ಲ ಶಾಸ್ತ್ರಿಗಳ ಕರಿಯ ಕೋಟಿಗೆ ಬಳಿದು ಕೊಂಡುದನ್ನು ನೋಡಿ ಹುಡುಗರೆಲ್ಲ ಮತ್ತೊಮ್ಮೆ ನಗೆಯ ಸುರಿಮಳೆ ಗರೆದರು.

" ಈ ಹುಡುಗರಿಗೆ ಹುಚ್ಚುಗಿಚ್ಚು ಹಿಡಿದದೇನ್ರಿ ? ಸುಮ್ಮಸುಮ್ಮನೇ ನಗತಾವಲ್ಲ! ಶಿಸ್ತು ಅಂಬೂದಃ ಇಲ್ಲೇನು ಇವಕ್ಕ ?" ಎಂದು ಶಾಸ್ತ್ರಿಗಳು ಗದ್ದರಿಸಿ ಫಳದ ಬಳಿ ಬಂದು ನಿಂತರು ; ಖಡುವಿನ ಸಲುವಾಗಿ ಕೈಮುಂದೆ ಮಾಡಿದರು. ಮಾಸ್ತರ ಮುಖ ಕಪ್ಪಿಟ್ಟು ಹುಡುಗರ ಕಡೆಗೆ ಮೋರೆದಿರುಹಿ ಗದ್ದರಿಸಿದರು. ಕಿಸೆಯಲ್ಲಿ 'ಚಾಕ್-ಪೀಸು'ಗಳನ್ನು ಇಟ್ಟುಕೊಂಡುದು ನೆನೆಪಿಗೆ ಬಂತು. ಹುಡುಗರ ಕಡೆಗೇ ಮುಖಮಾಡಿ 'ಚಾಕ್-ಪೀಸು' ಎಂಬ ಭಾವನೆ ಯಿಂದ ಸಿಗರೇಟನ್ನು ಕಿಸೆಯ ಹೊರಗೆ ತೆಗೆದರು.

ಹುಡುಗರು ಬಿದ್ದು ಬಿದ್ದು ನಕ್ಕರು.

" ಏನು ಮಾಸ್ತರಃ ನೀವು ಸಿಗರೇಟಿನಿಂದ ಬರೀತೀರೇನು ? ಭೊಲೋ ಅದ. " ಎಂದು ಹೀಯಾಳಿಸಿದರು. ಮಾಸ್ತರರಿಗೆ ತಮ್ಮ ಗಡಿಬಿಡಿಯಿಂದಾದ ತಪ್ಪು ಹೊಳೆದು, ಲಗುಬಗೆಯಿಂದ ಎಡಕಿಸೆಯಲ್ಲಿಯ ' ಚಾಕನ್ನು' ತೆಗೆದು ಕೊಟ್ಟರು. "ತಪ್ಪಾಯ್ತು. ತಿಳೀದಃ ಹಾಂಗ ಮಾಡಿದೆ." ಎಂದು ದೀನತೆಯ ಅವತಾರವೇ ಆಗಿ ಕೈ ಜೋಡಿಸಿದರು.

" ಹುಡುಗರಿಗೂ ಕಲಿಸತಿರಬಹುದು, ಸಿಗರೇಟು ಸೇದಲಿಕ್ಕೆ. ಅಲ್ರೇ?" ಎಂದು ಸಿಡುಕಿನಿಂದ ಕೇಳಿದರು ಶಾಸ್ತ್ರಿಗಳು.

ಮಾಸ್ತರರು ಮಾತಾಡಲಿಲ್ಲ.

ಶಾಸ್ತ್ರಿಗಳು ಫಳದ ಮೇಲೆ ಪ್ರಯಾಸದಿಂದ ' ತಂಬಿಟ್ಟು' ' ಮುಂಡಕ್ಕಿ' ಎಂದು ಬರೆದು ಮೂರನೆಯ ವರ್ಗದ ಬಾಲಕರಿಗೆ ಓದಲು ಹೇಳಿದರು. ಆ ಹುಡುಗರಲ್ಲಿ ಇಬ್ಬರು ' ಮುಂ-ಮುಂ-ಮುಂಡ-ಮುಂಡ-ಕ್ಕಿ-ಮುಂಡಕ್ಕಿ ' ಎಂದು ಓದಿ ಬೆವರು ಸುರಿಸಿದರು.

ಶಾಸ್ತ್ರಿಗಳು ಸಿಟ್ಟಿನಿಂದಲೇ ' ವ್ಹಿಜಿಟ್ ' ಬುಕ್ಕನ್ನು ತೆಗೆದುಕೊಂಡು, " ಸಾಲೆಯು ಕೆಟ್ಟುಹೋಗಿದೆ. ಹುಡುಗರು ಸಾಲೆಗೆ ಬರುವದಿಲ್ಲ. ಅವರಲ್ಲಿ ಶಿಸ್ತು ಇಲ್ಲ. ಸ್ವಚ್ಛತೆಯಿಲ್ಲ. ಓದಲಿಕ್ಕೆ ಬರುವದಿಲ್ಲ. ಮಾಸ್ತರರು ಸಿಗರೇಟು ಮುಂತಾದ ವ್ಯಸನಗಳಿಗೆ ಬಿದ್ದಿದ್ದಾರೆ. ಊರಲ್ಲಿ ಆಟ-ನಾಟಕಗಳಿಗೆ ಲಕ್ಷ್ಯ ಹಾಕಿ ಸಾಲೆಯ ಪರಿಸ್ಥಿತಿಯನ್ನು ಕೆಡಿಸಿದ್ದಾರೆ. ಇವರನ್ನು ಈಗಲೇ ಬೇರೆ ಕಡೆಗೆ ವರ್ಗ ಮಾಡಬೇಕು. ಇಲ್ಲವಾದರೆ ಮುಖ್ಯ ಮಂತ್ರಿಗಳ ಕಡೆಗೆ ಅರ್ಜಿ ಮಾಡಲಾಗುವದು " ಎಂದು ಬರೆದರು. ಇಷ್ಟೆಲ್ಲ ಮಾಡಿ ಕಡೆಗೆ ತಮ್ಮ ಸಹಿಯ ಕೆಳಗೆ ' ಸ್ಕೂಲ ಪಂಚ ' ಎಂದು ಬರೆಯುವದರ ಬದಲು ಅವಸರದಲ್ಲಿ ' ಸ್ಕೂಲ ಚಂಪ ' ಎಂದು ಬರೆದು ಹೊರಟುಹೋದರು.

ಮನೆಗೆ ಹೋಗುವಾಗ " ಇಂವಾ ಒಬ್ಬ ಹೋಗಿಬಿಟ್ರೆ, ನಾಟಕಾ ಮೂಲಿಗುಂಪು ಆಗತಽದ. " ಎಂದು ಅಂದುಕೊಂಡರು.

## ೩೦

ಗಂಗಾಸಾನಿ ಧಾರವಾಡಕ್ಕೆ ಹೋಗುವದರಲ್ಲಿಯೇ ಆಕೆಯ ಅಜ್ಜಿ— ಹಣ್ಣುಹಣ್ಣು ಮುದಕಿ — ಆಗಲೇ ನೆಲಹಿಡಿದಿದ್ದಳು. ಆದುದರಿಂದ ತಿಂಗಳುಗಟ್ಟಲೇ ಗಂಗಾಸಾನಿ ಅಜ್ಜಿಯ ಚಾಕರಿಯಲ್ಲಿಯೇ ಕಳೆಯಬೇಕಾಯಿತು. ಏನು ಮಾಡಿದರೂ ಮುದುಕಿಯನ್ನು ಉಳಿಸಿಕೊಳ್ಳುವದಾಗಲಿಲ್ಲ. ಇದರಿಂದುಂಟಾದ ದುಃಖವನ್ನು ಸಾವರಿಸಿಕೊಂಡು, ಮನೆಯ ಸಂಬಂಧಿ ಬರಬೇಕಾದ ಬಾಡಿಗೆಯನ್ನೆಲ್ಲ ಒಳ್ಳೆಯ ಮಾತಿನಿಂದಲೇ ಜಗ್ಗಿಕೊಂಡು, ತಿರುಗಿ ಬೆಟ್ಟಕ್ಕೆ ಬರಬೇಕಾದರೆ, ಆಕೆಗೆ ಮೂರು ತಿಂಗಳೇ ಹಿಡಿಯಿತು. ಶ್ರೀಕಂಠಶಾಸ್ತ್ರಿಗಳ ಸ್ವಭಾವ-ಯೋಗ್ಯತೆಗಳನ್ನು ಬಲ್ಲ ಆಕೆಗೆ, ಅವರ ಮನೆಯ ದುರಸ್ತಿಯು ಇಂದಿಲ್ಲ ನಾಳೆ ತನ್ನ ಪಾಲಿಗೇ ಕಟ್ಟಿಟ್ಟದ್ದು ಎಂದು ತಿಳಿದಿತ್ತು. ಅಂತೆಯೇ ಆಕೆ ಬ್ಯಾಂಕಿನಲ್ಲಿದ್ದ ಹಣದಲ್ಲಿ ಕೆಲವೊಂದನ್ನೂ ತೆಗೆದುಕೊಂಡು ಶಂಭುಲಿಂಗನ ಬೆಟ್ಟಕ್ಕೆ ತೆರಳಿದಳು.

ಗಂಗಾಸಾನಿ ದಾರಿಯಲ್ಲಿ ಸಂಗಪ್ಪನನ್ನು ಭೆಟ್ಟಿಯಾದಳು.

" ಈಗ ಬಂತೇನು ಗಂಗವ್ವನೋರ ಸವಾರಿ ? ಯಾಕಽ ಭಾಳ ದಿನಾ ಹಿಡದಿದ್ರಿ ಧಾರವಾಡಾನಽ ? " ಎಂದ ಆತ.

" ಹೊನಪ, ಕೆಲಸ ಮುಗೀಬೇಕಲ್ಲ. ಮತ್ತೇನು ಸಂಗಪ್ಪ, ಊರ ಸಮಾಚಾರ ? ನಿನ್ನ ನಾಟಕಾ ಎಲ್ಲಿಗೆ ಬಂತು ? " ಎಂದಳು ಆಕೆ.

ಸಂಗಪ್ಪ ಬೊಟ್ಟುಗಳನ್ನು ಬಾಯಿಗೆ ಹಿಡಿದು ಎಲೆಯಡಿಕೆಯ ಉಗುಳನ್ನು ಉಗುಳಿ ಅಂದ: "ನಾಟಕರೇ? ಏನು ನಾಟಕ ಏಳ್ರಿ, ಯಾಕೋ ಕುಂಟಾಕಹತ್ತ್ಯೇತಿ. ಮ್ಯಾಳಾ ಸಜ್ಜು ಕೂಡಾಕಽ ಒಲ್ದು. "

" ಯಾಕೋ, ಏನಾತ್ಯು ? ಒಳ್ಳೇ ಜೋರಿನಿಂದ ಸಾಗಿತ್ತಲ್ಲಾ ? "

" ನಮ್ಮೊಳಗಽ ತಾಳ ಇಲ್ಲ ಬಿಡ್ರೀ. ಶೀನಣ್ಣಂದು ಮುಖ್ಯ ಪಾರ್ಟು ಇತ್ತು. ಅವರ ಅವ್ವಾವರು ರಂಬಾಟಾ ಮಾಡಿ ಆತನ್ನ ಬಿಡಿಸಿಬಿಟ್ರು. ಮಾಸ್ತರಿಗೇನಽ ಮ್ಯಾಲಿನಿಂದ ಜವಾಬು ಕೇಳ್ಯಾರಂತಽ ; ಅವರೂ ಹೆದರಿ ಮನಸರೀ ಮಾಡ್ಯಾರ. ತಿಂಗಳು-ದೀಡತಿಂಗಳು ಲಾಗಾಯಿತು ರಾಮಣ್ಣೋರೂ ಯಾಕೋ ಸಬ್ಬರಿ ಆಗಿ, ಮನಸರಿಮಾಡಾಕ ಹತ್ತ್ಯಾರ. ಆದ್ರಾಗ ಹುಣ್ಣಿವ ಮ್ಯಾಗ ಬರೀ ಕೊಟ್ಟಾಂಗ ದೇವಸ್ತಾನದೋರು ಮನೀ ಬಿಡಿಸ್ಯಾರ. ಈಗ ಅವ್ರು ಊರ ಹೊರಗಿನ ಬಂಗ್ಲೇದಾಗ ಇರಾಕಹತ್ತ್ಯಾರ. ಏನಽ ಅನ್ರಿ, ಗಂಗೌನರ, ನಮ್ಮ ಊರ ಜನಾ ಒಣಾ ಕಿತಿಬೀದು ಬಿಡ್ರೀ. "

" ಅದ್ಯಾಕೋ ? "

ಸಂಗಪ್ಪ ಅತ್ತ ಇತ್ತ ನೋಡಿದ. " ಪಾಪ, ಸುಭಗವ್ವಗ ಹೆಸರು ಇಡಾಕ ಹತ್ತೈತಿರಿ ಈ ಕುಂಟಲಗಿತ್ತೀ ಅಂತಾ ಜನಾ. ಎಲ್ಲೆಲ್ಲಿ ನೋಡಿದರೂ ಗುಜುಗುಜು — ರಾಮಣ್ಣಾರಿಗೂ ಸುಭಗೌವ್ವಗೂ ಸಂಬಂದ ಅಂತ. ತಾವೇನೋ, ತಮ್ಮ ಮನಿಯೇನೋ, ಹರಹರಾ ಶಿವಶಿವಾ ಅಂತಾ ಕುಂದ್ರ ಬಾರದಽ. ತಮ್ಮ ಎಲಿಯ್ಯಾಗಽ ಕತ್ತಿ ಸತ್ತು ಬಿದ್ದಿರತೈತಿ ; ಮಂದೀ ಎಲಿಯಾನ್ನ ನೊಣಾ ಜಾಡಸಾಕ ಹೋಗತಾರ. ನಮಗ ಇಂತಾವೆಲ್ಲಾ ಸೇರೋದಿಲ್ಲ ನೋಡ್ರಿ. "

ಗಂಗಾಸಾನಿ ಸಂಗಪ್ಪನ ಮಾತು ಕೇಳಿ ಚಕಿತಳಾದಳು. ' ಹೊಂ, ಹಿಂಗೇನು ? ' ಎಂದು ಅಲ್ಲಿ ಹೆಚ್ಚು ನಿಲ್ಲದೇ ಮುಂದೆ ಸಾಗಿದಳು.

ಗಂಗಾಸಾನಿಯು ತಲೆಯಲ್ಲಿ ಇಲ್ಲಿಯ ವರೆಗೆ ಸುಳಿದಾಡುತ್ತಿದ್ದ ಧಾರ

ವಾಡದ ಸಮಾಚಾರವಾಗಲೀ ಶ್ರೀಕಂಠಶಾಸ್ತ್ರಿಗಳ ಬಿದ್ದ ಗೋಡೆಯ ವಿಷಯದ ವಿಚಾರವಾಗಲೀ ಒಮ್ಮೆಲೇ ಹಾರಿಹೋದವು. ಅವಳ ಮನವು ಸುಭಗೆಯ ಬಗೆಗೇ ವಿಚಾರಿಸಹತ್ತಿತು. ಸುಭಗೆಯ ಸ್ವಭಾವವನ್ನೂ ಆಕೆಯ ಮನೆತನದ ಇತಿಹಾಸವನ್ನೂ ಚನ್ನಾಗಿ ಬಲ್ಲ ಆಕೆಗೆ ಸಂಗಪ್ಪನ ಮಾತಿನಲ್ಲಿ ಮೊದ ಮೊದಲು ನಂಬಿಗೆಯಾಗಲಿಲ್ಲ. ಅವನು ಹುಟ್ಟಿಸಿಗೊಂಡು ಮಾತಾಡುವ ಯೋಗ್ಯತೆಯುವನಲ್ಲವೆಂಬುದೂ ಆಕೆಗೆ ಗೊತ್ತಿತ್ತು. ಆದುದರಿಂದ ಅವನನ್ನು ನಂಬದೆ ಇರುವದೂ ಆಗಲಿಲ್ಲ. ಜನ ಆಡಿಕೊಳ್ಳುವದಕ್ಕೆ ಏನಾದರೂ ಆಧಾರ ಇರಬಹುದೇ? ರಾಮೂ-ಸುಭಗೆಯರ ಸಲಿಗೆ ಎದ್ದು ಕಾಣುವಂತೆ ಇತ್ತೆಂಬುದು ಹಿಂದೆ ತನಗೆ ತಿಳಿದೊಡನೆ ತಾನು ಸುಭಗೆಗೆ ನಿಷ್ಠುರತೆಯಿಂದಲೇ ಎಚ್ಚರಿಕೆ ಕೊಟ್ಟಿದ್ದುದೂ ನೆನಪಿನಲ್ಲಿತ್ತು. ಎಂದೂ ತನ್ನ ಮೇಲೆ ಸಿಟ್ಟಿಗೇಳದ ಸುಭಗೆ ಅಂದು ತನ್ನ ಮೇಲೆ ಹರಿಹಾಯ್ದಿದ್ದುದರ ಹಿನ್ನೆಲೆಯಲ್ಲಿ ಸಂಶಯಾಸ್ಪದ ಮನೋವೃತ್ತಿಯೇನಾದರೂ ಇದ್ದಿದ್ದೀತೇ? ಎಂದು ಆಕೆಯ ತಲೆಯಲ್ಲಿ ಬರಹತ್ತಿತು. ಇದರಲ್ಲಿ ಅಸಂಭವನೀಯವಾದರೂ ಏನು? ಬೆಳೆದ ಹುಡುಗೆ; ಚಲುವೆ; ಸಶಕ್ತಳು. ಸತ್ತ ಗಂಡನ ಬಗೆಗೆ ಚಿಂತೆ ಮೂಡದಷ್ಟು, ಮೂಡಿದರೂ ಬಹುಕಾಲ ಮನಸ್ಸಿನಲ್ಲಿ ಹಿಡಿಯುವ ಶಕ್ತಿ ಇಲ್ಲದಷ್ಟು, ಎಳೆಯದಾದ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡಾಕೆ; ನವಯೌವನದ ಮೋಹಕ ರೂಪದ ಸಾನಿಧ್ಯದಲ್ಲಿ ಇದ್ದಾಕೆ; ತಾರುಣ್ಯದ ತಿರುಗಣಿಯ ಮಡುವಿನಲ್ಲಿ ಸಿಕ್ಕಾಕೆ. ಇಂಥ ಪರಿಸ್ಥಿತಿಯಲ್ಲಿದ್ದ ಸುಭಗೆ ಒಂದು ವೇಳೆ ಈ ದೆಸೆಯಲ್ಲಿ ನಡೆದಿದ್ದರೆ ಅದರಲ್ಲಿ ಆಶ್ಚರ್ಯವಾದರೂ ಏನು? ಗಂಗಾಸಾನಿಗೀಗ ತನ್ನ ಯೌವನದ ನೆನಪು ಬಂತು. ಈ ನೆನಪು ಇಂಥ ಪರಿಸ್ಥಿತಿಯನ್ನು ಹಿಡಿತದಲ್ಲಿ ತರುವದು ಎಂಥ ಕಠಿಣ ಕೆಲಸ ಎಂಬುದರ ಕಲ್ಪನೆಯನ್ನು ಅವಳ ತಲೆಯಲ್ಲಿ ತಂದಿತು. ಆಕೆಯಲ್ಲಿ ಸುಭಗೆಯ ಬಗೆಗೆ ಮೂಡಹತ್ತಿದ ತಿರಸ್ಕಾರ ಮಾಯವಾಗಿ ಸಹಾನುಭೂತಿ ತಲೆದೋರಿತು. ಮನೆ ಮುಟ್ಟಿದಾಗ, "ಯಾರು ಬಲ್ಲರು? ಇದೆಲ್ಲ ಚೇಷ್ಟೆಖೋರರ ಹಾರಿಕೆಯ ಸುದ್ದಿಯ ನಾಗಾಲೋಟವೂ ಇರಬಹುದು!" ಎಂದು ಸಮಾಧಾನವನ್ನೂ ಹಚ್ಚಿಕೊಂಡಳು.

ಗಂಗಾಸಾನಿ ಬಂದುದು ಸುಭಗೆಗೆ ತಿಳಿದಿದ್ದರೂ ಆಕೆಯನ್ನು ಭೆಟ್ಟಿಯಾಗಲಿಲ್ಲ. ಗಂಗಾಸಾನಿಗೆ ಇದೊಂದು ಹೊಸ ಅನುಭವ. ತನ್ನನ್ನು ಒಂದು ದಿನವೂ ಬಿಟ್ಟು ಇರದೇ ಬೆಳೆದಾಕೆ ಮೂರು ತಿಂಗಳು ತನ್ನಿಂದ ಅಗಲಿ ಇದ್ದರೂ ಈ ದಿನ ಕಣ್ಣು ತಪ್ಪಿಸಿ ಕೂತಳು ಹೇಗೆ ಎಂದು ಆಶ್ಚರ್ಯ ವಾಯಿತವಳಿಗೆ. ಮೈಯಲ್ಲಿ ಸ್ವಾಸ್ಥ್ಯವಿರಲಿಕ್ಕಿಲ್ಲವೇ ? ಎಂದು ಅನುಮಾನಿಸಿದಳು. ತಾನೇ ಸುಭಗೆಯ ಮನೆಗೆ ಹೋದಳು.

ಶಂಕರಭಟ್ಟರು ಮನೆಯಲ್ಲಿ ಇರಲಿಲ್ಲ. ಮುಂಜಾನೆ ಎಂಟುಗಂಟೆಯಾಗಿದ್ದರೂ ಸುಭಗೆ ಹಾಸಿಗೆಯಿಂದ ಎದ್ದಿರಲಿಲ್ಲ. ನಿದ್ದೆಯನ್ನೂ ಮಾಡುತ್ತಿರಲಿಲ್ಲ. ಗಂಭೀರಮುದ್ರೆಯಿಂದ ಏನನ್ನೋ ಧೇನಿಸುತ್ತಿದ್ದಳು.

ಗಂಗಾಸಾನಿಯನ್ನು ಕಂಡೊಡನೆ ಸುಭಗೆ ಎದ್ದು ಕುಳಿತಳು. 'ಬಾ ಎಂದಳು. ಕೂಡಲು ಹೇಳಿದಳು. ಆದರೂ ತನ್ನ ವಿಚಾರದಿಂದ ಹೊರಗೆ ಬಂದಂತೆ ಕಾಣಲಿಲ್ಲ. ಆಕೆಯ ಮಾತಿನಲ್ಲಿ ಹಿಂದಿನ ಸಲಿಗೆ ಇರಲಿಲ್ಲ. ಸರಳತೆಯೂ ಕಾಣಲಿಲ್ಲ. ಅವಳ ಸ್ವಾಭಾವಿಕವಾದ ನಗೆಯಂತೂ ಒಮ್ಮೆಯೂ ತಲೆದೋರಲಿಲ್ಲ.

ಗಂಗಾಸಾನಿ ಸುಭಗೆಯನ್ನು ಅಡಿಯಿಂದ ಮುಡಿಯುವರಗೆ ನೋಡಿದಳು ಮುಖವು ಆಯಾಸದಿಂದಲೋ, ಚಿಂತೆಯಿಂದಲೋ ಬೇಜಾರದಿಂದಲೋ—ಯಾಕೋ ಏನೋ—ಮ್ಲಾನವಾಗಿತ್ತು. ಆದರೂ ಅಂಗಾಂಗದಲ್ಲಿ ಹೊಸತಾದ ಕಳೆ ಬಂದಿತ್ತು. ಆಕೆ ಹೆಚ್ಚು ಮಾತಾಡಲಿಲ್ಲ. ಹೆಚ್ಚು ಹೊತ್ತು ಅಲ್ಲಿ ನಿಲ್ಲಲಿಲ್ಲ. ಸುಭಗೆಯೂ ಆಕೆಗೆ ನಿಲ್ಲಲು ಜುಲುಮೆ ಮಾಡಲಿಲ್ಲ.

ಅಲ್ಲಿಂದ ನೇರವಾಗಿ ಗಂಗಾಸಾನಿ ರಾಧಕ್ಕನ ಕಡೆಗೆ ಹೋದಳು. ಅವರು ಒಬ್ಬರೇ ಇದ್ದರು. ಉಪಕಾರಣಿಗಳನ್ನು ತಿಕ್ಕುತ್ತಿದ್ದರು.

"ಧಾರವಾಡಾನ ಘಟ್ಟಿ ಹಿಡದಿದ್ದಲ್ಲ, ಗಂಗಾಸಾನಿ, ಯಾಕೋ ?" ಎಂದರು ಅವರು.

ಗಂಗಾಸಾನಿ ಇದಕ್ಕೆ ಉತ್ತರ ಕೊಡದೇ ಕೇಳಿದಳು :

"ಇವರು ಕಾಣೋದಿಲ್ಲ ? ಎಲ್ಲಿ ಹೋಗ್ಯಾರ ?"

" ಪೂಜೆಗೆ ಹೋಗ್ಯಾರ. ಕೂಡಲ್ಲ. ಸುಭಗಾನ ಭೆಟ್ಟಿ ಆಗಿತ್ತೇನು ? "

" ಹೂಂ. ಆಕೀ ಮನಿಯಿಂದನs ಬಂದೆ. ಮಲಗಿದ್ದಳು. ಮೈಯಾಗ ನೆಟ್ಟಗಿಲ್ಲ ಕಾಣತsದ. "

ರಾಧಕ್ಕ ನಕ್ಕರು. " ಕೂತಗೋಳs ನಿನಗ ಒಂದು ಮಾತು ಹೇಳೋದದ." ಎಂದು ಹುಣಸಿಯ ಹುಳಿಯ ಕೈ ತೊಳೆದುಕೊಂಡು ಬಾಗಿಲಲ್ಲಿ ಅತ್ತ ಇತ್ತ ನೋಡಿ ಬಂದರು. " ನಿನಗ ಈ ಸುದ್ದಿ ಗೊತ್ತು ಆಗೇದೇನು ? " ಎಂದರು.

ಗಂಗಾಸಾನಿಗೆ ಅವರ ಮಾತಿನ ಹೊಳವು ಹತ್ತಿತು. ಆದರೂ ' ಏನದು ? ' ಎಂದು ಕೇಳಿದಳು.

ರಾಧಕ್ಕ ಹಿಂದೆ ಮುಂದೆ ನೋಡಿದರು. ಆಮೇಲೆ ಮೆಲ್ಲಗೆ ಅಂದರು " ಸುಭಗಾ ಬಸರಿದ್ದಾಂಗ ಕಾಣತೂದ ! "

ರಾಧಕ್ಕ ಗಂಗಾಸಾನಿಯ ಮುಖ ನೋಡಿದರು. ಆಕೆ ಮಾತನಾಡಲಿಲ್ಲ. ಒಂದು ನಿಮಿಷ ನಿಶ್ಶಬ್ದ.

" ನನಗೂ ಆ ಸಂಶಯ ಬಂತು ಆಗಲೇ. ಮಂದಿಗೆ ಗೊತ್ತು ಆಗೇದೇನಿದು ? "

" ಮಂದಿ ಏನೇನೋ ಮಾತಾಡತಾರ. ಆದರ ಈ ಮಾತು ಭಾಳ ಜನರಿಗೆ ಗೊತ್ತಿರಲಿಕ್ಕಿಲ್ಲ. ಆಕಿ ಈಗ ಹೊರಗs ಬೀಳೋದಿಲ್ಲ. "

ಮತ್ತೆ ಇಬ್ಬರೂ ಸುಮ್ಮನೆ ಕುಳಿತರು.

" ಶಂಕರಭಟ್ಟರಿಗೆ ಏನಾರ ತಿಳದದೇನು ? " ಎಂದಳು ಗಂಗಾಸಾನಿ.

" ಥೂ, ಅವರ ಮಾರಿಗೆ ಬೆಂಕೀ ಹಚ್ಚಾ. ಅವರಿಗೆ ತಿಳವಳಿಕೆ ಇದ್ದಿದ್ರ ಇಷ್ಟೆಲ್ಲಾ ಯಾಕ ಆಗತಿತ್ತು ? ಜಗತ್ತೆಲ್ಲ ತಮ್ಮಂತೇನs ಅದs ಅಂತ ಸಾಗ್ಯಾರ ಅವರು. ಊರೆಲ್ಲಾ ಚಪ್ಪಾಳೀ ಬಡೀಲಿಕ್ಕೆ ಹತ್ತೇದ. ಆದರೂ ಎಲ್ಲಾ ಸುಸೂತ್ರ ನಡದsದ ಅಂತ ತಾಸುಗಟ್ಟಲೀ ಗುಡಿಯಾಗ ಮೂಗು ಹಿಡಕೊಂಡು ಕೂಡಲಿಕ್ಕೆ ಹತ್ಯಾರ. ನಾಟಕದ್ದೊಂದು ಹುಚ್ಚು ಹಿಡದು ಬಿಟ್ಟsದ ಆತ್ಯ. "

" ನಾನು ಮೊದಲs ಆಕಿಗೆ ಎಚ್ಚರಕೀ ಕೊಟ್ಟಿದ್ದೆ, ರಾಧಕ್ಕ. ಆಗ ಆಕಿ ಸುಮ್ಮನs ನನ್ನ ಮ್ಯಾಲೆ ಹರೀಹಾಯ್ದಳು. "

" ಮುಂದ ಗತಿ ? "

" ಗತೀ ಇಲ್ಲಾ, ಗಾತ್ರ ಇಲ್ಲ. "

ರಾಧಕ್ಕ ಒಂದು ಕ್ಷಣ ಸುಮ್ಮನೆ ಕುಳಿತು, ಆ ಮೇಲೆ ಸೂಚಿಸಿದರು: " ಔಷಧಾ ಕೊಡಿಸಿಬಿಟ್ರ ಹ್ಯಾಂಗ ? "

"ಛೂ, ಅದು ಸರಿಯಲ್ಲರೆವ್ವ. ಮಾಡಿದ ತಪ್ಪು ಮುಚಿಗೊಂಬೋದರ ದಸಿಂದ ಆ ತಪ್ಪಿಗೆ ಇನ್ನೊಂದು ತಪ್ಪು ಜೋಡಿಸಬಾರದು. ಮೊದಲಃ ಜಾರ ಬಾರದು, ಜ್ಯಾರಿದ ಮ್ಯಾಲೆ ಧೈರ್ಯದಿಂದ ಬಂದದ್ದನ್ನ ಎದರಿಸಬೇಕು. "

## ೩೨

ಮಧ್ಯಾಹ್ನದಲ್ಲಿ ಸುಭಗೆ ಮನೆಗೆ ಬರಬಹುದೆಂದು ದಾರಿ ನೋಡಿದಳು. ಆಕೆ ಅತ್ತ ಒಡಹಾಯಲಿಲ್ಲ. ಹೇಳಿಕಳಿಸಿದಳು. ಆದರೂ ಆಕೆ ಬರಲಿಲ್ಲ. ಗಂಗಾಸಾನಿಗೆ ಸಿಟ್ಟು ಬರಲಿಲ್ಲ. ಅವಳ ಬಗೆಗೆ ಇದ್ದ ಸಹಾನುಭೂತಿ ಆಕೆಯ ಪರಿಸ್ಥಿತಿಯ ಅರಿವನ್ನು ಮಾಡಿಕೊಟ್ಟಿತು. ತಾನೇ ಆಕೆಯ ಮನೆಗೆ ಹೋದಳು.

ಶಂಕರಭಟ್ಟರು ಆದೇ ಊಟ ಮುಗಿಸಿಕೊಂಡು ಕೈಯಲ್ಲಿ ಭಗವದ್ಗೀತೆ ಯನ್ನು ಹಿಡಿದುಕೊಂಡು ಗುಡಿಯ ಕಡೆಗೆ ಸಾಗಿದ್ದರು. ಸುಭಗೆ ಏನು ಮಾಡುತ್ತಿರುವಳೆಂಬುದನ್ನು ವಿಚಾರಿಸಿದಾಗ, ಆಕೆ ಒಳಗೆ ಇರುವದಾಗಿ ಹೇಳಿ ಅವರು ಹೊರಟುಬಿಟ್ಟರು. ಶಂಕರಭಟ್ಟರ ಸರಳತೆ, ಪರಿಸ್ಥಿತಿಯ ಅಜ್ಞಾನ, ನಿಶ್ಚಿಂತೆ, ಮುಂತಾದವುಗಳನ್ನು ನೋಡಿ 'ಅಯ್ಯೋ ಪಾಪ!' ಎಂದು ಕನಿಕರಬಟ್ಟಳು.

" ಕರೀ ಕಳಿಸಿದರ ಬರಬಾರದೇನೇ, ಸುಭಗಾ ? "

" ಕೆಲಸ ಇತ್ತು ಗಂಗಕ್ಕಾ. ಇಷ್ಟಾಗಿ ಮೈಯಾಗೂ ನೆಟ್ಟಗೆ ಇದ್ದಿಲ್ಲ. " ಎನ್ನುತ್ತ ಸುಭಗೆ ಮನಸ್ಸಿಲ್ಲದೇ ಹೊರಗೆ ಬಂದಳು.

ಸುಭಗೆಯ ತಲೆಕೂದಲು ಹರವಿದ್ದಿತು. ಮುಖ ಸಪ್ಪಗೆ ಇತ್ತು ಗಂಗಾಸಾನಿ ಬೋದಿಸಲ್ಲಿಯ ಹಣಿಗೆಯನ್ನು ತೆಗೆದುಕೊಂಡು ಸುಭಗೆಯನು

ಮುಂದೆ ಕೂಡಿಸಿಕೊಂಡು ಹಿಕ್ಕಿ ಹೆರಳು ಹಾಕಿದಳು. ಈ ಕೆಲಸ ಸಾಗಿದಾಗ ಇಬ್ಬರೂ ಏನೂ ಮಾತಾಡಲಿಲ್ಲ. ಆಮೇಲೆ ಗಂಗಾಸಾನಿ ಕೇಳಿದಳು: "ಯಾಕಽ ಮಾರಿ ಸಪ್ಪಗ ಆದಽ ಅಲ್ಲಾ?"

"ಊಟಾ ಮಾಡಿಲ್ಲ."

ಅವರು ಮತ್ತೆ ಸುಮ್ಮನೆ ಕುಳಿತರು.

ಗಂಗಾಸಾನಿ ಸುಭಗೆಯ ಹಸ್ತವನ್ನು ತನ್ನ ಹಸ್ತದಲ್ಲಿ ಹಿಡಿದುಕೊಂಡು ಅಚ್ಛೆಯಿಂದ ಅದನ್ನು ಬಡಿಯಹತ್ತಿದಳು.

"ಸುಭಗಾ, ಏನಾದರೂ ಮುಚ್ಚಿ ಇಟ್ಟುಗೊಳ್ಳಿಕ್ಕೆ ಹತ್ತೀ ಏನಽ ನನ್ನಿಂದ?" ಎಂದು ಗಂಗಾಸಾನಿ ನೇರವಾಗಿ ಪ್ರಶ್ನೆಮಾಡಿದಳು.

ಸುಭಗೆ ಸುಮ್ಮನಿದ್ದಳು.

"ಮಂದಿ ಏನೋ ಮಾತಾಡತಾರಲ್ಲ ನಿನ್ನ ಬಗ್ಗೆ. ನಿಜ ಏನು?"

ಸುಭಗೆಯ ಮುಖ ಹುಚ್ಚಿಟ್ಟಿತು.

"ಹೌದಽ?" ಗಂಗಾಸಾನಿ ಮತ್ತೆ ಕೇಳಿದಳು.

ಸುಭಗೆ ನಾಚಿಕೆಯಿಂದ ತಲೆ ಕೆಳಗೆ ಹಾಕಿದಳು.

"ಬೆಂಕೀ ಹತ್ತರ ಬೆಣ್ಣೀ ಇಟ್ಟರ, ಕರಗದಽ ಬಿಟ್ಟೀತೇನವ್ವ!"

ಸುಭಗೆ ತಗ್ಗಿಸಿದ ತಲೆಯನ್ನು ಮೇಲೆ ಎತ್ತಲಿಲ್ಲ. ಆಮೇಲೆ ಸುಭಗೆ ಬಾಯಿಬಿಟ್ಟಳು.

"ಸಿಟ್ಟು ಆಗೀಯೇನು ಗಂಗಕ್ಕ ನನ್ನ ಮ್ಯಾಲೆ?"

ಅವಳ ಬಾಯಿಯಿಂದ ಶಬ್ದ ಹೊರಡುವ ಮುನ್ನವೇ ಕಣ್ಣಿನಿಂದ ನೀರು ಹೊರಚಲ್ಲಿದವು.

"ಸುಭಗಾ, ನನಗ ಮಕ್ಕಳಿಲ್ಲ; ನಿನಗೆ ತಾಯಿಯಿಲ್ಲ. ನೀನಽ ನನ್ನ ಮಗಳು ಅಂತ ತಿಳದೇನಿ. ಅಂತನಽ ನನಗ ಸಂಬಂಧ ಇಲ್ಲದ ಸೂಕ್ಷ್ಮ ವಿಷಯವನ್ನ ಕೆದರಿಕೆದರಿ ಕೇಳಲಿಕ್ಕೆ ಹತ್ತೇನಿ. ಮಕ್ಕಳ ಮ್ಯಾಲೆ ಸಿಟ್ಟು ಎಲ್ಲೀದವ್ವ? ನಿಮ್ಮ ಅಪ್ಪಗ ಏನೂ ಗೊತ್ತಿಲ್ಲಲ್ಲಽ ಇನ್ನೂ?"

"ಇಂದಿಲ್ಲ ನಾಳೆ ಗೊತ್ತಾಗತದ."

"ರಾಮಣ್ಣಾ ಅವರು ದಿನಾ ಮನೀಗೆ ಬರತಾರೇನು?"

"ಬರತಿದ್ರು. ಮಾಸ್ತರರೂ ಶೀನೂ ನಾಟಗಾ ಬಿಟ್ಟಾರಂತ. ಈಗ

ನಾಟಕ ಬಂದು ಆಗೇದ. ಅದಕ್ಕ ಅವರು ವಿನಾ ಬರೋದಿಲ್ಲ. ಮಂದೀನೂ ಹೆದರಸಲಿಕ್ಕೆ ಹತ್ಯಾರಂತ ಮನೀಗೆ ಬರಲಿಕ್ಕೂ ಹೆದರತಾರ ಈಗ. ಅವರಿಗೂ ಭಾಳ ತ್ರಾಸು ಆಗೇದ. ನಿಮ್ಮ ಶ್ರೀಕಂಠಶಾಸ್ತ್ರಿಗಳು ನನ್ನ ಮ್ಯಾಲಿನ ಸಿಟ್ಟಿನಿಂದ ಅವರಿಗೆ ಮನೀ ಇಲ್ಲದಾಂಗ ಮಾಡಿಸಿ ಕೊಡಿಸ್ಯಾರ. ಮಂದೀನೂ ಮೊದಲು ಸಹಾಯ ಮಾಡಿದಾಂಗ ಈಗ ಮಾಡೋದು ಬಿಟ್ಟಾರ. ಈ ಊರು ಬಿಟ್ಟು ಹೋಗಬೇಕು ಅಂತಾ ಮಾಡ್ಯಾರ."

"ಮತ್ತ ನಿನ್ನ ಗತಿ?"

ಸುಭಗೆಯ ದುಃಖ ಉಕ್ಕಿತು. ಆಕೆ ಮುಂದೆವರಿದಳು: "ಇನ್ನು ಮುಂದ ಈ ಜನ ಅಪ್ಪಗೂ ತ್ರಾಸ ಕೊಡೋವರು. ಅಪ್ಪನ ತೊಂದರೀ ತಪ್ಪಸಬೇಕಾದರ ಒಂದು ಉಪಾಯ—ಕೆರೀ ಭಾವೀ ಪಾಲು ಆಗೋದು."

ಗಂಗಾಸಾನಿ ಸುಭಗೆಯ ಬಾಯಿಯಿಂದ ಈ ಉತ್ತರ ಬರಬಹುದೆಂದು ನಿರೀಕ್ಷಿಸಿದ್ದಳು. ಸುಭಗೆಯೇ ಮತ್ತೆ ಅಂದಳು:

"ನನಗ ಖರೇವಂದ್ರೂ ಭಾಳ ತ್ರಾಸು ಆಗೇದ ನೋಡು ಗಂಗಕ್ಕಾ. ಜೀವಾನು ಬ್ಯಾಡ ಆಗೇದ. ಮೊದಲಾರು ಏನು ನನಗ ಮಾನ-ಮರ್ಯಾದಿ ಇದ್ದದ್ದೂ ಅಷ್ಟರಾಗು ಅದ. ಒಂದು ಒಡಕ ಮಡಕೀಗಿಂತು, ನಾಯಿಗಿಂತು ಕಡೀ ಮಾಡಿ ಕೂಡಿಸಿದ್ರು ಮೊದಲು. ಈಗಂತೂ ಸೈಯೇ ಸೈಯಿ. ನಾನು ತಪ್ಪು ಮಾಡೇನಿ. ನನ್ನ ವಿಷಯಕ್ಕ ನನಗ ಅಷ್ಟು ಹತ್ತಿಲ್ಲ. ನನ್ನ ದಶಿಯಿಂದ ಅಪ್ಪಗ ತ್ರಾಸು ಆಗತದ ಅಂಬೋದಷ್ಟು. ನಾನು ನಂಬಿದವರನ್ನಿಷ್ಟು ಕಿತಾಪತಿ ಮಾಡಿ ಊರು ಬಿಟ್ಟು ಓಡಿಸಿಬಿಟ್ರೆ, ನಾನರು ಇರಬೇಕ್ಯಾಕ?—"

ಮಾತು ಇನ್ನೂ ಮುಂದೆ ಸಾಗುವದಿತ್ತು. ಅಷ್ಟರಲ್ಲಿ ಸಂಗಪ್ಪ "ಅವ್ವಾರು ಒಂದಿಷ್ಟು ಚಿಮಣೀ ಎಣ್ಣೀ ಕೊಡ್ರಿ, ಮನಿಯಾಗ ಇಲೀ ಸತ್ತು ಬಿದ್ದೈತಿ. ತುಂಬಾ ಚಿಕ್ಕಾಡು ಮೆತ್ತಿದ್ದವು ನೋಡ್ರಿ. ಮಂದಿ ಹೆದರಸಾಕ ಹತ್ತ್ಯಾರ, 'ಅದನ್ನ ಮುಟ್ಟಬ್ಯಾಡ, ಚಿಮಣೀ ಎಣ್ಣೀ ಹಾಕಿ ಸುಟ್ಟು ಬಿಡು, ಮನೀ ಬಿಡು' ಅಂತ. ಪಿಲಾಗಿನ ಇಲೀ ಅಂತಾರೀ!" ಎಂದು ಗಾಬರಿಯಿಂದ ನಿಂತ. ಗಂಗಾಸಾನಿ ಸುಭಗೆಯರ ಮಾತು ಅಲ್ಲಿಗೇ ನಿಂತಿತು.

ಸಂಗಪ್ಪ ಸುಭಗೆ ಕೊಟ್ಟ ಚಿಮಣಿಯೆಣ್ಣೆಯನ್ನು ತೆಗೆದುಕೊಂಡು ಹೋದ. ಗಂಗಾಸಾನಿಯೂ ಹೊರಗೆ ಹೋದಳು.

ಸಂಗಪ್ಪನ ಮನೆಯ ಮುಂದೆ ಜನ ನೆರೆದಿತ್ತು. ಸತ್ತ ಇಲಿಯೊಂದು ಬಿದ್ದಿತ್ತು. ಸಂಗಪ್ಪ ಅದರ ಮೇಲೆ ಎಣ್ಣೆ ಸುರುಹಿದ. ಬಾಲವನ್ನು ಹಿಡಿದುಕೊಂಡು ಸುಟ್ಟು ಬರಲು ಅದನ್ನು ದೂರ ಒಯ್ದ. ನಿಂತ ಜನ ಊರಲ್ಲಿ ಇಲಿ ಬೀಳುವವೆಂದು ಬಬ್ಬಾಟ ಮಾಡಹತ್ತಿದರು.

೩೩

ಮನೆಯಲ್ಲಿ ಏನು ನಡೆದಿದೆ, ಜನ ಏನು ಅನ್ನುತಿದ್ದಾರೆ, ಎಂಬುದು ನಿಜವಾಗಿಯೂ ಶಂಕರಭಟ್ಟರಿಗೆ ತಿಳಿದಿರಲಿಲ್ಲ. ಇತ್ತಿತ್ತ ಅವರು ಮನೆ ಬಿಟ್ಟು ಹೊರಗೆ ಹೋಗಿ ನಾಲ್ಕು ಜನರಲ್ಲಿ ಕುಳಿತು ಹರಟೆ ಹೊಡೆಯುವ ದನ್ನೂ ಬಿಟ್ಟುಬಿಟ್ಟಿದ್ದರು. ದಿನಾಲು ಹನ್ನೊಂದು ಗಂಟೆಯ ವರೆಗೆ ತಮ್ಮ ಅಡಿಗೆ-ನೀರಿನ ತಯಾರಿಯೇ ಆಗುತ್ತಿತ್ತು. ಅಡಿಗೆ ಮುಗಿದೊಡನೆ ದೇವರ ಪೂಜೆ ಮುಗಿಸಿಕೊಂಡು ಅಭಿಷೇಕಕ್ಕೆ ಹೋಗುತ್ತಿದ್ದರು. ತಿರುಗಿ, ಊಟವಾದ ಮೇಲೆ ಮತ್ತೆ ಅಡ್ಡಾಗಲು ಗುಡಿಗೆ ಹೋದವರು ಇಳಿಹೊತ್ತು ಮಾಡಿ ಕೊಂಡೇ ಮನೆಗೆ ಬರುತ್ತಿದ್ದರು. ಇತ್ತೀಚೆಗಂತೂ ಭಗವದ್ಗೀತೆಯ ಲಹರಿ ಹತ್ತಿ ಗುಡಿಯಲ್ಲಿ ಕುಳಿತರೆ ಕುಳಿತೇ ಬಿಡುತ್ತಿದ್ದರು. ರಾತ್ರಿಯೆಲ್ಲ ನಾಟಕ ದಲ್ಲಿಯೇ ಕಳೆಯುತಿದ್ದರು. ಅಂತೆಯೇ ಸುಭಗೆಯ ಸಮಾಚಾರದ ಗಂಧವೂ ಅವರಿಗೆ ಹತ್ತಿರಲಿಲ್ಲ. ಎರಡನೆಯವರಾದರೂ ಈ ವಿಷಯವನ್ನು ಶಂಕರ ಭಟ್ಟರಿಗೆ ಹೇಳುವರೇಕೆ ? ಹೇಳುವದಾದರೂ ಎಂತು ? ಶ್ರೀಕಂಠಶಾಸ್ತ್ರಿಗಳೇ ಈ ಪ್ರಸ್ತಾಪವನ್ನು ಎತ್ತಿ ಭೋಳ್ಯಾ ಶಂಕರಭಟ್ಟರ ಕಣ್ಣು ತೆರೆಯಿಸಿ ಕಿವಿ ಹಿಂಡಬೇಕೆಂದು ಒಂದೆರಡು ಸಲ ಮನಸ್ಸು ಮಾಡಿದರೂ, 'ಮೋಜು' ಇನ್ನೂ ಬೆಳೆಯಲಿ, ಆಧಾರಗಳು—'ಪುರಾವೆ'ಗಳು—ಸದೃಢವಾಗಲಿ, ಸ್ಪಷ್ಟ ವಾಗಲಿ, ಅಂದರೇನೇ ಸುಭಗೆಯ ಸೊಕ್ಕನ್ನು ಮುರಿಯಲು ಅನುಕೂಲ ವಾಗುವದು—ಎಂಬ ಉದ್ದೇಶದಿಂದಲೇ ಸಮಯ ಸಾಧಿಸುತ್ತ ಸುಮ್ಮನೆ ಕುಳಿತುಕೊಂಡಿದ್ದರು.

ಇಂದು ಮಧ್ಯಾಹ್ನದಲ್ಲಿ ಶಂಕರಭಟ್ಟರು ಯಥಾಪ್ರಕಾರ ಎಡಗೈಯಲ್ಲಿ ಅಭಿಷೇಕ ತಟ್ಟೆಯನ್ನೂ ಬಲಗೈಯಲ್ಲಿ ತಂಬಿಗೆ-ಥಾಲಿ-ತೀರ್ಥಸವುಟುಗಳನ್ನೂ

ಹಿಡಿದುಕೊಂಡು ನೆಲದಲ್ಲಿ ನಟ್ಟ ದೃಷ್ಟಿಯನ್ನು ಮೇಲೆ ಎತ್ತದೆ ಗುಡಿಯ ಕಡೆಗೆ ಸಾಗುತ್ತಿದ್ದಾಗ, ಗುಡಿಯ ಮೆಟ್ಟಲುಗಳ ಬಳಿ ಅವರ ಹಾದಿಯನ್ನೇ ಕಾಯುತಿದ್ದ ಊರಲ್ಲಿಯ ಉಳಿದ ಬ್ರಾಹ್ಮಣರ ಹಿಂಡನ್ನು ನೋಡಲಿಲ್ಲ.

ಜನರೆಲ್ಲ ಒಂದಾಗಿ ಹರವಾದ ಎತ್ತರವಾದ ಮೆಟ್ಟಲುಗಳ ಮೇಲೆ ಅಡ್ಡಗಟ್ಟಿ ನಿಂತುದನ್ನು ನೋಡಿ ಶಂಕರಭಟ್ಟರು ಗಾಬರಿಯಾದರು. "ಇಲ್ಲಿ ಯಾಕ ಎಲ್ಲಾರೂ?" ಎಂದು ಸಹಜವಾಗಿ ಕೇಳಿದರು.

ಒಂದು ನಿಮಿಷ ಯಾರೂ ಮಾತಾಡಲಿಲ್ಲ. ಅವರಿಗೆ ಮೆಟ್ಟಲು ಹತ್ತಲು ದಾರಿಯನ್ನೂ ಬಿಡಲಿಲ್ಲ. ಎಲ್ಲರೂ ಶ್ರೀಕಂಠಶಾಸ್ತ್ರಿಗಳ ಕಡೆಗೆ ಕಣ್ಣು ತಿರುಹಿದರು. ಶಾಸ್ತ್ರಿಗಳು ಮುಂದೆ ಬಂದು ನಿಧಾನವಾಗಿ ಗಂಭೀರ ವಾಗಿ ಅಂದರು: "ನಿಮಗ ಬಹಿಷ್ಕಾರಾ ಹಾಕಬೇಕು ಅಂತಾ ಸಮಾಜ ನಿರ್ಣಯ ಕೊಟ್ಟೈದ. ಅದಕ್ಕ ದಯಮಾಡಿ ಇವತ್ತಿನಿಂದಾ ನೀವು ಗುಡೀಗೆ ಅಭಿಷೇಕಕ್ಕ ಬರಬಾರದು."

ಶಂಕರಭಟ್ಟರು ತಣ್ಣಗಾದರು; ಹೌಹಾರಿದರು; ಕಂಪಿಸಹತ್ತಿದರು. ಕಕ್ಕಾವಿಕ್ಕಿಯಾಗಿ ಕೇಳಿದರು: "ನಿಮ್ಮ ಮಾತಃ ತಿಳೀಲೊಲ್ಲದು. ಚ್ಯಾಷ್ಟೀ-ಗೀಷ್ಟೀ ಮಾಡತೀರೇನು ಮತ್ತ?"

ಶಂಕರಭಟ್ಟರು ನಿಂತಿದ್ದ ರೀತಿ, ಅವರ ಮುಖಚರ್ಯೆ, ಅವರ ಪ್ರತಿ ಕ್ರಿಯೆ, ಇವೆಲ್ಲವೂ ನಿಂತ ಬ್ರಾಹ್ಮಣರಲ್ಲಿ ಕನಿಕರದ ಒರತೆಯನ್ನು ಹುಟ್ಟಿಸಿ ದವು. ಅವರೆಲ್ಲರೂ ಅಲ್ಲಿ ಶ್ರೀಕಂಠಶಾಸ್ತ್ರಿಗಳ ಜುಲುಮೆಗೆ ಬಂದು ನಿಂತಿರ ಬಹುದು ಎಂಬುದು ಸ್ಪಷ್ಟವಾಗಿ ಕಾಣುವಂತೆ ಇತ್ತು.

"ಛೇ ಚಾಷ್ಟಿ ಇಲ್ಲ, ಗೀಷ್ಟಿ ಇಲ್ಲ. ಬ್ರಾಹ್ಮಣ್ಯ ಉಳಿಸಿಗೋಬೇಕೂ ಅಂತಾ ವಿಚಾರಮಾಡಿ, ನಿರ್ವಾಹ ಇಲ್ಲದಃ ಈ ನಿರ್ಣಯಕ್ಕೆ ಬಂದೂದ" ಎಂದು ಮತ್ತೆ ಶ್ರೀಕಂಠಶಾಸ್ತ್ರಿಗಳೇ ಅಂದರು.

"ನಾ ಮಾಡಿದಂಥಾ ಅನೀತಿಯರಃ ಏನದು?"

ಮನಸ್ಸಿಲ್ಲದೇ ನಿರ್ವಾಹವಿಲ್ಲದೇ ದೂರದಲ್ಲಿ ನಿಂತಿದ್ದ ಶಾನಭೋಗರ ಶಿವಪ್ಪನವರು ಶಂಕರಭಟ್ಟರ ಹತ್ತಿರ ಬಂದು "ಶಂಕರಭಟ್ರ, ವಿಷಯ ಸೂಕ್ಷ್ಮಅದ. ಸುಮ್ಮನೇ ಮನೀಗೆ ಹೋಗಿಬಿಡಿರಿ. ನಾನೆಲ್ಲಾ ಹಿಂದಾಗಡಿ ಹೇಳತೇನಿ." ಎಂದರು.

" ಹಿಂದಾಗಡೆ ಯಾಕ ? ಈಗಽ ಹೇಳಿಬಿಡಲಿಲ್ಲ. " ಎಂದರು ಶಂಕರ ಭಟ್ಟರು ತಾಳ್ಮೆ ಮೀರಿ.

ಶ್ರೀಕಂಠಶಾಸ್ತ್ರಿಗಳು ಮಠದ ಪ್ರತಿನಿಧಿಯೆಂಬ ದರ್ಪದಿಂದ ಗರ್ಜಿಸಿದರು: " ಶಂಕರಭಟ್ಟರಽ, ನಿಮಗೂ ಗೊತ್ತಿರಬಹುದು, ನಿಮ್ಮ ಮಗಳು ವ್ಯಭಿಚಾರಕ್ಕ ಬಿದ್ದಾಳ ಅಂಬೋದು. ಅಂತಾನಽ ನಿಮಗ ಈಗ ಬಹಿಷ್ಕಾರಾ ಹಾಕೋ ಪ್ರಸಂಗ ಬಂದಽದ. "

ಶಂಕರಭಟ್ಟರು ಕಿಡಿಕಿಡಿಯಾದರು. ಇಂದಿನಂತೆ ಅವರು ಸಿಟ್ಟಿಗೆದ್ದುದನ್ನು ನಿಂತವರಲ್ಲಿ ಯಾರೂ ನೋಡಿರಲಿಲ್ಲ. ಸಿಟ್ಟಿನ ಭರದಲ್ಲಿ ಕೈಯಲ್ಲಿಯ ತಂಬಿಗೆಯೊಳಗಿನ ನೀರನ್ನು ಶ್ರೀಕಂಠಶಾಸ್ತ್ರಿಗಳ ಮೋರೆಯ ಮೇಲೆ ಉಗ್ಗಿ ಅವರು ಚೀರಿದರು. " ಶ್ರೀಕಂಠ, ಇದೆಲ್ಲ ನಿಂದಽ ಕಂತ್ರಾಟ. ನನ್ನ ಮಾರಿಗೆ ಕಪ್ಪು ಹಚ್ಚಬೇಕು ಅಂತ ಈ ಆಟಾ ನಡಿಸೀದಿ ಕಾಣತಽದ—"

ಶಾನಭೋಗರ ಶಿವಪ್ಪನವರು ಅವರನ್ನು ಹೆಚ್ಚಿಗೆ ಮಾತಾಡಗೊಡಲಿಲ್ಲ. ಶಂಕರಭಟ್ಟರನ್ನು ಮುಟ್ಟಿ ಜುಲುಮೆಯಿಂದ ಮನೆಗೆ ಕಳಿಸಿದರು. ಪ್ರಸಂಗ ವಿಕೋಪಕ್ಕೆ ಹೋದೀತೆಂದು ಉಳಿದ ಜನ ವಿರಾಟಸ್ವರೂಪ ತಾಳಿದ ಶ್ರೀಕಂಠಶಾಸ್ತ್ರಿಗಳನ್ನು ಎಳೆದುಕೊಂಡು ಹೋದರು. ಶಿವಪ್ಪನವರು ಶಂಕರ ಭಟ್ಟರಿಗೆ ನಿಜಪರಿಸ್ಥಿತಿಯನ್ನು ಸೂಚ್ಯವಾಗಿ ವಿಶದಪಡಿಸಿದರು.

ಶಂಕರಭಟ್ಟರು ಮನೆಗೆ ಹೋಗಿ ನಡುಮನೆಯಲ್ಲಿಯೇ ಅಭಿಷೇಕದ ತಟ್ಟೆಯನ್ನಿಟ್ಟು, ಅತ್ತಿತ್ತ ನೋಡದೆ, ಅಡಿಗೆಯಮನೆಯಲ್ಲಿ ಹಣಿಕಿ ಸಹ ಹಾಕದೇ ಸುಮ್ಮನೆ ಕುಳಿತುಕೊಂಡುಬಿಟ್ಟರು. ತನ್ನ ಮನೆಯಲ್ಲಿ ಈ ಬಗೆಯ ಅನಿಷ್ಟ ಸಂಭವಿಸಿದುದು ಅವರ ಕಲ್ಪನೆಗೂ ಮೀರಿದಂಥದಿತ್ತು. ಆ ವಿಷಯ ಹೆಚ್ಚಿಗೆ ವಿಚಕ್ಷಣೆ ಮಾಡುವದು ಸಹ ಅವರಿಗೆ ಹೇಯವೆನಿಸಿತು. ಹೆಚ್ಚು ಹೆಚ್ಚು ವಿಚಾರಿಸಿದಂತೆ ಮನಸ್ಸಿನ ವ್ಯಥೆ ಇನ್ನೂ ಹೆಚ್ಚಾಯಿತು. ತಲೆಯ ಮೇಲೆ ಕೈ ಹೊದ್ದುಕೊಂಡು ಕುಳಿತೇ ಕುಳಿತರು.

ಸುಭಗೆ ಅಡಿಗೆಯ ಮನೆಯ ಮೂಲೆಯಲ್ಲಿ ರಾಪಿಕೊಂಡು ಕುಳಿತಿದ್ದಳು. ಯಾವ ಹೊತ್ತಿಗೆ ಏನು ಪ್ರಸಂಗ ಬರಬಹುದೋ ಎಂದು ಹೌಹಾರಿ ಹೋಗಿದ್ದಳು.

ನಾಲ್ಕು ಗಂಟೆಯವರೆಗೆ ಶಂಕರಭಟ್ಟರು ವಿಚಾರ ಮಾಡಿ ಮಾಡಿ

ಚಟ್ಟನೆ ಮೇಲೆದ್ದರು. ಅವರಿಗೆ ಊಟಮಾಡಬೇಕೆಂದು ಸಹ ಅನಿಸಲಿಲ್ಲ. ಮಂದಿಗೆ ಮೋರೆ ತೋರಿಸುವದೂ ಅಸಹ್ಯವಾಗಿ, ಅಂಗಿ ರುಮಾಲಗಳನ್ನು ಹಾಕಿಕೊಂಡು, ಹಸಿಬೆಯಲ್ಲಿ ಕೈಗೆ ಸಿಕ್ಕ ಅರಿವೆಗಳನ್ನು ತುಂಬಿಕೊಂಡು, ಬಾಗಿಲ ಹಿಂದಿನ ಮೊಚ್ಚೆಗಳನ್ನು ಕೊಡಹಹತ್ತಿದರು.

ಸುಭಗೆ ಹಣಿಕಿ ನೋಡಿದಳು; ಹೆದರುತಲೇ ಕೇಳಿದಳು :

" ಊಟಾ ಮಾಡೋದಿಲ್ಲೇನು ಅಪ್ಪಾ ? "

ಶಂಕರಭಟ್ಟರು ಉತ್ತರ ಕೊಡಲಿಲ್ಲ. ಆಕೆಯ ಕಡೆಗೆ ನೋಡಿಲಿಲ್ಲ ಸಹ.

" ಎಲ್ಲಿ ಹೊಂಟೇದೆಪ್ಪ, ಉಪಾಸಾ ? "

" ದೇಶಾಂತರಕ ಹೊರಟೇನಿ ! " ಎಂದು ಅವರು ಅನ್ನುವಾಗ ಕೋಪದಲ್ಲಿ ದುಃಖ ಬೆರೆತಿದ್ದಿತು. ಹೊರಹೊರಟು ಮನೆಯ ಮುಂದಿನ ದಾರಿಗೆ ಬಂದಾಗ ಶಂಕರಭಟ್ಟರು ಶಂಭುಲಿಂಗನ ಗುಡಿಯ ಕಡೆಗೆ ಮೋರೆಮಿರುಹಿದರು. ಮೊಚ್ಚೆಗಳನ್ನು ಬಿಟ್ಟು ಗುಡಿಯ ಶಿಖರದ ಕಡೆಗೆ ದೃಷ್ಟಿಯನ್ನು ಎತ್ತಿ ಗಲ್ಲಗಲ್ಲ ಬಡೆದುಕೊಂಡರು. ಕೈ ಜೋಡಿಸಿದರು. ಹಿಂದೆ ಮುಂದೆ ನೋಡದೆ, ಎಡಬಲಕ್ಕೆ ಹೊರಳದೆ ಬೆಟ್ಟವನ್ನು ಇಳಿಯಹತ್ತಿದರು.

ಸುಭಗೆ ಹಿತ್ತಿಲ ಬಾಗಿಲಲ್ಲಿ ಬಂದು ನಿಂತಳು. ತಂದೆ ಬೆಟ್ಟದ ಮೆಟ್ಟಲುಗಳನ್ನು ಇಳಿಯುವದನ್ನು ನೋಡಿದಳು. ತೆರೆದ ಬಾಗಿಲವನ್ನು ಮುಚ್ಚಬೇಕೆಂಬ ಪರಿವೂ ಇಲ್ಲದೆ, ಕಾಲಲ್ಲಿ ಎಲ್ಲೆಡೆಗೆ ಪಸರಿಸಿದ ನೆಗ್ಗಲಿಯ ಮುಳ್ಳುಗಳನ್ನು ತುಳಿಯುತ್ತಲೇ ತಂದೆಯ ಸಮೀಪ ಬಂದಳು. " ಅಪ್ಪಾ, ಅಪ್ಪಾ " ಎಂದು ಕೂಗಿದುದು ಶಂಕರಭಟ್ಟರಿಗೆ ಕೇಳಿಸಿದರೂ, ಕೇಳದಂತೆ ಮುಂದೆ ಸಾಗಿದರು.

## ೩೪

ಶಂಭುಲಿಂಗನ ಬೆಟ್ಟದ ಜನ ಸುಭಗೆಯ ಅನೀತಿಯ ಬಗೆಗೆ ಅದೆಷ್ಟೊ ಮಾತಾಡುತ್ತಿದ್ದಿತಾದರೂ, ಶ್ರೀಕಂಠಶಾಸ್ತ್ರಿಗಳ ಉಪಟಳದಿಂದ, ಸುಭಗೆಯ ದುರ್ವರ್ತನೆಗಾಗಿ ಬ್ರಾಹ್ಮಣ ಸಮಾಜ ಶಂಕರಭಟ್ಟರಿಗೆ ಬಹಿಷ್ಕಾರ ಹಾಕಿ

ದುದು ಯಾರಿಗೂ ಸೇರಲಿಲ್ಲ. ಆ ಸಮಾಜದಲ್ಲಿಯೇ ಬಹಳ ಜನರಿಗೆ ಇದು ಸರಿಬರಲಿಲ್ಲ. ವಿಚಾರ ಮಾಡಿ ನೋಡಿದರೆ, ವಿವೇಕದಲ್ಲಿ, ಧರ್ಮಪಾಲನೆಯಲ್ಲಿ, ಶೀಲದಲ್ಲಿ, ವೈದಿಕವೃತ್ತಿಯಲ್ಲಿ, ದೇವ-ಬ್ರಾಹ್ಮಣ-ಭೀರುತ್ವದಲ್ಲಿ, ಶಂಕರ ಭಟ್ಟರನ್ನು ಹಿಂದೆ ಹಾಕುವವರು ಆ ಊರಲ್ಲಿ ಯಾರೂ ಇದ್ದಿಲ್ಲವೆಂಬುದು ಸರ್ವವಿದಿತವಿದ್ದಿತು. ಅಂಥವರಿಗೆ ಈ ಬಗೆಯ ಶಿಕ್ಷೆಯಾದುದು ಊರ ಜನರ ಕೋಪವನ್ನು ಕೆರಳಿಸಿತು.

ಆದರೆ ಈ ಸಮಯದಲ್ಲಿ ಜನ ಇತ್ತ ಹೆಚ್ಚು ಲಕ್ಷ್ಯ ಹಾಕುವಂತಿರ ಲಿಲ್ಲ. ಅವರೆಲ್ಲರ ಮನಸ್ಸನ್ನು ಬೇರೊಂದು ಸಮಸ್ಯೆ ಆವರಿಸಿದ್ದಿತು:

ಸಂಗಪ್ಪನ ಮನೆಯಲ್ಲಿ ಇಲಿಯು ಬಿದ್ದ ದಿನವೇ ಬೇರೆ ನಾಲ್ಕು ಮನೆಗಳಲ್ಲಿಯೂ ಬಿದ್ದಿದ್ದವು. ಆದರೆ ಆ ಜನ ಆ ಬಗ್ಗೆ ಬಬ್ಬಾಟ ಮಾಡದೆ, ಅವನ್ನು ತೆಪ್ಪಗೆ ತಿಪ್ಪಿಯಲ್ಲಿ ಒಗೆದು ಬಂದು ಸುಮ್ಮಗೆ ಕುಳಿತಿದ್ದರು. ಮುಂದಿನ ವಾರ ಇಲಿಗಳ ಸುರಿಮಳೆಯೇ ಸುರುವಾಗಿ ಜನ ಗಾಬರಿಯಾಯಿತು. ಹಳ್ಳಿಯ ಮೇಲೆ ಹೋಗಿ ಬಂದ ಗೊರವರ ಹುಡುಗನೊಬ್ಬ ನಾಲ್ಕು ದಿನ ಜ್ವರ ಬಂದು ತೀರಿಕೊಂಡನು. ಆ ಹುಡುಗನ ಮನೆಯವರು ಆತನಿಗೆ ಕಂಕುಳದಲ್ಲಿ ಕುರುವು ಆಗಿತ್ತೆಂದು ಓಣಿಯಲ್ಲಿ ಹೇಳಿದಾಗ ಜನ ಮತ್ತಿಷ್ಟು ಗಾಬರಿ ಯಾಯಿತು. ಆ ಹುಂಬ ಜನಕ್ಕೆ ಅದು ಕುರುವು ಆಗಿರದೆ ಪ್ಲೇಗಿನ ಗಡ್ಡೆ ಯೆಂಬುದು ತಿಳಿದಿರಲಿಲ್ಲವೋ, ಅಥವಾ ತಿಳಿದೂ ಬೇಕಂತಲೇ ಆ ರೀತಿ ಹೇಳಿದರೋ ತಿಳಿಯದು. ಗೊರವರ ಹುಡುಗ ತೀರಿಕೊಂಡದ್ದು ಪ್ಲೇಗಿನಿಂದಲೇ ಎಂಬ ಸುದ್ದಿ ಬೆಳಗಾಗುವದರಲ್ಲಿಯೇ ಊರ ತುಂಬ ಪಸರಿಸಿತು. ಗೊರವರ ಓಣಿಯ ಜನ ಆ ದಿನವೇ ಊರು ಬಿಡಬೇಕೆಂದು ನಿಶ್ಚಯಿಸಿಕೊಂಡು ಬಿಟ್ಟರು. ಓಣಿಯಲ್ಲಿಯ ಜನವೆಲ್ಲ ಗುದ್ದಲಿ ಸಲಿಕೆಗಳನ್ನು ತೆಗೆದುಕೊಂಡು ಹೊರಟರು ಹೊರಗೆ. ಸುಗ್ಗಿಗೆ ಅನುಕೂಲವಾಗಬೇಕೆಂದು ಕಮತಿಗರು ತಮ್ಮ ತಮ್ಮ ಕಣಗಳಲ್ಲಿಯೇ ಗುಡಿಸಲು ಹಾಕಿಕೊಂಡರು. ಉಳಿದವರೆಲ್ಲ ಬೆಟ್ಟದ ಓರೆಯಲ್ಲಿ ಒಂದೇ ಮಧ್ಯಾಹ್ನದೊಳಗಾಗಿ ಬಿಡಾರಗಳನ್ನು ಸಿದ್ಧ ಮಾಡಿದರು. ಇಷ್ಟರಲ್ಲಿಯೇ ಹೆಣ್ಣುಮಕ್ಕಳೂ ಹುಡುಗರೂ ತಮ್ಮ ಸಾಮಾನು ಗಳನ್ನು ಹೆಗಲಮೇಲೆಯೋ, ಹೋರಿಗಳ ಮೇಲೆಯೋ, ಚಕ್ಕಡಿಗಳ ಮೇಲೆಯೋ ಸಾಗಿಸಿಬಿಟ್ಟಿದ್ದರು.

ಗೊರವರ ಓಣಿಯ ಪ್ಲೇಗು—ಅದಕ್ಕಿಂತ ಮೊದಲು ಪ್ಲೇಗಿನ ಭಯ ಉಳಿದ ಕಡೆಗೂ ಹಬ್ಬಿದುದಾಯ್ತು. ಮುಂದೆ ಎರಡೇ ದಿನಗಳಲ್ಲಿ ಅಮಾವಾಸ್ಯೆ ಇದ್ದುದರಿಂದ ಅಮಾವಾಸ್ಯೆಯ ಮುಂದೆ ಊರು ಬಿಡುವದು ಶುಭವಲ್ಲವೆಂದೂ ಅಮಾವಾಸ್ಯೆಯ ಮರುದಿನವೇ ಅಡವಿಯಲ್ಲಿನ ಗುಡಿಸಲುಗಳಲ್ಲಿಯೇ ವಾಸ ಮಾಡುವದೆಂದೂ ಊರ ಉಳಿದ ಜನ ನಿಶ್ಚಯಿಸಿಕೊಂಡು ತಗಡು, ಬಂಬು ಮುಂತಾದವುಗಳನ್ನು ಸಂಗ್ರಹಿಸುವದರಲ್ಲಿಯೂ ಗುಡಿಸಲುಗಳನ್ನು ತಯಾರಿಸುವದರಲ್ಲಿಯೂ ನಿರತರಾದರು. ಈ ಪೀಡೆ ಬೇಗ ನಿವಾರಣೆ ಹೊಂದಲೆಂದು ಊರ ಪ್ರತಿಷ್ಠಿತರು ಮೂರು ತಿಂಗಳ ಅವಧಿಯಲ್ಲಿ ದುರುಗವ್ವನ 'ದೇವತೆ' ಮಾಡುವದಾಗಿ ಬೇಡಿಕೊಂಡು ಕೋಣವನ್ನು ಬಿಟ್ಟರು; ಗಡಿಯ ದುರುಗವ್ವನನ್ನೂ ಗಡಿಗೆ ಕಳಿಸಿ ಬಂದರು.

ಅಮಾವಾಸ್ಯೆಯ ದಿನ ಇನ್ನೊಂದು ವಿಷಯ ಜನರಲ್ಲಿ ಗಲಭೆಯನ್ನು ಎಬ್ಬಿಸಿತು :

## ೩೫

ಅಂದು ಊರಿಗೆ ಜಮಾದಾರರು ಬಂದರು.

ಅವರು ಬರುವದು ಮೊದಲೇ ಗೊತ್ತಿದ್ದಿತೋ ಏನೋ ಅನ್ನುವಂತೆ ಶ್ರೀಕಂಠಶಾಸ್ತ್ರಿಗಳು ಒಳ್ಳೇ ಸಡಗರದಿಂದ ಪೋಷಾಕು ಧರಿಸಿಕೊಂಡು ಅವರು ಬರುವ ಮೊದಲೇ ಚಾವಡಿಗೆ ಹೋಗಿ ಕುಳಿತಿದ್ದರು. ಜಮಾದಾರರು ಸ್ಟೂಲಿನ ಮೇಲೆ ಕುಳಿತುಕೊಂಡು ಬೆಟ್ಟವನ್ನು ಏರಿ ಬಂದುದರಿಂದಾದ ದಣಿವನ್ನು ಆರಿಸಿಕೊಳ್ಳಹತ್ತಿದರು. ಚಾವಡಿಯ ಮುಂದೆ ಹಿಂಡು ಜನ ಗಾಳಿಯಾಡಲೂ ಅವಕಾಶ ಕೊಡದಂತೆ ಅಡ್ಡಗಟ್ಟಿ ನಿಂತಿದ್ದರು. ಬದಿಯಲ್ಲಿಯೇ ಗುಡಾರದ ಮೇಲೆ ಕುಳಿತ ಇನ್ನೊಬ್ಬ ಪೋಲೀಸ್ ಸಿಪಾಯಿಯು ಕೈಯಲ್ಲಿಯ ಬಗಣಿಯ ಕಟ್ಟಿಗೆಯನ್ನು ಅಲುಕಾಡಿಸುತ್ತ ನೆರೆದ ಜನರಿಗೆ ದೂರ ಹೋಗಿರೆಂದು ಗದ್ದರಿಸಿದನು.

ಜಮಾದಾರರು ಯಾಕೆ ಬಂದಿರಬಹುದೆಂದು ಜನರಿಗೆ ಕುತೂಹಲ.

"ಜಮಾದಾರ್ ಸಾಹೇಬ್, ಸ್ವಲ್ಪ ಮನೀಕಡಿಗೆ ಹೋಗಿ ಬರೋಣ ನಡೀರಿ" ಎಂದರು ಶಾಸ್ತ್ರಿಗಳು. ಜಮಾದಾರರು ಆಗ ಏಳಲಿಲ್ಲ. ಸ್ವಲ್ಪ ದಣು ವಾರಿಸಿಕೊಂಡು ಬರುವದಾಗಿ ಹೇಳಿ ಗೌಡರನ್ನು ಕರೆಕಳಿಸಿದರು. ಗೌಡರು ಬಂದು ಕೈಜೋಡಿಸಿ ಮುಂದೆ ನಿಂತರು.

"ಈ ಊರಾಗ ಶಂಕರಭಟ್ರು ಅಂತ ಯಾರು ಇದ್ದಾರ್ರಿ ಗೌಡ್ರ?" ಎಂದು ಜಮಾದಾರರು ಗೌಡರ ಕಡೆಗೆ ನೋಡಿದರು.

ಗೌಡರು ಪೇಚಿನಲ್ಲಿ ಬಿದ್ದರು. "ಶಂಕರಭಟ್ಟರ್ರೇ? ಯಾಕ? ಅವ ರ್ಯಾಕ ಬೇಕಾಗಿತ್ತು?" ಎಂದು ಗೌಡರು ತಿರುಗಿ ಪ್ರಶ್ನೆ ಮಾಡಿದರು. ಶ್ರೀಕಂಠಶಾಸ್ತ್ರಿಗಳು ಅನುತ್ಸುಕರಂತೆ, ಅಲಿಪ್ತರಂತೆ, ಕುಳಿತುಕೊಂಡಿದ್ದರು. ಅವರ ಸಂಬಂಧಿ ಒಂದು ಚೌಕಸಿಯ ಕೇಸು ಇರುವದೆಂದು ಜಮಾದಾರರು ಹೇಳಿದರು. ಗೌಡರ ಕುತೂಹಲ ಹೆಚ್ಚಿತು. ಅದು ಯಾತರ ಸಂಬಂಧಿ ಇರುವದೆಂದು ಜಮಾದಾರರಿಗೆ ಪ್ರಶ್ನೆ ಮಾಡಿದಾಗ, ಅವರು ಸಿಟ್ಟಿಗೆದ್ದರು. ಕೇಳಿದುದಕ್ಕೆ ಉತ್ತರ ಕೊಡಬೇಕಾಗಿಯೂ ಇಲ್ಲದ ಉಸಾಬರಿ ಮಾಡಬಾರದಾಗಿಯೂ ಗದ್ದರಿಸಿದರು. ನಾಲ್ಕು ಜನರಲ್ಲಿ ತಮಗೆ ಅವಮಾನವಾದಂತೆ ಅನಿಸಿದರೂ ಅದನ್ನು ನುಂಗಿಕೊಂಡರು ಗೌಡರು. ಶಂಕರಭಟ್ಟರು ಊರಲ್ಲಿಲ್ಲವೆಂದು ಹೇಳಿದರು.

ಶ್ರೀಕಂಠಶಾಸ್ತ್ರಿಗಳು ಜಮಾದಾರರಿಗೆ ಮತ್ತೆ ಜುಲುಮೆ ಮಾಡಿ ಅವರನ್ನೂ ಅವರೊಡನೆ ಬಂದ ಸಿಪಾಯಿಯನ್ನೂ ಮನೆಗೆ ಕರೆದುಕೊಂಡು ಹೋದರು.

ಶಾಸ್ತ್ರಿಗಳ ಮನೆಯಲ್ಲಿ ಚಹಾ ಕುಡಿದು ಜಮಾದಾರರು ಲೋಡಿಗೆ ಆತುಕೊಂಡು ಕುಳಿತಾಗ ಅಲ್ಲಿ ತಾವಿಬ್ಬರು, ಗೌಡರು, ಶಾಸ್ತ್ರಿಗಳು ಇಷ್ಟೇ ಜನರಿದ್ದುದನ್ನು ನೋಡಿ ತಾವು ಬಂದ ವಿಷಯದ ಪ್ರಸ್ತಾಪವೆತ್ತಿದರು:

"ಗೌಡ್ರs, ಈಗ ಹೇಳತೇನಿ ಕೇಳ್ರಿ ಎಲ್ಲಾನೂ. ನಮ್ಮ ಕಡೀಗೆ ಒಂದು ಮೂಕೀ ಅರ್ಜೀ ಬಂದsದ. ಶಂಕರಭಟ್ರು ಅಂಬೋರ ಮಗಳೇನೋ ಸಕೇಶಿ ಇದ್ದಾಳಂತ. ಆಕೇನೋ ಹಡೆದು ಕೂಸಿನ್ನ ಕುತಿಗೀ ಹಿಚಿಕಿ ಹಾಕ್ಯಾಳಂತ. ಇದಕ್ಕ ಶಂಕರಭಟ್ಟರದೂ ರಾಮಣ್ಣ ಅಂತ ಯಾರೋ ಇದ್ದಾರಂತಲ್ಲ, ಅವರದೂ ಸಾಮೀಲು ಅದs ಅಂತ. ಹೌದೇನ್ರಿ?"

ಗೌಡರು ಒಂದು ನಿಮಿಷ ಸುಮ್ಮನೆ ಕುಳಿತರು. ಸಂಶಯ ದೃಷ್ಟಿಯಿಂದ ಶ್ರೀಕಂಠಶಾಸ್ತ್ರಿಗಳನ್ನೊಮ್ಮೆ ನೋಡಿದರು. ಆ ಮೇಲೆ ಅಂದರು:

“ ಖೊಟ್ಟಿ ಐತ್ರಿ ಜಮಾದಾರ್ ಸಾಹೇಬ್. ಎಲ್ಲಾ ಖೊಟ್ಟಿ ಐತಿ. ಆ ಹೆಣ್ಣುಮಗಳ ಸಂಬಂಧಿ ಜನಾ ಆಡಿಕೊಂಬೋದೇನೋ ಖರೆ. ಆದ್ರ ಅರ್ಜಿಯೊಳಗಿನ ಸಂಗತಿ ಮಾತ್ರ ಅಜೀಬಾತು ಸುಳ್ಳು ಅದ. ಹಾಂಗ ಏನಾರೆ ಇದ್ದಿದ್ರ, ನಾ ಸುಮ್ಮಗೆ ಕೂಡತಿದ್ನೇನ್ರಿ ? ತಾಬಡತೋಬಡ ಕೇಸು ಹಾಕಿಬಿಡತಿದ್ದೆ. ಆಗದೋರು ಯಾರೋ ಹೀಂಗ ಬರದಾರು. ಶಂಕರಭಟ್ಟರಂತಾ ಸಾತ್ವಿಕ ಮಂದಿ ಇಂತಾ ಹೀನ ಕೆಲಸಕ್ಕ ಎಂದೂ ಕೈ ಹಾಕೋರಲ್ಲ— ”

ಇಲ್ಲಿಯ ವರೆಗೆ ಸುಮ್ಮನೆ ಕುಳಿತ ಶ್ರೀಕಂಠಶಾಸ್ತ್ರಿಗಳು ನಡುವೇ ಬಾಯಿ ಹಾಕಿದರು: “ ಗೌಡ್ರೆ, ಮರ್ಯಾದೀ ಸುತ್ತ ಬಂದ್ರ, ಎಂಥಾ ಸಾತ್ವಿಕರಿದ್ದರೇನು ? ಮರ್ಯಾದೀ ಮುಚಿಗೋಳ್ಳಿಕ್ಕೆ ಏನು ಮಾಡ್ಯಾರು ಅಂತ ಹೇಳಲಿಕ್ಕೆ ಬರೋದಿಲ್ಲ. ಅದಕ್ಕೆ, ಜಮಾದಾರಸಾಹೇಬ್ ಹೀಂಗ ಮಾಡಿಬಿಡ್ರಿ: ಗೌಡರು ಹೇಳಿದಾಂಗ ಇನ್ನೂ ಅಂಥಾ ಗುನ್ಹೆ ಏನೂ ಆಗಿಲ್ಲ. ಮುಂದ ಅವರು ಕುತಗೀ ಹಿಚಿಗಿ-ಪತಗೀ ಹಿಚಿಗಿ ಮಾಡಬಾರದೂ ಅಂತ ನಿಮ್ಮ ಮನಸಿನಾಗ ಇದ್ರ, ಈಗ ಆ ಹುಡಿಗೀ ಕಡಿಯಿಂದ ಗರ್ಭಿಣಿ ಇದ್ದ ಬಗ್ಗೆ ಒಂದು ಕಬೂಲೀ ಜವಾಬು ತಗೊಂಡು ಬಿಡೋಣ. ಅಂದ್ರ ಮುಂದ ಆಕಿ ಅಂಥಾ ಗುನ್ಹೇನೆ ಮಾಡಲಿಕ್ಕೆ ಹೋಗೋದಿಲ್ಲ. ”

ಶ್ರೀಕಂಠಶಾಸ್ತ್ರಿಗಳ ಮಾತಿನ ಮರ್ಮ ತಿಳಿದು ಜಮಾದಾರರು ಇವರೇ ಆ ಅರ್ಜಿಯನ್ನು ಬರೆಸಿರಬಹುದೆಂದು ತರ್ಕಿಸಿದರು. ತಟ್ಟನೆ ಮೇಲೆದ್ದು ಅಂದರು:

“ ಶಾಸ್ತ್ರಿಗಳೆ ಇದು ಸರಕಾರ ಅದ. ಹುಚ್ಚನಾಂಗ ಏನಾರೆ ಕಲ್ಪನಾ ಮಾಡಿಕೊಂಡು, ಕಂಡಕಂಡೋರ ಕಡಿಯಿಂದ ಏನಾರೆ ಜವಾಬು ಕೇಳಲಿಕ್ಕೆ ಮೊಗಲಾಯಿ ಅಂತ ತಿಳದೀರೇನು ? ಈ ರಾಮಣ್ಣ ಅಂದ್ರ ಯಾರ್ರೀ ಗೌಡರೆ ? ”

ಅವರು ಹೀಗೆನ್ನುವಾಗ ಆಗಲೇ ಮನೆಯ ಹೊರಗೆ ಬಂದಿದ್ದರು. ಗೌಡರು ಉತ್ತರ ಕೊಡಲು ಹಿಂದೆ-ಮುಂದೆ ನೋಡಿದಾಗ, ಬೆನ್ನು ಹಿಂದೆಯೇ

ಇದ್ದ ಶಾಸ್ತ್ರಿಗಳೇ ಬಾಯಿ ಹಾಕಿದರು: "ಅವನೂ ಒಬ್ಬ ಲಫಂಗಾ, ಜಮಾದಾರ ಸಾಹೇಬ್. ಅವನ ನೋಡ್ರಿ ಊರಾಗ ಇಷ್ಟೆಲ್ಲಾ ಹೊಲಸು ಮಾಡಿದಾಂವಾ. ಕರಸಲೇನು ಅವನ್ನ ?"

ಜಮಾದಾರರು ಶಾಸ್ತ್ರಿಗಳ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೇ "ನಮಸ್ಕಾರ ಶಾಸ್ತ್ರಿಗಳ. ಇನ್ನು ನೀವು ಇಲ್ಲೇ ನಿಲ್ಲರಿ. ನಾವು ಬರತೇವಿ. ಮತ್ತ ಸುಮ್ಮನ ತಳಗ ಯಾಕ ಬರತೀರಿ ?" ಎಂದು ಗೌಡರೊಡನೆ ಮುಂದೆ ಹೊರಟರು. ಶ್ರೀಕಂಠಶಾಸ್ತ್ರಿಗಳು ಅಲ್ಲಿಯೇ ಉಳಿಯಬೇಕಾಯಿತು.

ಹೋಗುವಾಗ ಜಮಾದಾರರು ರಾಮೂನ ಸಂಬಂಧಿ ಮಾಹಿತಿ ಕೇಳಿದರು ಗೌಡರನ್ನು. ರಾಮೂನ ಬಗ್ಗೆ ಸವಿಸ್ತಾರ ಪರಿಚಯ ಮಾಡುವಾಗ ಅವನು ವೀಣೆಯನ್ನು ಸ್ವಾರಸ್ಯವಾಗಿ ಬಾರಿಸುವ ಸಂಗತಿಯನ್ನೂ ಹೇಳಿದೊಡನೆ ಜಮಾದಾರರು, ನಿಂತು, ಧೇನಿಸಿ, ಗೌಡರನ್ನು ಕೇಳಿದರು:

"ರಾಮಣ್ಣಾ ಅಂದ್ರ ಕೆಂಪನ್ನ ಉದ್ದ ಆಳೇನ್ರೀ ?"

"ಹೌದ್ರಿ. ಅವರದು ತಮಗ ಗೊತ್ತು ಐತೇನ್ರಿ ?"

"ಎಲ್ಲಿ ಇದ್ದಾರ ಅವರು ?"

"ಕರೀಕಳಸಲೇನ್ರಿ ?"

"ಕರಸೋದು ಬ್ಯಾಡ. ಸುಮ್ಮನೆ ಬಬ್ಬಾಟ ಆಗತದ. ನಾವ ಹೋಗೋಣ ನಡೀರಿ ಅವ್ರು ಇದ್ದಲ್ಲಿಗೆ."

## ೩೭

ರಾಮೂ ಒಳ್ಳೇ ಪೇಚಿನಲ್ಲಿ ಬಿದ್ದಿದ್ದ. ಮನಸ್ಸಿನ ನೆಮ್ಮದಿಯನ್ನು ಕಳೆದುಕೊಂಡಿದ್ದ. ತನ್ನನ್ನು ಗುಡಿಯ ಹವಳಿಯಿಂದ ಹೊರಗೆ ಹಾಕಿಸುವ ಕೆಲಸದಲ್ಲಿ, ನಾಟಕವು ಕುಂಠಿತವಾಗುವಂತೆ ಅದರಲ್ಲಿಯ ಜನರನ್ನು ಚದರಿಸುವದರಲ್ಲಿ, ತನ್ನ ಮತ್ತು ಸುಭಗೆಯ ನಡುವಿನ ಸಂಬಂಧದ ಗುಟ್ಟನ್ನು ಬಹಿರಂಗಪಡಿಸುವದರಲ್ಲಿ, ತನ್ನ ಬಗೆಗೆ ಜನರಲ್ಲಿ ಅನಾದರ ಹುಟ್ಟಿಸುವ ಕಾರ್ಯದಲ್ಲಿ, ಶಂಕರಭಟ್ಟರಿಗೆ ಬಹಿಷ್ಕಾರ ಹಾಕಿ ಅವರನ್ನು ಊರಿನಿಂದ

ಓಡಿಸಿದ ಸಾಹಸದಲ್ಲಿ, ಶ್ರೀಕಂಠಶಾಸ್ತ್ರಿಗಳ ಕೈವಾಡವೇ ಪ್ರಮುಖವಾಗಿದ್ದು ದನ್ನು ರಾಮೂ ಅರಿತಿದ್ದ. ಆದ್ದರಿಂದಲೇ ಅವನು ಶಾಸ್ತ್ರಿಗಳ ವಿಷಯದಲ್ಲಿ ತುಂಬ ಹೆದರಿದ್ದ. ಭಾವನೆಯ ಕೈಯಲ್ಲಿ ಬುದ್ಧಿಯನ್ನು ಕೊಟ್ಟು ತಪ್ಪು ಹಾದಿಯನ್ನು ಹಿಡಿದು ಸುಭಗೆಯನ್ನೂ ಶಂಕರಭಟ್ಟರನ್ನೂ ಪೇಚಿಗೆ ಈಡು ಮಾಡಿದುದಕ್ಕೆ ಬಹಳವಾಗಿ ನೊಂದುಕೊಂಡ; ಪಶ್ಚಾತ್ತಾಪಬಟ್ಟ. ಇತ್ತೀಚೆ ಗಂತೂ ಜನರಿಂದ ಸಹಾಯ ಕಡಿಮೆಯಾಗಿ, ಉದರಂಭರಣೆಯೂ ಕಠಿಣವಾಗಿ ದ್ದಿತು. ನಾಲ್ಕೈದು ತಿಂಗಳುಗಳಿಂದ ಆದ ಪರಿಚಯದ ಉಪಯೋಗ ಮಾಡಿ ಕೊಂಡು, ಅಲ್ಲಿ ಇಲ್ಲಿ ಉದ್ದರಿ ಮಾಡಿ, ಹೇಗೋ ದಿನಗಳನ್ನು ಹಾಕುವ ಕೆಲಸ ಸಾಗಿಸಿದ್ದನು. ಅಂತೆಯೇ ಅದೆಷ್ಟೋ ಸಲ ಶಂಭುಲಿಂಗನ ಬೆಟ್ಟ ದಿಂದ ಬೇರೆ ಕಡೆಗೆ ಹೋಗಿಬಿಡಬೇಕು ಎನಿಸಿದ್ದಿತು. ತನ್ನ ತಪ್ಪಿನಿಂದ ಶಂಕರಭಟ್ಟರಿಗೆ ಬಹಿಷ್ಕಾರವಾಗಿ ನಾಟಕವು ಸಂಪೂರ್ಣ ಮುಗ್ಗಿ ಹೋದ ಮೇಲೆಯಂತೂ ಊರಲ್ಲಿ ಮಂದಿಗೆ ಮುಖ ತೋರುವದೂ ಅಸಾಧ್ಯ ವಾದಂತಿತ್ತು.

ಆದರೂ ರಾಮೂ ಬೆಟ್ಟವನ್ನು ಬಿಟ್ಟು ಕದಲಲಿಲ್ಲ. ತಾನೇನು ? ಗಂಡಸು; ಆ ಊರಿನಿಂದ ಒಮ್ಮೆ ಗುಡಚಾಪಿ ಕಿತ್ತಿದನೆಂದರೆ, ಆ ಊರ ಸಂಬಂಧ ಕಡೆಯ ವರೆಗೂ ಕಡಿಯಬಹುದು. ಆದರೆ ತನ್ನನ್ನು ನಂಬಿಕೊಂಡು ತನ್ನ ಬರಡು-ಬಾಳುವೆಗೆ ಹೊಸತಾದ ಚೈತನ್ಯ ಕೊಟ್ಟು, ತನ್ನ ಹೆಜ್ಜೆಯಲ್ಲಿಯೇ ಹೆಜ್ಜೆಯಿಟ್ಟು, ಜಾರಿ ಜನಾಪಹಾಸ್ಯದ ಗಂಡಾಂತರಕ್ಕೆ ಗುರಿಯಾದ ಸುಭಗೆಯ ಗತಿಯೇನು ? ಒಮ್ಮೆ ತಪ್ಪು ಮಾಡಿದ ಮೇಲೆ ಆ ತಪ್ಪಿನ ಪ್ರತಿಫಲಕ್ಕೆ ಅಂಜುವದ ? ಓಡಿ ಹೋಗುವದೇ ? ಸುಭಗೆಯನ್ನು ಬಿಟ್ಟು ಬಾಳುವ ದಾದರೂ ಎಂತು ?

ಎಂದೇ ಇಂದಿನ ವರೆಗೆ ತಲೆ ತೆಗ್ಗಿಸಿ, ಪ್ರಸಂಗ ಬಂದಾಗ ಉಪವಾಸ ಬಿದ್ದು, ಬೆಟ್ಟದಲ್ಲಿಯೇ ಉಳಿದಿದ್ದ. ಊರಲ್ಲಿ ಪ್ಲೇಗು ಸುರುವಾದಂದಿನಿಂದ ರಾಮೂನ ಮನಸ್ಸು ಮತ್ತೆ ಹೊಯ್ದಾಡಹತ್ತಿದ್ದಿತು. ಊರ ಸ್ಥಿತಿ ಯಾವ ಬಣ್ಣವನ್ನು ತಾಳುವದೋ ಎಂದು ಸೂಕ್ಷ್ಮವಾಗಿ ಪರೀಕ್ಷಿಸುತಲಿದ್ದ.

ಸಂಗಪ್ಪ ಓಡಿ ಬಂದ. ಊರಿಗೆ ಜಮಾದಾರರು ಬಂದ ಸುದ್ದಿ ಯನ್ನೂ ಅವರು ಶಂಕರಭಟ್ಟರ ಬಗ್ಗೆ ವಿಚಾರಿಸಿದುದನ್ನೂ ರಾಮೂನಿಗೆ

ತಿಳಿಸಿದನು. ಆವರು ಶ್ರೀಕಂಠಶಾಸ್ತ್ರಿಗಳ ಮನೆಗೆ ಹೋದುದನ್ನು ಕೇಳಿ, ಮತ್ತಾವ ಪೇಚು ಬಂದಿತೋ ಎಂದು ಹೌಹಾರಿದ.

ಇದೇ ಸಮಯದಲ್ಲಿ ಗೌಡರು ಹೊರಗಿನಿಂದ "ರಾಮಣ್ಣಾರs," ಎಂದು ಒದರಿದ ದನಿ ಕೇಳಿತು. ಸಂಗಪ್ಪ ಎದ್ದು ಹೊರಗೆ ಹಣಿಕಿ ನೋಡಿದ. ಗಾಬರಿಯಿಂದ ಒಳಗೆ ಬಂದು, "ಜಮಾದಾರರು ಇಲ್ಲೇ ಬಂದರ್ರಿ!" ಎಂದ.

ರಾಮೂ ಲಗುಬಗೆಯಿಂದ ಎದ್ದು, ಹಾಸಿಗೆ ಸುತ್ತಿ "ಬರ್ರಿ, ಗೌಡರs" ಎಂದ. ಗೌಡರೂ, ಜಮಾದಾರರೂ, ಬಗಲಲ್ಲಿ ಖಾಕಿಯ ಚೀಲವನ್ನು ಜೋತುಬಿಟ್ಟುಕೊಂಡಿದ್ದ ಸಿಪಾಯಿಯೂ, ಒಳಗೆ ಬಂದರು.

ಜಮಾದಾರರ ಮುಖದ ಮೇಲೆ ರಾವಿನ ಕಳೆಯಿರಲಿಲ್ಲ. ಕುತೂಹಲ ಒಡೆದು ಕಾಣುತಿತ್ತು. ರಾಮೂ ಧೈರ್ಯಗೊಂಡ.

"ನಮಸ್ಕಾರರೀ ರಾಯರs, ಗೊತ್ತು ಹತ್ತಿತೇನು ನನ್ದು ?" ಎಂದರು ಜಮಾದಾರರು.

ರಾಮೂನ ಮುಖ ಹುಚ್ಚಿಟ್ಟಿತು. 'ಇಲ್ಲ' ಎನ್ನಲು ಧೈರ್ಯವಾಗಲಿಲ್ಲ.

"ಹಿಂದಕ್ಕ ಗಾಡಿಯಾಗ ಕೂಡಿದ್ವಿ. ನೆನಪಿಲ್ಲರೀ ? ನೀವು ನಿಮ್ಮ ವೀಣಾ ಬಾರಿಸಿದ್ದಿರಲ್ಲ!" ಎಂದು ಜಮಾದಾರರು ನೆನಪು ಮಾಡಿಕೊಟ್ಟರು.

ರಾಮೂನ ಮುಖ ಹಿಗ್ಗಿತು. ನೆನಪಿಟ್ಟು ಬಂದುದಕ್ಕಾಗಿ ಆನಂದವನ್ನೂ ಕೃತಜ್ಞತೆಯನ್ನೂ ವ್ಯಕ್ತಮಾಡಿದನು. ಜಮಾದಾರರು ಮೂಲೆಯಲ್ಲಿಯ ವೀಣೆಯನ್ನು ನೋಡಿ ಬಾರಿಸಲು ಕೇಳಿಕೊಂಡರು. ಆತ ಅತ್ಯಾನಂದದಿಂದ ತನ್ನಲ್ಲಿದ್ದ ಚಾತುರ್ಯವನ್ನೆಲ್ಲ ತೋರಿ ಜಮಾದಾರರ ಕಿವಿಗಳಿಗೆ ಇಂಪು ಮಾಡಿದನು. ವೀಣೆ ಬಾರಿಸುವದು ಮುಗಿದ ಮೇಲೆ, ಬಾಗಿಲ ಹಿಂದೆ ಕುಳಿತ ಸಂಗಪ್ಪನಿಗೆ ಹೊರಗೆ ಹೋಗಲು ಸನ್ನೆ ಮಾಡಿ, ಜಮಾದಾರರು ಎಂದರು:

"ಈ ಊರಿಗೆ ಬಂದು ಎಷ್ಟು ದಿನಾ ಆಯ್ತು ರಾಯರs ?"

"ಗಾಡೀಯೊಳಗ ನಾವು ಭೆಟ್ಟಿ ಆದಾಂತೊಟ್ನೂ ಇಲ್ಲೇ ಇದ್ದೇನಿ."

"ಇಲ್ಲಿ ಯಾಕs ?"

"ಬಡವ. ಎಲ್ಲಿಯಾದರೂ ಹೊಟ್ಟೀ ತುಂಬಿಕೊಳ್ಳೋದು. ಇಲ್ಲಿ ಅನ್ನ ಸಿಗುವಾಂಗ ಕಂಡಿತು. ಬಂದೆ."

ಜಮಾದಾರರು ಮೆಲ್ಲಗೆ ಅಂದರು: “ ರಾಯರಽ ಖಾಸಗೀ ರೀತಿಯಿಂದ ನಿಮಗೊಂದು ಮಾತು ಹೇಳತೇನಿ. ಈ ಊರ ಜನ ಭಾಳ ಕಿತಿಬಿಯವರು ಇದ್ದಾರ. ಯಾವ ಹೊತ್ತಿನಾಗ ಯಾವ ಪೇಚಿಗೆ ಸಿಗಿಸ್ಯಾರು ತಿಳಿಯೋದಿಲ್ಲ. ಅದಕ್ಕ ನೀವು ಇಲ್ಲಿಂದಾ ಆದಷ್ಟು ಬ್ಯಾಗನಽ ಹೊರಗ ಬೀಳ್ರಿ. ಈ ಊರಿಲ್ಲ; ಇನ್ನೊಂದೂರು. ಹುಟ್ಟಿಸಿದ ದೇವ್ರು ಹುಲ್ಲು ಮೇಯಿಸದಽ ಇರತಾನ ಽ? ಬೇಕಾದರ........ ” ಜಮಾದಾರರು ತಮ್ಮ ಜೊತೆಗಿದ್ದ ಸಿಪಾಯಿಯ ಕಡೆಗೆ ನೋಡಿದರು. ಆ ಸಿಪಾಯಿ ದಂಡಿನ ಭರತಿಯ ಕೆಲಸ ಮಾಡುತ್ತಿದ್ದನೋ ಏನೋ. ಜಮಾದಾರರ ಮಾತನ್ನು ಮುಂದೆವರಿಸಿದನು. ಸೈನ್ಯ ಭರತಿಯಲ್ಲಿ ಚನ್ನಾಗಿ ನುರಿತ ಆತನು ತನ್ನ ವಾಕ್ಚಾತುರ್ಯವನ್ನೆಲ್ಲ ಉಪಯೋಗಿಸಿ ಸೈನ್ಯದಲ್ಲಿರುವದು ಯಾವ ರೀತಿಯಿಂದಲೂ ನಷ್ಟವಲ್ಲವೆಂದೂ ಎಲ್ಲ ರೀತಿಯಿಂದಲೂ ಹಿತವುಳ್ಳದ್ದೆಂದೂ ಮನವರಿಕೆ ಮಾಡಿಕೊಟ್ಟನು; ದೊಡ್ಡ ದೊಡ್ಡ ಪದವಿಧರರು ಸಹ ‘ ನಾ ಮುಂದೆ ನೀ ಮುಂದೆ’ ಎಂದು ಸೇರಿ ಕೊಂಡು ಸುಖದಿಂದ ಮೆರೆಯುತಿದ್ದುದನ್ನು ಉದಾಹರಿಸಿದನು; ಸೇನೆಯ ವಿಷಯದಲ್ಲಿ ಜನರಲ್ಲಿರುವ ತಪ್ಪುತಿಳುವಳಿಕೆಯನ್ನು ಹೋಗಲಾಡಿಸಿ, ಬಾಂಬಿನ ಈ ಯುದ್ಧದಲ್ಲಿ ಸೈನ್ಯದಲ್ಲಿ ಇರುವವರಿಗಿಂತ ಹೊರಗಿನವರಿಗೇ ಹೆಚ್ಚು ಅಪಾಯವಿರುವದೆಂಬುದನ್ನು ವಿಶದಪಡಿಸಿದನು; ಹೊಟ್ಟೆ ತುಂಬ ಆಹಾರ, ಮೈತುಂಬ ಬಟ್ಟೆ, ಸಿಗುವದಲ್ಲದೇ ಕೈತುಂಬ ದುಡ್ಡೂ ದೊರೆಯುವ ದಾಗಿ ಆಶೆದೋರಿದನು; ಕಲಾವಿದರಿಗಂತೂ ಸೇನೆಯಲ್ಲಿ ಬಹಳ ಮರ್ಯಾದೆ ಯೆಂಬುದನ್ನು ಸ್ಪಷ್ಟೀಕರಿಸಿದನು. ಮಾತು ಮುಗಿದಮೇಲೆ ಕಿಸೆಯೊಳಗಿನಿಂದ ಸಿಗರೇಟು ತೆಗೆದು ರಾಮೂನ ಮುಂದೆ ಇಟ್ಟನು.

ರಾಮೂ ವಿಚಾರ ಮಾಡಿದ. ಜಮಾದಾರರು ಹಾಕಿದ ಹೆದರಿಕೆಯಿಂದ ಮುಂಗಾಣದಾಗಿದ್ದ ಅವನಿಗೆ ಆ ಸಿಪಾಯಿಯ ಮಾತು ಆಶಾಕಿರಣವನ್ನು ತೋರಿತು. ಹೆಚ್ಚು ಹಿಂದು ಮುಂದು ನೋಡದೆ ಸೈನ್ಯವನ್ನು ಸೇರಲು ಒಪ್ಪಿಕೊಂಡ. ಆ ಸಿಪಾಯಿ ‘ ಶಾಬ್ಬಾಸ್ ’ ಎಂದು ರಾಮೂನ ಕೈ ಕುಲುಕಿದನು. ಎರಡು-ಮೂರು ದಿನಗಳಲ್ಲಿ ಹುಬ್ಬಳ್ಳಿಯ ತಮ್ಮ ಆಫೀಸಿನಲ್ಲಿ ತಪ್ಪದೇ ‘ ಹಾಜರ್ ’ ಆಗಬೇಕಾಗಿ ತಿಳಿಸಿದನು. ತಮ್ಮ ಆಫೀಸಿನ ವಿಳಾಸವನ್ನು ಬರೆದು ಕೊಟ್ಟು ರಾಮೂನ ಪೂರ್ಣ ಹೆಸರನ್ನೂ ಬರೆದು

ಕೊಂಡನು. ಮೂರು ದಿನಗಳಲ್ಲಿ ಹೊರಡದಿದ್ದರೆ, ಗೌಡರು ರಾಮೂನಿಗೆ ನೆನಪು ಕೊಡುವದಾಗಿ ಅವರಿಗೆ 'ತಾಕೀದಿ' ಮಾಡಿ, ಇಬ್ಬರೂ ಹೊರ ಹೊರಟರು.

## ೩೭

ಗಂಗಾಸಾನಿ ಪಾತರದವರ ಜಾತಿಯಲ್ಲಿ ಹುಟ್ಟಿದರೂ ಮೊದಲಿನಿಂದಲೇ ಬ್ರಾಹ್ಮಣ ಸಮಾಜದಲ್ಲಿಯೇ ಹೆಚ್ಚು ಬಳಕೆಯಿದ್ದಿತಾದ್ದರಿಂದ, ಅವರ ನಡೆ ನುಡಿ, ಆಚಾರ ವಿಚಾರ, ಸಂಪ್ರದಾಯ ಪದ್ಧತಿ ಮುಂತಾದವುಗಳನ್ನೆಲ್ಲ ಅರಗಿಸಿಕೊಂಡಿದ್ದಳು. ಅಂತೆಯೇ ಆಕೆಗೆ ಅವರ ಸಂಸ್ಕೃತಿಯಲ್ಲಿ ಅಭಿರುಚಿ ಯಿತ್ತು. ಅವರ ಬಗ್ಗೆ ಅಭಿಮಾನ ಸಹಾನುಭೂತಿಗಳಿದ್ದವು. ಆದರೂ ಕೆಲ ವೊಂದು ವ್ಯಕ್ತಿಗಳು ತಮ್ಮ ರೀತಿ-ನೀತಿಗಳನ್ನು ಬಿಟ್ಟು ಶಾಸ್ತ್ರಧರ್ಮಗಳಿಗೆ ಅಪಾರ್ಥ ಹಚ್ಚಿ ಅಡ್ಡದಾರಿ ಹಿಡಿಯುತ್ತಿದ್ದುದು ಅವಳಿಗೆ ಸರಿಬರುತ್ತಿರ ಲಿಲ್ಲ. ಅದರಲ್ಲಿಯೇ ತನ್ನ ಸ್ವಾಮಿಯೆಂದು ತಿಳಿದುಕೊಂಡಿದ್ದ ಶ್ರೀಕಂಠ ಶಾಸ್ತ್ರಿಗಳು ಅವಳ ಮನಸ್ಸನ್ನು ಒಂದಲ್ಲ ಹತ್ತು ಸಲ ನೋಯಿಸಿದ್ದುದುಂಟು. ಆದರೆ ಶಂಕರಭಟ್ಟರಿಗೆ ಬಹಿಷ್ಕಾರ ಹಾಕಿದ ದಿನದಷ್ಟು ಆಕೆ ಹಿಂದೆಂದೂ ನೊಂದಿರಲಿಲ್ಲ. ಶಂಕರಭಟ್ಟರು ಊಟಮಾಡದೆ ಎಲ್ಲಿಯೊ ಹೋದ ಸಮಾಚಾರ ವನ್ನು ಸುಭಗೆ ಹೌಹಾರಿ ಆಕೆಗೆ ನಿವೇದಿಸುವ ಅಸಹಾಯ್ಯಪರಿಸ್ಥಿತಿಯನ್ನು ನೋಡಿ ಗಂಗಾಸಾನಿ ಅತಿಯಾಗಿ ವ್ಯಥೆಗೊಂಡಳು. ಇಷ್ಟೆಲ್ಲ ಅನಾಹುತಕ್ಕೆ ಶ್ರೀಕಂಠಶಾಸ್ತ್ರಿಗಳೇ ಕಾರಣರೆಂದು ಅವರ ಮೇಲೆ ಕಿಡಿಕಿಡಿಯಾದಳು. ಅವರ ಮನೆತನಕಾ ಹೋಗಿ ಒಮ್ಮೆ ಚನ್ನಾಗಿ ಮಾತಾಡಿಸಿ ಬರಲಾ ಅವರನ್ನು ಎನಿಸಿತು. ಮರುಕ್ಷಣ ಅವರ ಮುಖವನ್ನೂ ನೋಡುವದು ಬೇಡ ಎಂದು ನಿಶ್ಚಯಿಸಿಕೊಂಡಳು. ಅಂತೆಯೇ ತನ್ನ ದುಃಖವನ್ನು ಹತ್ತಿಕ್ಕಿಕೊಂಡು, ಮನೋವೇದನೆಯ ಅತಿರೇಕದ ಮೂಲಕ ಎರಡು ದಿನ ಬಾವಿಗೂ ಹೋಗ ಲಿಲ್ಲ. ಗುಡಿಗೂ ಹೋಗಲಿಲ್ಲ. ದೇವರ ದರ್ಶನವಿಲ್ಲದೆ ಮನ ಚಡಪಡಿಸಿ ದಾಗ, ಜಗುಲಿಯ ಮೇಲಿನ ದೇವರ ದರ್ಶನದಿಂದಲೇ ಮನಸ್ಸನ್ನು ಸಂತೈಸಿ ಕೊಂಡಳು.

ಶ್ರೀಕಂಠಶಾಸ್ತ್ರಿಗಳಿಗೆ ಗೊತ್ತು—ಗಂಗಾಸಾನಿ ಕಣ್ಣಿಗೆ ಬೀಳದಾಕ್ಷಣ ಆಕೆಗೆ ಸಿಟ್ಟುಬಂದಿರಲು ಬೇಕು ಎಂದು. ಇಂಥ ಸಮಯದಲ್ಲೆಲ್ಲ ಅವರೇ ಆಕೆಯ ಮನೆಗೆ ಬಂದು, ಬೆಕ್ಕು ಸುಳಿದಾಡಿದಂತೆ ಸುಳಿದಾಡುತ್ತ, ಆಕೆಯನ್ನು ಕೆದಕೆದರಿ ಮಾತಾಡಿಸುತ್ತ, ನಿಲ್ಲುವದೂ ಉಂಟು.

ಗಂಗಾಸಾನಿಯ ಹತ್ತಿರ ಈ ದಿನ ಶ್ರೀಕಂಠಶಾಸ್ತ್ರಿಗಳ ಒಂದು ಕೆಲಸವೂ ಇತ್ತು.

ಶ್ರೀಕಂಠಶಾಸ್ತ್ರಿಗಳು ಮನೆಗೆ ಬಂದದ್ದು ಗಂಗಾಸಾನಿಗೆ ನಡುಮನೆಯಲ್ಲಿ ಬಿದ್ದ ಅವರ ನೆರಳಿನಿಂದಲೇ ತಿಳಿಯಿತು. ಆಗ ಆಕೆ ಅಂಟಾಳು ಕಾಯಿಯ ಬುರುಗಿನಿಂದ ದೇವರ ಚವರಿಯ ಕೂದಲುಗಳನ್ನು ತೊಳೆಯುತ್ತಿದ್ದಳು. ಶ್ರೀಕಂಠಶಾಸ್ತ್ರಿಗಳನ್ನು ಕಂಡರೂ ಕಾಣದಂತೆ, ಮುಂದೆ ನೋಡಿ ತನ್ನ ಕೆಲಸದಲ್ಲಿ ತೊಡಗಿದಾಕೆ, ಮುಖವನ್ನು ಸಹ ಹೊರಳಿಸಿ ನೋಡಲಿಲ್ಲ.

"ಏನು ನಡದೂದ ?"

ಗಂಗಾಸಾನಿ ಮಾತನಾಡಲಿಲ್ಲ.

"ಹಬ್ಬಿಲ್ಲ, ಹುಣ್ವಿಲ್ಲ ; ಈಗ್ಯಾಕ ಚವರೀ ತಿಕ್ಕೋದು ?"

"............ ..."

"ಯಾಕೇ ಸಿಟ್ಟು ಭರ್ಜರಿ ಬಂದ ಹಾಂಗ ಕಾಣತsದ ?"

ಆಕೆಗೆ ತಡೆಯುವದು ಆಗಲಿಲ್ಲ. ಮನಸ್ಸಿನಲ್ಲಿದ್ದ ಸಿಟ್ಟನ್ನೆಲ್ಲ ಹೊರಗೆ ಹಾಕಿ ಕೇಳಿದಳು :

"ಈಗ ಸಮಾಧಾನ ಆಗಿರಬಹುದು ನಿಮಗ, ಆ ಬಡಪ್ರಾಣೀ ಊರು ಬಿಟ್ಟು ಓಡಿಸಿ !"

ಶ್ರೀಕಂಠಶಾಸ್ತ್ರಿಗಳು ಗಹಗಹಿಸಿ ನಕ್ಕು ಕೇಳಿದರು :

"ಓಹೋ ; ಅದಕ್ಕs ಬಂದೂದೇನು ಸಿಟ್ಟು ? ಅಂತಾನs ಎರಡು ಮೂರು ದಿನ ಮಾರೀನs ತೋರಿಸಿಲ್ಲ. ನಿಂದೇನು ಹೋದೀತು ? ನಮ್ಮ ಸಮಾಜದ ಜವಾಬ್ದಾರಿ ನನ್ನ ಮ್ಯಾಲೆ ಅದ. ಮಠದಿಂದಾ ನನಗೆ ಇನಾಮು ಅದ. ಊರಾಗ ಲಗ್ನ-ಮುಂಜಿ ಆದ್ರ, ಮಠದ ಬಾಬು ಮರ್ಯಾದಿ ನನ್ನ ಮನೀಗೆ ಬರತಾವ. ಅವನ್ನೆಲ್ಲ ಉಪಭೋಗಿಸಲಿಕ್ಕೆ ಬೇಕು ; ಸಮಾಜದಾಗ ಅನೀತಿ ಆದ್ರ, ಅದಕ್ಕೆ ಯೋಗ್ಯ ಪ್ರಾಯಶ್ಚಿತ್ತ ಮಾಡೋದು ಬ್ಯಾಡs ?

ಶಂಕರಭಟ್ಟನ ಮನೀ ಹೊಲಸು ಸ್ವಾಮಿಗಳ ಕಿವೀಗೆ ಬಿತ್ತು ಅಂದ್ರ, ಅವರು ನನ್ನs ಹಿಡಿದು ಕೇಳತಾರ 'ಸುಮ್ಮನs ಯಾಕ ಕೂತಿ ನಮ್ಮ ನಜರಿಗೆ ತರದs?' ಅಂತಾ. ಶಂಕರಭಟ್ಟಗ ನಾನೇನೂ ಊರುಬಿಟ್ಟು ಹೋಗು ಅಂತಾ ಹೇಳಿಲ್ಲ. ನಿಯಮಕ್ಕ ಹೊರತಾದವರನ್ನು ಸಮಾಜದಿಂದ ಹೊರಗಿಡೋದು ನನ್ನ ಕರ್ತವ್ಯ; ಅಷ್ಟು ಮಾಡೇದ. ಇದರಾಗ ನನ್ನದು ತಪ್ಪರs ಏನು ಅದs?"

ಹೀಗೆನ್ನುತ್ತ ಅವರು ಗಂಗಾಸಾನಿಯು ಕುಳಿತ ಗೋಡೆಯ ಎದುರಿನ ಗೋಡೆಗೆ ಬೆನ್ನು ಆನಿಸಿ ಕುಳಿತುಕೊಂಡರು. ನಸಿಯಪುಡಿಯ ಡಬ್ಬಿಯನ್ನು ನೆಲದ ಮೇಲೆ ಬೊಗರೆಯಂತೆ ತಿರುಗಿಸುತ್ತ, ಅದನ್ನೇ ನಿಟ್ಟಿಸಹತ್ತಿದರು.

"ಅವರು ಮಾಡಿರೋ ತಪ್ಪರs ಏನು? ನೀವs ಹೇಳಿರಿ ನೋಡೋಣ. ಅವರಂತಾ ಧರ್ಮಿಷ್ಟ ಬ್ರಾಂಬರು ಈ ಊರಾಗ ಯಾರರs ಇದ್ದಾರೇನು? ಸುಮ್ಮನs ಅವರಿಗೆ ಬಹಿಷ್ಕಾರಾ ಹಾಕಿದ್ದು ಅನ್ಯಾಯ ಅಲ್ಲೇನು ಮತ್ತ?"

"ಅಲ್ಲs ಹುಚ್ಚಿ! ಶಂಕರಭಟ್ಟ ತಪ್ಪು ಮಾಡ್ಯಾನ ಅಂತಾ ಯಾರು ಅಂತಾರ ಈಗ? ಆತನ ಮಗಳು ದಾರೀ ತಪ್ಪಿ ನಡದಾಳs ಅಂತಾ, ಆ ಮನಿತನಕ್ಕ ಬಹಿಷ್ಕಾರ ಹಾಕೇದ. ತಿರಿಗಿ ಕೇಳಿದ್ರ, ಅವನದೂ ತಪ್ಪs ಅದ. ಇಷ್ಟು ದಿನ ಆದ್ರೂ, ಮಗಳಿಗೆ ಮದೀ ಮಾಡಸದs ಸುಮ್ಮನೇ ಕೂತದ್ದು ತಪ್ಪು ಅಲ್ಲs? ಮನಿಯಾಗ ಹರೇದ ಮಗಳನ ಇಟಗೊಂಡು ಬೆಳತನ ಹಿಂಡು ಹೊಲೆಯಾರ ಜೋಡಿ ಕುಣಿಯೋದು ತಪ್ಪಲ್ಲs? ಮನಿಯ್ಯಾಗ ಹೊಲಸು ಇಟಗೊಂಡು, ದೇವರ ತಲೀಮ್ಯಾಲೆ ನೀರು ಹಾಕೋದು ತಪ್ಪಲ್ಲs?"

"ಅಯ್ಯೋ ಪಾಪ, ಎಂಥಾ ಅನ್ಯಾಕಾರರೀ ನೀವು. ಆಣೀ ಮಾಡಿ ಹೇಳು ಅಂದ್ರೂ ಹೇಳತೀನಿ, ಆ ಕೂಸಿನಂಥ ಮನುಷ್ಯರಿಗೆ ನಿನ್ನೆ ಮೊನ್ನಿನ ತನಕ ಏನೂ ಗೊತ್ತಿದ್ದಿಲ್ಲ. ಸುಳ್ಳ ಅನ್ಯಾಯದಿಂದ ಅವರಿಗ್ಯಾಕ ಅಂತೀರಿ?" ಎನ್ನುತ್ತ ಗಂಗಾಸಾನಿ ಒಳಗೆ ಹೋಗಿ ಚವರಿಯನ್ನು ಇಟ್ಟು ಬಂದಳು. ಬಾಗಿಲಲ್ಲಿಯೇ ಕೈಕಟ್ಟಿ ಚೌಕಟ್ಟಿಗೆ ಆತು ನಿಂತಳು. ಮುಖದ ಮೇಲೆ ಎಂದೂ ಕಾಣದ ನಿಷ್ಠುರತೆ ಒಡಮೂಡಹತ್ತಿತು. ಅವಳೇ ಸುರು ಮಾಡಿದಳು.

"ನೀವು ನನಗೆ ಕೆಟ್ಟ ಹೆಣ್ಣುಮಗಳು ಅಂದ್ರೂ **ಚಿಂತಿಲ್ಲ**; ನಿಮ್ಮ

ಸಮಾಜದಾಗ ಗಂಡಸರಿಗೆ ಒಂದು ನೀತಿ; ಹೆಂಗಸರಿಗೆ ಒಂದು ನೀತಿ."

"ಅಂದ್ರೇನು? ನೀತಿ, ನೇಮ, ಮನುಷ್ಯರು ಮಾಡಿದ್ವಽ? ಧರ್ಮದಾಗ ಗಂಡಸರು ಹೆಂಗಸರು ಅಂಬೋ ಭೇದಭಾವ ಹ್ಯಾಂಗ ಇರತಽದ?"

ಗಂಗಾಸಾನಿಯು ಮುಖ ಉಗ್ರಸ್ವರೂಪ ತಾಳಿತು. ಅವಳ ಹೃದಯದಲ್ಲಿ ಹುದುಗಿದ್ದ ತಳಮಳ ಶಬ್ದರೂಪದಿಂದ ಹೊರಹೊಮ್ಮಿತು.

"ಆ ಕೂಸು— ಸುಭಗಾ— ಸಣ್ಣದಿರೋವಾಗ ಅದಕ್ಕ ಏನೂ ಗೊತ್ತಿಲ್ಲದಾನಽ ಒಂದು ಕೊಳಕ ಗಂಡನ್ನ ಗಂಟು ಹಾಕಿದಿರಿ ನೀವಽ. ಸಂಸಾರ ಅಂಬೋದು ಏನು ಅಂಬೋ ಅರಿವು ಆಗೋದ್ರಾಗಽ ಗಂಡನ್ನ ಕಳಕೊಂಡಿತು. ದೊಡ್ಡದಾದ ವ್ಯಾಲೆ ಸೆಳವಿಗೆ ಸಿಕ್ಕು ಜ್ಯಾರಿತು.—ನಾನು ಸುಭಗಾನ್ನ ಮೇಲುಗಟ್ಟಿ ಮಾತಾಡತೇನಿ ಅಂತ ತಿಳೀ ಬ್ಯಾಡ್ರಿ. ಆಕಿ ಮಾಡಿದ್ದು ತಪ್ಪು ಅಂತಾ ನಾನು ಒಪ್ಪಿಗೋತೇನಿ. ಅಂಥಾ ತಪ್ಪಿಗೆ ನಿಮ್ಮ ಸಮಾಜದಾಗ ಸ್ಥಾನ ಇಲ್ಲ, ಇರಬಾರದು, ಅಂಬೋದನ್ನೂ ಒಪಿಗೋತೇನಿ.- ಆದ್ರ ಇದಽ ನೇಮ ಗಂಡಸರಿಗೂ ಹತ್ತಬೇಕೋ ಬ್ಯಾಡೊ?"

ಗಂಗಾಸಾನಿ ಶ್ರೀಕಂಠಶಾಸ್ತ್ರಿಗಳನ್ನು ದುರುದುರು ನೋಡುತ್ತ ಅವರ ಉತ್ತರದ ನಿರೀಕ್ಷಣೆ ಮಾಡಿದಳು.

"ಹೌದು ಮತ್ತ. ನೀತಿ ಅಂದಮ್ಯಾಲೆ ಗಂಡಸರೇನು, ಹೆಂಗಸ್ರೇನು?" ಎಂದು ಶ್ರೀಕಂಠಶಾಸ್ತ್ರಿಗಳು ಡಬ್ಬಿಯನ್ನು ತೂರಿ ಹಿಡಿದರು.

ಗಂಗಾಸಾನಿಯು ಮಾತಿನ ಸೆಡವು ಹೆಚ್ಚಿತು:

"ಹಂಗಾರ, ಈಗ ನಿಮ್ಮ ಉದಾಹರ್ಣೀನಽ ತೊಗೊಳ್ರಿ. ಸುಭಗಾ ಗಂಡನ್ನ ಕಳಕೊಂಡು ಅಡ್ಡದಾರಿಗೆ ಬಿದ್ದಳು. ನೀವು? ಮನಿಯಾಗ ಗರತಿ ಗಂಗಿಯಂಥಾ ಹೆಂಡತಿಗೆ ಚಿತ್ರಹಿಂಸಾ ಕೊಟ್ಟು, ನನ್ನ ಇಲ್ಲಿ ತಂದು ಇಟಗೊಂಡೀರಿ. ನೀವು ಗಂಡಸರು. ನೀವು ಮಾಡಿದ್ದು ಇದು ನೀತಿ! ಆ ಹುಡುಗೀದು ಅನೀತಿ. ಆಕಿಗೆ ಬಹಿಷ್ಕಾರ ಹಾಕಿದರ, ನಿಮಗ ಯಾಕ ಹಾಕಬಾರದು? ನಾನು ನಿಮಗ ಹೀಂಗ ಅನಬಾರದು. ನೀವು ನನ್ನ ಯಜಮಾನರು. ಆದ್ರೂ ನೀವು ಹೂಡಿದ ಕುತಂತ್ರಕ್ಕ ನಾನು ನೊಂದು ತಲೀಕೆಟ್ಟು ಈ ಮಾತು ಆಡಲಿಕ್ಕೆ ಹತ್ತೇನಿ."

ಆಕಳಿಸುತ್ತ, ಆಕಳಿಸಿದಾಗೆಲ್ಲ ಬೆರಳುಗಳನ್ನು ತೆರೆದ ಬಾಯಿಯ ಮುಂದೆ ಹಿಡಿದು ಲೊಟಗೆ ಹೊಡೆಯುತ್ತ ಕುಳಿತ ಶ್ರೀಕಂಠಶಾಸ್ತ್ರಿಗಳು ಗಂಗಾಸಾನಿಯ ಮಾತು ಕೇಳಿ ಹುಸಿನಗೆ ನಕ್ಕು ಅಂದರು:

" ಆಹಹ....ಅದಕೂ ಇದಕೂ ಸಂಗತಿ ಏನು ? "

ಅವರ ನಗೆ ಗಂಗಾಸಾನಿಯ ಉದ್ವೇಗವನ್ನು ಇನ್ನೂ ಹೆಚ್ಚಿಸಿತು.

" ನಕ್ಕ ಹಾಂಗ ಅಲ್ಲ. ನಿಮ್ಮಂಥ ಡಾಂಭಿಕ ವ್ಯಕ್ತಿಗಳು ಹುಟ್ಟೀ ಕನ್ನಡಿಯಂಥಾ ಸಮಾಜದ ಮಾರಿಗೆ ಕಲೇ ಕೂಡಿಸಲಿಕ್ಕೆ ಹತ್ತೀರಿ. ಈಗ ನೀವು ನಿಮ್ಮ ಸಮಾಜ ಸ್ವಚ್ಛ ಉಳೀಬೇಕು ಅನ್ನೋ ಉದ್ದೇಶದಿಂದ ಸುಭಗಾಗ ತ್ರಾಸ ಕೊಡಲಿಕ್ಕೆ ಹತ್ತೀರಿ ಅಂತ ತಿಳಿದೀರೇನು ? "

" ಆ ಹುಡುಗೀ ಮ್ಯಾಲಿನ ದ್ವೇಷಕ್ಕ, ಅಸೂಯಾಕ್ಕ ಹೀಂಗ ಚಿಟಗ ಮೂಳ ಆಡಿಸೋ ಆಟಾ ನಡಸೀರಿ ! "

" ಅಂದ್ರ ? "

" ಈಗ ಹ್ಯಾಂಗ ತಿಳಿದೀತು. ತಡೀರಿ ಎರಡು ದಿನ. ನಾಳೆ ಸುಭಗಾನ್ನ ಕಟಗೊಂಡು ನಿಮ್ಮ ಸ್ವಾಮಿಗಳ ಕಡೀಗೆ ಹೋಗತೇನಿ. ಮುತ್ತಿನಂಥಾ ಹೆಂಡತೀ ಸುಖಾ ಮುಕ್ಕು ಮಾಡಿ, ನಿಮ್ಮನ್ನು ನಂಬಿದ್ದ ಪಾತರದಾಕಿಗೆ ಮೋಸ ಮಾಡಿ, ಮಗಳ ಸಮಾನ ಇದ್ದಂಥಾ ಆ ಎಳೀ ಕೂಸಿನ್ನ ಕೆಡಸಲಿಕ್ಕೆ ಹೋಗಿ, ಸಾಧ್ಯ ಆಗದ್ದಕ್ಕ ಇಷ್ಟೆಲ್ಲ ಕುತಂತ್ರ ನಡದದು ಅನ್ನೋದನ್ನ ಸಿದ್ಧ ಮಾಡಿ ತೋರಸತೇನಿ. ಅವರು ನಿಮಗೂ ಬಹಿಷ್ಕಾರ ಹಾಕತಾರೋ ಇಲ್ಲೋ ನೋಡತೇನಿ. ಹಾಕದು ಇದ್ದರ, ಅವರ ಮುಂದುನು ಸಾಯೋತನಕ ಉಪಾಸ ಮಾಡತೇನಿ. "

ಕೋಪಾತಿರೇಕದಿಂದ ಗಂಗಾಸಾನಿಯ ಮಾತು ಮುಂದೆ ಸಾಗಲಿಲ್ಲ. ಮಾತು ನಿಂತೊಡನೆ ದುಃಖವುಕ್ಕಿ ಸೆರಗಿನಿಂದ ಮೋರೆ ಮುಚ್ಚಿಕೊಂಡಳು. ಸುಭಗೆಯ ಮೇಲೆ ಕೈಮಾಡಲು ಹೋದದ್ದು ಯಾರಿಗೂ ಗೊತ್ತಿಲ್ಲವೆಂದು ತಿಳಿದ ಶ್ರೀಕಂಠಶಾಸ್ತ್ರಿಗಳ ಮುಖ ಆಕರಾಳ-ವಿಕರಾಳವಾಯಿತು. ಗಂಗಾಸಾನಿಯ ಸ್ವಭಾವವನ್ನು ಅವರು ಅರಿತಿದ್ದರಾದ್ದರಿಂದ, ಆಕೆ ಮನಸ್ಸು ಮಾಡಿದರೆ ಸ್ವಾಮಿಗಳ ವರೆಗೂ ಹೋಗಬಹುದೆಂದು ಎದೆಯೊಡೆದರು. ನ್ಯಾಯಾಧೀಶನ ಮುಂದೆ ನಿಂತ ಅಪರಾಧಿಯಂತೆ, ಪೌರ್ಣಿಮೆಯ ಬೆಳ್ದಿಂಗಳಿನಲ್ಲಿಯ

ಗಿಡದ ಎಲೆಯ ನೆಳಲಂತೆ ನಡುಗಹತ್ತಿದರವರು, ಗಂಗಾಸಾನಿಯ ಸಾನ್ನಿಧ್ಯ ದಲ್ಲಿ. ಅವಳ ಮಾತನ್ನು ಖಂಡಿಸುವ ಸಾಹಸ ಮಾಡಲಿಲ್ಲ. ಗಂಗಾಸಾನಿ ಅಲ್ಲಿ ಹೆಚ್ಚು ಹೊತ್ತು ನಿಲ್ಲದೆ, ಒಳಗೆ ಹೋಗಿಬಿಟ್ಟಳು.

ಶ್ರೀಕಂಠಶಾಸ್ತ್ರಿಗಳು ಕುಳಿತಲ್ಲಿಯೇ ಕುಳಿತರು. ಅರ್ಧ ತಾಸಿನ ವರೆಗೆ ಮಿಸುಕಾಡಲಿಲ್ಲ. ಕಣ್ಣೂ ಪಿಳುಕಿಸಲಿಲ್ಲ. ಅಂಜಿಕೆಯಿಂದಲೋ, ಪಶ್ಚಾತ್ತಾಪದಿಂದಲೋ, ಗಂಗಾಸಾನಿ ನೊಂದುಕೊಂಡಳೆಂಬ ಭಾವನೆಯಿಂದಲೋ, ಅವರ ಅಂತರಂಗ ಪರಿವರ್ತನೆಯ ಒಲವನ್ನು ತೋರಿಸಿತು. ಈ ಒಲವು ತಾತ್ಕಾಲಿಕವಾಗಿದ್ದರೂ ಇರಬಹುದು. ಇಂದಿನ ವರೆಗೆ ತಮ್ಮ ಹೀನವೃತ್ತಿಯ ಬಗೆಗೆ ಒಂದು ಕ್ಷಣವೂ ವಿಚಾರ ಮಾಡದವರು ಇಂದು ಅತ್ತ ಮನಸ್ಸು ತಿರುಗಿಸಿದರು. ತಮಗಿಂತ ಕಿರಿಯಳಾದ ಒಬ್ಬ ಹೆಂಗಸಿನಿಂದ ಬುದ್ಧಿಗಲಿಯ ಬೇಕಾಯಿತಲ್ಲ ಎಂದು ಈ ದಿನ ಅವರು ಒಂದು ಕ್ಷಣದ ಮಟ್ಟಿಗಾದರೂ ನಾಚಿದರು.

ಶ್ರೀಕಂಠಶಾಸ್ತ್ರಿಗಳು ಎದ್ದು ಅಡಿಗೆಯ ಮನೆಯಲ್ಲಿ ಹಣಿಕಿ ಹಾಕಿ ನೋಡಿದರು. ಗಂಗಾಸಾನಿ ಒಲೆಯ ಬಳಿ ಒರಗಿಕೊಂಡಿದ್ದಳು.

“ ಗಂಗಾ. ”

ಆಕೆ ಸುಮ್ಮನಿದ್ದಳು.

“ ಇಲ್ಲಿ ಕೇಳು ಗಂಗಾ. ನಾನು ತಪ್ಪು ಮಾಡೇನಿ. ತಪ್ಪು ಮಾಡಿದ್ದಕ್ಕ ನನಗ ಕೆಟ್ಟನಿಸೇದ. ಹೀಂಗ ಕೆಟ್ಟನಿಸಿದ್ದು ನನ್ನ ಜನ್ಮದಾಗs ಇದು ಮೊದಲನೇ ಸರತಿ.”

ಗಂಗಾಸಾನಿ ಈ ಬಗೆಯ ಮಾತಿನ ಸರಣಿಯನ್ನು ಶ್ರೀಕಂಠಶಾಸ್ತ್ರಿಗಳ ಬಾಯಿಯಿಂದ ಎಂದೂ ಕೇಳಿರಲಿಲ್ಲ. ಆಕೆ ಎದ್ದು ಕುಳಿತು ಕೇಳಿದಳು:

“ ಈಗ ಏನು ಮಾಡಬೇಕು ಅಂತೀರಿ ? ”

“ ನೀನು ಹೇಳಿದಾಂಗ ನಡೀಲಿಕ್ಕೆ ತಯಾರು ಇದ್ದೇನಿ. ”

“ ನಿಮಗ ಖರೇವಂದ್ರೂ ಕೆಟ್ಟ ಅನಿಸೇದs ? ”

“ ಅದನ್ನ ಸಿದ್ಧ ಮಾಡೋದು ಹ್ಯಾಂಗ ? ”

“ ಇನ್ನ ಮ್ಯಾಲಾದರೂ ಸುಧಾರಸತೀರಾ ? ”

“ ಸುಧಾರಸತೇನಿ ಅಂದಾಕ್ಷಣಕ್ಕs ನನ್ನಲ್ಲಿ ಸುಧಾರಣಿ ಆದಂಗs

ಆಯ್ತೇನು ? ಇನ್ನು ಮುಂದಿನ ನನ್ನ ನಡತಿ ನನ್ನ ಮಾತನ್ನ ಸಿದ್ಧ ಮಾಡಬೇಕು. ”

“ ನಾನು ಮುಂದೀನ್ನ ನಂಬತೇನಿ. ಅವರ ಮಾತಿನಾಗ ವಿಶ್ವಾಸ ಇಡತೇನಿ. ವಿಶ್ವಾಸ ಇಡೋದು ನನ್ನ ಕರ್ತವ್ಯ. ವಿಶ್ವಾಸ ಕೆಡಿಸಿಗೊಳ್ಳೋದರ ಪಾಪ-ಪುಣ್ಯ ಮುಂದೀಸುತ್ತು ” ಎನ್ನುತ್ತ ಗಂಗಾಸಾನಿ ಮೇಲೆ ಎದ್ದು ದೇವರ ಜಗುಲಿಯ ಮೇಲಿನ ಭಾಂಡಾರ ಬಟ್ಟಲವನ್ನು ತಂದು ಶ್ರೀಕಂಠಶಾಸ್ತ್ರಿಗಳ ಮುಂದೆ ಇಟ್ಟಳು. ಅವರಿಂದ ಭಾಂಡಾರವನ್ನು ಮುಟ್ಟಿಸಿ ಇನ್ನು ಮುಂದೆ ಅಡ್ಡದಾರಿ ಬೀಳುವದಿಲ್ಲವಾಗಿ ಆಣೆ ಮಾಡಿಸಿದಳು.

ಇಷ್ಟರಿಂದಲೇ ಗಂಗಾಸಾನಿಯ ಮುಖ ಹಿಗ್ಗಿತು. ಶ್ರೀಕಂಠಶಾಸ್ತ್ರಿಗಳ ಕೈಯಲ್ಲಿಯ ಭಾಂಡಾರವನ್ನು ತನ್ನ ಹಣೆಗೆ ಹಚ್ಚಿಕೊಂಡಳು. ಆ ಮೇಲೆ ಶ್ರೀಕಂಠಶಾಸ್ತ್ರಿಗಳು ಕೇಳಿದರು :

“ ಈಗ ಹೋಗಿ. ಬೇಕಾದರ ಸುಭಗಾಗ ಸಮಜೂತು ಹೇಳಿ ಬರಲೇನು ? ”

“ ಸುಭಗಾನ ಗೊಡವೀ ಸದ್ಯ ಬಿಟ್ಟುಬಿಡಿರಿ. ಆಕಿ ಒಂದು ಥರಾ ಸ್ವಭಾವದ ಹುಡಿಗಿ ಇದ್ದಾಳ ; ಹಟಮಾರೀನೂ ಇದ್ದಾಳ. ನಿನ್ನೆಲ್ಲ ಆಕೀ ಜೋಡಿ ಮಾತು ಕತಿ ಆಗೇದ. ಆಕಿ ಶಂಕರಭಟ್ಟರ ದಶಿಂದಾ ಮಾತ್ರ ಮನಸಿಗೆ ಹಚಿಗೊಂಡಾಳ. ಅವರು ಹೋದ ತೊಟ್ಟು ಆಕಿ ಉಂಡಿಲ್ಲ ; ನಿದ್ದೀ ಮಾಡಿಲ್ಲ. ಹೀಂಗ ಬಿಟ್ರ ಆಕೀಗೆ ಹುಚ್ಚರ ಹಿಡಿತದ : ಕೆರಿ-ಬಾವೀ ಪಾಲರ ಆಗತಾಳ. ”

“ ಹಂಗಾದರ ಈಗ ಮುಂದಿನ ವಿಚಾರ ಏನು ? ”

ಗಂಗಾಸಾನಿಗೆ ಒಂದು ಹಂಚಿಕೆ ಹೊಳೆಯಿತು.

ಊರ ತುಂಬ ಗೊರವರಿದ್ದರು. ವರ್ಷದಲ್ಲಿ ಎಂಟು ತಿಂಗಳು ಅವರು ಪರಸ್ಥಳದಲ್ಲಿಯೇ ಇರುವವರಾದ್ದರಿಂದ ಅವರಿಗೆ ಸುತ್ತಲಿನ ಹಳ್ಳಿಗಳಲ್ಲಷ್ಟೇ ಅಲ್ಲ ; ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಸಾಕಷ್ಟು ಪತ್ತು ಇದ್ದಿತು. ಹತ್ತು ಮಂದಿ ಗೊರವರನ್ನು ಹಳ್ಳಿಯ ಮೇಲೆ ಬಿಡಲು ಆಕೆ ಶ್ರೀಕಂಠಶಾಸ್ತ್ರಿಗಳಿಗೆ ಹೇಳಿದಳು. ಶಂಕರಭಟ್ಟರು ದೂರ ಹೋಗಿರಲು ಸಾಧ್ಯವೇ ಇಲ್ಲವೆಂದು ಅವಳ ಮತ. ಯಾಕಂದರೆ ಅವರಿಗೆ ಹೆಚ್ಚು ಜನರ ಪರಿಚಯವಿರಲಿಲ್ಲ ;

ದೂರ ಹೋಗಿಯೂ ಗೊತ್ತಿರಲಿಲ್ಲ. ಅಂತೆಯೇ ಆರೇಳು ದಿನಗಳಲ್ಲಿ ಗೊರವರು ಶಂಕರಭಟ್ಟರನ್ನು ಹುಡುಕಿ ತರಬಹುದೆಂದು ಆಕೆಯ ನಂಬಿಕೆ. ಬಹಿಷ್ಕಾರ ವನ್ನು ಹಿಂದೆಗೆದುಕೊಳ್ಳುವದಾಗಿಯೂ ಸುಭಗೆ ಅವರ ದೆಸೆಯಿಂದ ಮನಸ್ಸಿಗೆ ಹಚ್ಚಿಕೊಂಡಿರುವದಾಗಿಯೂ ಪ್ಲೇಗಿನಿಂದ ಜನರೆಲ್ಲ ಊರು ಬಿಟ್ಟು, ಊರಲ್ಲಿ ಸುಭಗೆಯೊಬ್ಬಳೇ ಇರುವಳೆಂದೂ ಹೇಳಿ ಕಳಿಸಲು ತಿಳಿಸಿದಳು. ಗೊರವರ ಖರ್ಚಿಗಾಗಿ ಐವತ್ತು ರೂಪಾಯಿಗಳನ್ನು ಕೊಟ್ಟಳು.

ಈ ಸಮಯದಲ್ಲಿ ಇನ್ನೊಂದು ಮಾತು ಶ್ರೀಕಂಠಶಾಸ್ತ್ರಿಗಳ ನಾಲಿಗೆಯ ತುದಿಯ ವರೆಗೆ ಬಂದಿತ್ತು.

ಊರ ಜನರೆಲ್ಲ ಆಗಲೇ ಬೆಟ್ಟದ ಕೆಳಗೆ ಗುಡಿಸಲುಗಳನ್ನು ಹಾಕಿ ಕೊಂಡಿದ್ದರು. ಎಷ್ಟೋ ಜನ ಆಗಲೇ ಊರನ್ನೂ ಬಿಟ್ಟಿದ್ದರು. ಆದರೆ ಶ್ರೀಕಂಠಶಾಸ್ತ್ರಿಗಳಿಗೆ ತಗಡುಗಳು ಸಿಗದ್ದರಿಂದ ಸುಮ್ಮನೆ ಕೂಡುವ ಪ್ರಸಂಗ ಬಂದಿತ್ತು. ಈ ದಿನ ಅವರು ಗಂಗಾಸಾನಿಯನ್ನು ದುಡ್ಡು ಕೇಳಲು ಬಂದಿದ್ದರು. ಈಗ ದುಡ್ಡಿನ ಮಾತು ಎತ್ತಿದರೆ ಆಕೆ ತಮ್ಮ ಆಶ್ವಾಸನದ ಅಪಾರ್ಥ ಮಾಡಿಕೊಂಡಾಳೆಂದು ಸುಮ್ಮನೆ ಹೊರಹೊರಟರು.

ಬಾಗಿಲ ಬಳಿ ಹೋದಾಗ ಅವರು ಹಿಂದೆ ತಿರುಗಿ ಅಂದರು :

"ಅಲ್ಲs ಗಂಗಾ, ಕೆಳಗ ಈಗ ಗುಡಸಲಾ ಹಾಕೋ ಕೆಲಸ ಸುರುವು ಆಗೇದ. ನಮ್ಮ ಗುಡಸಲದ ಹತ್ತರs ತಗಡು ಹೊಡೆಸಿ ಬಿಡತೇನಿ ?"

"ನನಗs ? ಎಲ್ಲಿಯೂ ಬ್ಯಾಡ. ನಾನೇನೂ ಊರು ಬಿಡೋದಿಲ್ಲ."

"ಹುಚ್ಚೀ, ಇಲ್ಲೇನು ಇದ್ದೀ, ಪ್ಲೇಗು ಜೋರು ಅದ. ಮೂರು ನಾಲ್ಕು ಮಂದಿ ಆಗಲೇ ಬ್ಯಾನಿಂದ ಬಿದ್ದಾರ.''

"ನನಗೇನೂ ಜೀವ ಬ್ಯಾಡ ಆಗೇದ ಅಂತ ಅಲ್ಲ. ಊರು ಹಾಳು ಹಾಳು ಸುರೀಲಿಕ್ಕೆ ಹತ್ತೇದ. ಆದರ, ನಾ ಊರು ಬಿಟ್ಟೆ ಅಂದ್ರ, ಸುಭಗಾ ಒಬ್ಬಾಕೇ ಆಗತಾಳ."

"ಆಕೀನೂ ಬರಲಿಲ್ಲ. ಇವತ್ತs ಗೊರವರನ್ನ ಕಳಿಸಿದೆ ಅಂದ್ರ, ಎರಡು ಮೂರು ದಿನದಾಗ ಶಂಕರಭಟ್ಟರನ ಎಲ್ಲಿದ್ರೂ ಹುಡುಕಿಕೊಂಡು ಬರತಾರ. ಅಷ್ಟರಾಗs ಬೇಕಾದರs ನಾನು ಅವರಿಗೂ ಒಂದು ಗುಡಿಸಲಾ ತಯಾರು ಮಾಡಿ ಇಡಸತೇನಿ. ಹ್ಯಾಂಗಾದರೂ ಅವರ ತಗಡೂ ಅವ."

"ಆಕಿ ಮನೀಬಿಟ್ಟು ಕಿತ್ತುದಿಲ್ಲಂತ. ಶಂಕರಭಟ್ಟರು ಬಂದ ಮ್ಯಾಲೆ ಸಹ ಆಕಿ ಇಲ್ಲೇ ಇರಾಕೀನs. ಮಂದಿಯಿಂದ ದೂರ ಇದ್ರs ಆಕಿಗೆ ಹೆಚ್ಚು ಸಮಾಧಾನಂತ. ಸಹಜೀಕ ಅದ, ಪಾಪ. ಅಂತಾನs ನಾನು ಆಕೀನ್ನ ಕಡಲಬಾರದು ಅಂತ ನಿಶ್ಚಯ ಮಾಡೇನಿ. ಶಂಭುಲಿಂಗಂತೂ ಇದ್ದs ಇದ್ದಾನ ನಮ್ಮನ್ನ ಕಾಯಲಿಕ್ಕೆ. ಆತನs ಅಲ್ಲವೇ ಪತಿತಪಾವನ?"

ಶ್ರೀಕಂಠಶಾಸ್ತ್ರಿಗಳು ಹೆಚ್ಚಿಗೆ ಮಾತನಾಡಲಿಲ್ಲ.

## ೩೮

ಜಮಾದಾರರ ಸಮಕ್ಷಮ ರಾಮೂನು ಮಾಡಿದ ನಿಶ್ಚಯ ಕದಲಲಿಲ್ಲ. ಆದರೂ ಅವನಿಗೆ ಸುಭಗೆಯನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೋಗಲೂ ಮನಸ್ಸಾಗಲಿಲ್ಲ. ಇತ್ತಂಡವಾದ ಮನಸ್ಸಿನಲ್ಲಿಯೇ ಎರಡು ದಿನಗಳನ್ನು ಕಳೆದನು. ಮೂರನೆಯ ದಿನವೂ ಅರ್ಧ ಹೋಯಿತು. ಸಂಜೆಯಾದಂತೆ ಆತನ ಮನ ಹುಬ್ಬಳ್ಳಿಯ ಕಡೆಗೆ ಓಡಹತ್ತಿತು. ಅದೊಂದು ದಿನ ಹಾಗೆಯೇ ಅನಿಶ್ಚಿತ ಪರಿಸ್ಥಿತಿಯಲ್ಲಿ ಕಳೆದದ್ದೇ ಆದರೆ, ಉದರನಿರ್ವಾಹದ ಪ್ರಶ್ನೆ ಹಾಗೆಯೇ ಉಳಿಯುವದೆಂದು ಅವನು ಹೆದರಿದ. ಬೆಳಗುಮುಂಜಾನೆಯ ಗಾಡಿಗೆ ಹುಬ್ಬಳ್ಳಿಗೆ ಹೋಗಿಯೇ ಬಿಡಬೇಕೆಂದೂ ಒಂದು ದಿನ ತಡವಾದುದು ಅಷ್ಟೇನೂ ಆಕ್ಷೇಪಾರ್ಹವಲ್ಲವೆಂದೂ ಬಗೆದನು. ತಾನು ಹುಬ್ಬಳ್ಳಿಗೆ ಹೋಗಬೇಕೆಂದು ಮಾಡಿದ ವಿಚಾರವನ್ನು ಬೇಕೆಂದೇ ಯಾರ ಮುಂದೆಯೂ ಹೇಳಿರಲಿಲ್ಲ. ಆದಿನ ಮೂರುಸಂಜೆಯ ಮುಂದೆ ಸಂಗಪ್ಪನಿಗೆ ಮಾತ್ರ ತಿಳಿಸಿದ್ದ.

ಸುಭಗೆಯನ್ನು ಕಾಣಬೇಕೆಂದೆನಿಸಿದಾಗ ಆತನು ಆಕೆಯಲ್ಲಿಗೆ ಸಂಜೆ ಎಂಟರ ಸುಮಾರಿಗೆ ಹೋಗುತ್ತಿದ್ದುದು ಅವನ ವಾಡಿಕೆ. ನಾಟಕವು ಮೂಲೆಗುಂಪಾದಂದಿನಿಂದ ಸುಭಗೆಯ ಮನೆಗೆ ಮಂದಿಯ ಕಣ್ಣು ತಪ್ಪಿಸಿಯೇ ಹೋಗುತ್ತಿದ್ದ. ಈ ದಿನ ಅವನಿಗೆ ಅಂಥ ಪ್ರಸಂಗವೇ ಬರಲಿಲ್ಲ. ಊರೆಲ್ಲ ಹೆಚ್ಚು ಕಡಿಮೆ ನಿರ್ಜನವೇ ಆಗಿದ್ದಿತು. ಎಲ್ಲೆಡೆಗೆ ಶಾಂತತೆ. ಊರೆಲ್ಲ ಹಾಳು

ಹಾಳು. ‘ ಜನರು ಈಗ ಸುಭಗೆಗೆ ಬಹಿಷ್ಕಾರ ಹಾಕಿದಂತೆಯೇ ಇದೆ. ಈ ನಿರ್ಜನ ಪ್ರದೇಶದಲ್ಲಿ ಆಕೆಯೊಬ್ಬಳೇ ಇರುವದಾದರೂ ಎಂತು ? ’ ಎಂಬ ವಿಚಾರ ರಾಮೂನನ್ನು ಮತ್ತೆ ಎದೆಯೊಡೆಸಿತು. ಗಂಗಾಸಾನಿ ಸುಭಗೆ ಯೊಡನೆ ಊರಲ್ಲಿಯೇ ಇರುವದಾಗಿ ನಿಶ್ಚಯ ಮಾಡಿಕೊಂಡ ಸಂಗತಿಯನ್ನು ಸಂಗಪ್ಪನಿಂದ ತಿಳಿದುಕೊಂಡುದು ಅವನ ನೆನಪಿಗೆ ಬಂದಿತು ; ಸ್ವಲ್ಪ ಧೈರ್ಯ ತಂದಿತು.

ಸುಭಗೆ ನಡುಮನೆಯಲ್ಲಿ ಒರಗಿಕೊಂಡಿದ್ದಳು. ಆ ಬದಿಯ ಮೂಲೆ ಯಲ್ಲಿ ಇನ್ನೊಂದು ಹಾಸಿಗೆ ಸುಳ್ಳಿಯನ್ನು ಕಂಡ ರಾಮೂ.

ಆ ಸುಳ್ಳಿಯ ಕಡೆಗೆ ಮೋರೆದಿರುವಿ ರಾಮೂ ವಿಚಾರಿಸಿದ :

“ ಒಬ್ಬರs ಇದ್ದೀರೋ, ಮತ್ತ ಯಾರಾದರೂ ಬಂದಾರೋ ? ”

ಸುಭಗೆ ತಲೆಕೂದಲುಗಳನ್ನು ಸರಿಪಡಿಸಿಕೊಳ್ಳುತ್ತ ಉತ್ತರ ಕೊಟ್ಟಳು :

“ ಅದು ಗಂಗಕ್ಕನ ಹಾಸಿಗಿ. ಒಬ್ಬಾಕೇ ಆಗೇನಿ ಅಂತ, ಮಲಗಲಿಕ್ಕೆ ಬರತಾಳ. ”

ರಾಮೂ ಕಂಬದ ಬಳಿಯ ಕಂದೀಲದ ಬತ್ತಿಯನ್ನು ಏರಿಸಿದ ; ಮಂಚಕ್ಕೆ ಆತುಕೊಂಡು ನಿಂತ.

ಸುಭಗೆಯನ್ನು ಕಾಣದೇ ಎರಡು ದಿನಗಳಾಗಿದ್ದವು. ಜೀವ ಹಾತೊರೆ ಯುತ್ತಿತ್ತು. ಆಕೆಯ ಮುಖವನ್ನು ದಿಟ್ಟಿಸಿದ. ಚಿಂತೆ ಒಡೆದು ಕಾಣುತ್ತಿತ್ತು; ಉಡಿಗೆ-ತೊಡಿಗೆ ಅವ್ಯವಸ್ಥಿತವಿತ್ತು; ನಿದ್ದೆಗೆಟ್ಟೋ, ಉಪವಾಸದಿಂದಲೋ ಕಾಂತಿ ಕುಗ್ಗಿತ್ತು. ಆದರೂ ನಿಸರ್ಗ ದಿನದಿನವೂ ಆಕೆಯ ಅಂಗೋಪಾಂಗ ಗಳ ಲಾಲಿತ್ಯವನ್ನು ಹೆಚ್ಚಿಸುತ್ತಲೇ ಇತ್ತು; ಸ್ವಾಭಾವಿಕ ಸೌಂದರ್ಯಕ್ಕೆ ಮೆರುಗು ತರುತಲಿತ್ತು. ‘ ಸುಭಗೆಯನ್ನು ಇಂಥ ಸ್ಥಿತಿಯಲ್ಲಿ ಬಿಟ್ಟು ಹೇಗೆ ಹೋಗಲಿ ? ’ ಎಂದು ಚಿಂತಿಸಿದ.

ಚಿಂತೆ ಅದೆಂತಹದೇ ಇರಲಿ ; ಸಾಮಾಜಿಕ ಭೀತಿಯೂ ಎಷ್ಟೇ ಇರಲಿ. ರಾಮೂನ ಸಾಮೀಪ್ಯ ಸುಭಗೆಯನ್ನು ಒಂದು ವಿಲಕ್ಷಣವಾದ ಅವಸ್ಥೆಯ ಲ್ಲಿಯೇ ಒಯ್ದು ಇಳಿಸುತ್ತಿದ್ದುದು ಇದೊಂದೇ ಸಲವಲ್ಲ. ಅವನ ರೂಪು ಆಕೆಯ ದೃಷ್ಟಿಕ್ಷೇತ್ರದಲ್ಲಿ ಬರುವದೊಂದೇ ತಡ, ಮೈಯಲ್ಲಿ ವಿದ್ಯುತ್ ಸಂಚಲನವಾಗುತ್ತಿತ್ತು. ದೇಹವೆಲ್ಲ ಸುಳಿಗಾಳಿಯಿಂದ ಕಂಪಿಸುವ ಕುಸುಮ

ದಂತಾಗುತ್ತಿತ್ತು. ಈ ಕ್ರಿಯೆ ಇಂದೂ ಆಯಿತು. ಒಂದು ಕ್ಷಣ ಶಂಕರ ಭಟ್ಟರನ್ನೂ ಮರೆಯಿಸಿ ಆಕೆಯ ಜಗತ್ತೆಲ್ಲ ರಾಮೂನಲ್ಲಿ ಏಕರೂಪತೆ ಹೊಂದಿತು.

ಆಕೆ ಕೇಳಿದಳು: "ಎರಡು ದಿನ ಭೆಟ್ಟೀನಽ ಇಲ್ಲ ತಮ್ಮದು ?"

"ಜನಾ ಆಡಿಕೊಂಡಾರು ಅಂತಽ, ಸುಮ್ಮನಽ ಬರಲಿಲ್ಲ."

"ನೀವು ಬರೂದು ಬಿಟ್ಟರ, ಜನ ಆಡಿಕೊಳ್ಳೋದೂ ಬಿಡತಾರ ಅಂತ ತಿಳಿದೀರೇನು ?"

"ಸುಭಗಾ, ನಾನು ಗಂಡಸು; ನಿಮಗಿಂತ ಹಿರಿಯ. ಆದರೂ ನಿನ್ನ ಧೈರ್ಯ ನನ್ನಲ್ಲಿ ಇಲ್ಲ!"

"ಧೈರ್ಯಏನು ಇದರಾಗ ? ಈಗಿನ ಪರಿಸ್ಥಿತಿಯಲ್ಲಿ, ಎರಡಽ ಎರಡು ಉಪಾಯ: ಜನಕ್ಕ ಹೆದರಿ ಜೀವಾ ಕಳಕೊಳ್ಳೋದು ಅಥವಾ ಇದ್ದದ್ದ ರಾಗಽ ಸುಖ ಹುಡುಕೋದು. ನೀವು ಹೀಂಗ ನನ್ನ ಮುಂದ ಇದ್ರ, ನಾನು ಸಾವೂ ಮರೀತೇನಿ; ಜನಾನ್ನೂ ಮರೀತೇನಿ."

ರಾಮೂನಿಗೆ ಸುಭಗೆ ತನ್ನನ್ನು ಅದೆಷ್ಟು ನಂಬಿರುವಳಲ್ಲ ಎಂದು ಆನಂದ; ಹೆಮ್ಮೆ. ಇಂಥವಳು ತನ್ನನ್ನು ಸೇನೆಯಲ್ಲಿ ಸೇರಿಕೊಳ್ಳಲು ಬಿಡ ಬಹುದೇ ಎಂಬ ಅಂಜಿಕೆ. ತನ್ನ ನಿಶ್ಚಯುವನ್ನು ಆಕೆಗೆ ತಿಳಿಸುವದೆಂತು ಎಂದು ಅನುಮಾನ. ಒಂದು ನಿಮಿಷ ಸುಮ್ಮನಿದ್ದು ರಾಮೂ ಒಡನುಡಿದ :

"ನಿನಗ ಒಂದು ವಿಷಯ ತಿಳಿಸೂದದ."

"ಏನು ?"

"ಈಗ ನಾನು ಹುಬ್ಬಳ್ಳಿಗೆ ಹೊರಟೇನಿ."

"ಯಾಕಽ ?"

"ದಂಡಿನಾಗ ಸೇರಬೇಕು ಅಂತ ಮಾಡೇನಿ."

ಸುಭಗೆ ಆಶ್ಚರ್ಯ-ಭಯಗಳಿಂದ ರಾಮೂನನ್ನು ನೋಡಿದಳು. ನೋಡ ನೋಡುತ್ತಲೇ ಅವಳ ಕಣ್ಣುಗಳು ತಿಳಿನೀರಿನ ಕೊಳ್ಳಗಳಾದವು.

"ಅಂದ್ರ ? ನನ್ನ ನಡನೀರಿನ್ಯಾಗ ಕೈಬಿಟ್ಟು, ಹೋಗಬೇಕು ಅಂತ ಆದಽ ಏನು ನಿಮ್ಮ ವಿಚಾರ ? ಹೋಗರಿ! ನಿಮಗ ಯಾರು ಅಡ್ಡಗಟ್ಟಿ ನಿಂತಾರ ?.... ನೀವು ಅತ್ತಲಾಗ ಗಾಡೀ ಹತ್ತರಿ; ನಾನು ಇತ್ತಲಾಗ

ಶಂಭುಲಿಂಗನ ಭಾವೀ ಕಾಣತೇನಿ.....ನೋಡ್ಯಾರ ನೋಡರಿ, ಬೇಕಾದರ." ಎಂದು ಸುಭಗೆ ಮೊಂಡೆಯ ಮೇಲಿನ ಮುಂಗೈಗಳಿಗೆ ಹಣೆಯಾನಿಸಿ ದುಃಖಿಸ ಹತ್ತಿದಳು.

ರಾಮೂ ತನ್ನ ಯೋಜನೆಯನ್ನು ಸ್ಪಷ್ಟಪಡಿಸುವವನಿದ್ದ. ಅಷ್ಟರಲ್ಲಿ ಹೊರಗೆ ಬಳೆಯ ಸಪ್ಪಳ ಕೇಳಿಸಿತು.

## ೩೯

ಗಂಗಾಸಾನಿ ಒಳಗೆ ಬರುವಾಕೆ ರಾಮೂನನ್ನು ನೋಡಿ ಹಿಂದೆ ಸರಿದಳು. "ಆ ವ್ಯಾಲೆ ಬರತೇನಿ, ಸುಭಗಾ!" ಎಂದು ತಿರುಗಿ ಹೊರಟಳು.

ಗಂಗಾಸಾನಿಯನ್ನು ಕಂಡ ಸುಭಗೆ ಇಮ್ಮಡಿಯಾದ ದುಃಖದಿಂದ ಹೊರಗೆ ಓಡಿ ಹೋಗಿ, ರಾಮೂನು ತನ್ನನ್ನು ಬಿಟ್ಟು ಹೊರಟಿರುವ ಸುದ್ದಿಯನ್ನು ಆಕೆಯ ಮುಂದೆ ತೋಡಿಕೊಂಡಳು. ಅವಳ ಕೈ ಹಿಡಿದು ಜಗ್ಗಿ, ರಾಮೂನ ಮನಸ್ಸು ತಿರುಗಿಸಲು ಅಂಗಲಾಚಿ ಬೇಡಿಕೊಂಡಳು.

ಕತ್ತಲಲ್ಲಿ ಇಬ್ಬರೂ ದಾರಿಯ ಮೇಲೆ ಐದು ನಿಮಿಷ ನಿಂತುಕೊಂಡರು. ರಾಮೂ ತನಗೆ ಅಪರಿಚಿತನಾದ್ದರಿಂದ, ರಾತ್ರಿಯ ವೇಳೆಯಲ್ಲಿ ಅವನೊಡನೆ ಮಾತಾಡಲು ಸ್ವಲ್ಪ ಹಿಂದೆ ಮುಂದೆ ನೋಡಿದಳು. ಆದರೂ ಅವನ ಮನಸ್ಸಿನ ಈ ಒಲುಹನ್ನು ನೋಡಿ, ರೊಚ್ಚಿಗೆದ್ದು, ಅವನಿಗೆ ಬುದ್ಧಿ ಹೇಳಲೇಬೇಕೆಂದು ನಿಶ್ಚಯಿಸಿಕೊಂಡಳು.

ಈ ಸಮಯದಲ್ಲಿ ಗಂಗಾಸಾನಿ ಬಂದುದು ರಾಮೂನಿಗೆ ಅನಪೇಕ್ಷಿತವಾಗಿತ್ತು. ಆದುದರಿಂದ ಅವನ ಮನ ಮುದುಡಿತು. ಆದರೆ ಅವಳ ಸ್ವಭಾವದ ಬಗ್ಗೆ ಸಾಕಷ್ಟು ಕೇಳಿದ್ದನಾದ್ದರಿಂದ ಆಕೆಯ ವಿಷಯದಲ್ಲಿ ಅವನಲ್ಲಿ ಆದರಭಾವನೆಯಿತ್ತು. ಸುಭಗೆಯ ಹಿತಚಿಂತಕಳು ಅವಳೊಬ್ಬಳೇ ಎಂಬ ಮನವರಿಕೆಯೂ ಆಗಿತ್ತು.

ಗಂಗಾಸಾನಿ ಒಳಗೆ ಹೋಗಿ ಕಂದೀಲಿನ ಬಳಿಯಲ್ಲಿಯ ಕಂಬದ ನೆಳಲಿನಲ್ಲಿ ನಿಂತುಕೊಂಡಳು. ಸೆರಗನ್ನು ಸಾವರಿಸಿಕೊಂಡು ಮನಸ್ಸಿನಲ್ಲಿಯ

ಸಿಟ್ಟಿನ್ನು ಹತ್ತಿಕ್ಕಿಕೊಂಡು ಪರಕೀಯ ಪುರುಷನಿಗೆ ತೋರಬೇಕಾದ ಎಲ್ಲ ಮರ್ಯಾದೆಯನ್ನು ತೋರಿಸಿ ಮಿತಿಯಿಂದ ವಿನಯದಿಂದ ಗಾಂಭೀರ್ಯದಿಂದ ಅಂದಳು:

"ರಾಮಣ್ಣ, ಇಲ್ಲೀತನಕ ನನಗ ನಿಮ್ಮ ಜೋಡಿ ಮಾತಾಡೂ ಪ್ರಸಂಗ ಬಂದಿದ್ದಿಲ್ಲ. ಆದರೂ ಇವೊತ್ತು ಮಾತಾಡಲೇಬೇಕಾಗೇದ. ಅಪಾರ್ಥ ಮಾಡಿಕೋಬ್ಯಾಡರಿ. ಸುಭಗಾ ನನ್ನ ಮಗಳ ಸಮ. ನೀವೂ ನನ್ನ ತಮ್ಮನ ಸಮ ಅಂತಾ ನಿಮ್ಮ ಜೋಡಿ ಮಾತಾಡೋ ಧೈರ್ಯ ಮಾಡೇನಿ. ನಾನು ಅನ್ನೋದು ಸೇರದಿದ್ದರ, ಸಿಟ್ಟಿಗೆ ಮಾತ್ರ ಏಳಬ್ಯಾಡರಿ. ನೀವು ಮಾಡಿದ್ದು ತಪ್ಪೊ? ಒಪ್ಪೊ? ಆ ವಿಚಾರಽನಽ ಈಗ ಬ್ಯಾಡ. ಈಗ ನೀವು ಆಕೀನ ಬಿಟ್ಟುಗೊಟ್ಟು, ದಂಡಿಗೆ ಹೋಗುವ ತಯಾರಿಯೊಳಗ ಇದ್ದೀರಿ ಅಂತ ಕೇಳತೇನಿ. ನೀವು ತಿಳದವರು ಇದ್ದೀರಿ. ವಿಚಾರ ಮಾಡಿರಿ. ಶಂಕರಭಟ್ಟರು ಎಲ್ಲಿಯೋ ಹೋಗಿಬಿಟ್ಟಾರ. ಊರಾಗ ನೋಡಿದರ ಪ್ಲೇಗು. ಒಂದು ಹುಳ ಇಲ್ಲ. ಸುಭಗಾ ಸೂಕ್ಷ್ಮ ಪರಿಸ್ಥಿತಿಯೊಳಗ ಇದ್ದಾಳ. ನಾಳೆ ಶಂಕರಭಟ್ಟರು ಬಂದ್ರೂ ಸಹಿತ, ಅವರು ಸುಭಗಾನ್ನೇನೂ ಮನಿಯಾಗ ಇಟ್ಟುಕೊಳ್ಳೋದಿಲ್ಲ. ಅತಿಶಯ ಧಾರ್ಮಿಕ ಜನ ಅದು. ಒಂದು ವ್ಯಾಳೆ ಮಗಳ ಮ್ಯಾಲಿನ ವಾತ್ಸಲ್ಯಕ್ಕ ಮಗಳಿಗೆ ನೆರಳು ಕೊಟ್ರು ಅಂದ್ರೂ, ಸಮಾಜಕ್ಕ ಅದು ಸೇರಕಿ ಬರೋದಿಲ್ಲ. ಸುಭಗಾಗೂ ತಂದೀ ಮನ್ಯಾಗ ಇರೋ ಮನಸಿಲ್ಲ. ನೀವಽ ಆಕಿಯ ಜೀವ ಅಂತ ತಿಳಕೊಂಡು ಆಕಿ ಕೂತಾಗ, ನೀವು ಹೀಂಗ ಓಡಿ ಹೋಗೋ ವಿಚಾರ ದೇವರ ಮನಸಿಗೇನೂ ಬರೋದಿಲ್ಲ—"

"ನನ್ನ ವಿಷಯಕ್ಕ ನೀವಿಬ್ಬರೂ ತಪ್ಪು ತಿಳಕೊಂಡೀರಿ. ನಾನೀಗ ಓಡಿ ಹೋಗತೇನಿ ಅಂತ ಯಾರು ಅಂದರು? ಸುಭಗಾನ ಸ್ವಭಾವ, ಮನಸ್ಸು, ನನಗ ಗೊತ್ತು ಅದ. ನನ್ನ ಮನಸ್ಸಿನ್ಯಾಗ ನಾ ತಿಳದೇನಿ: ನನ್ನ ವೀಣಾ ಅಂದ್ರ ಸುಭಗಾ; ಸುಭಗಾ ಅಂದ್ರ ನನ್ನ ಜೀವ; ಈ ಮೂರರೊಳಗ ಯಾವದಾದರೂ ಒಂದು ಇಲ್ಲದಾತ್ಯ ಅಂದ್ರ ನಾ ಸತ್ತಂಗಽ ಅಂತ."

"ಹಾಂಗಾದರ, ಈಗ ದಂಡು-ಪಂಡು ಅಂತ ತಲಿಯಾಗ ಯಾಕ ಹಾಕಿಕೊಂಡೀರಿ? ಜನಕ್ಕ ಹೆದರಿ, ಜವಾಬ್ದಾರೀ ತಪ್ಪಿಸಿಕೊಳ್ಳಲಿಕ್ಕೇ ಅಂತನಽ ಆಗೋದಿಲ್ಲಽ ಇದರ ಅರ್ಥ?"

"ನಿಮ್ಮ ತಿಳವಳಿಕಿ ತಪ್ಪು ಆದದ್ದು ಇಲ್ಲೇ. ಜನಕ್ಕ ನಾನೂ ಹೆದರಿಲ್ಲ; ಸುಭಗಾನೂ ಹೆದರಿಲ್ಲ. ನಾನು ಬಡವ. ದುಡೀಲಿಕ್ಕೆ ಬೇಕು. ವೀಣಾದಿಂದ ಒಬ್ಬರ ಹೊಟ್ಟೇನಃ ತುಂಬೋದು ಕಠಿಣ. ದಂಡಿನಾಗ ಏನೋ ಕೈತುಂಬ ಪಗಾರ ಸಿಗತದಂತ ಅಲ್ಲಿ ಕೆಲಸಾ ಹಿಡೀಬೇಕು, ಅವರನ್ನೂ ಕರಕೊಂಡು ಹೋಗಬೇಕು ಅಂತ ಆಶಾ ಹೊರತು, ಓಡಿ ಹೋಗಬೇಕು ಅನ್ನುವಂಥ ಅಂಜುಬುರುಕತನ, ಹೀನ ಬುದ್ಧಿ ಇಲ್ರಿ ಗಂಗಕ್ಕ ನನ್ನೊಳಗ."

"ಹಂಗಾರ ನಿಮ್ಮ ಕಾಲು ಬಿದ್ದು ಹೇಳತೇನಿ. ದಂಡಿನ ಗೊಡವೀ ಬಿಟ್ಟುಬಿಡಿರಿ. ಅಲ್ಲಿ ಹೋದರ ನೀವು ಎಲ್ಲಿಯೋ, ಆಕಿ ಎಲ್ಲಿಯೋ! ಹೋದವರು ತಿರುಗಿ ಬರತಾರ ಅಂತನರಃ ಎಲ್ಲಿ? ಮತ್ತ ಯಾವದಾದರೂ ಕೆಲಸ ಹಿಡೀರಿ."

ರಾಮೂ ವಿಚಾರ ಮಾಡಿ ಅಂದ: "ಎಲ್ಲಿಂದ ಸಿಗಬೇಕು ಕೆಲಸ?"

ಗಂಗಾಸಾನಿ ಬದಿಯಲ್ಲಿಯ ಕಂಬಕ್ಕೆ ಎಡಭುಜವನ್ನಾನಿಸಿ ನಿಂತುಕೊಂಡಳು. ಹತ್ತು ನಿಮಿಷ ನಿಶ್ಶಬ್ದಳಾದಳು. ತಲೆಯಲ್ಲಿ ಒಂದು ವಿಚಾರ ಮಿನುಗಿತು:

"ಎಂದೂ ನೀವು ಸುಭಗಾನ್ನ ಕೈ ಬಿಡೋದಿಲ್ಲಃ?"

ರಾಮೂ ನಕ್ಕ.

"ಶಂಭುಲಿಂಗನ ಮುಂದ ನಿಂತು ಆಣೀ ಮಾಡತೀರಾ?"

"ಶಿಖರದ ಮ್ಯಾಲೆ ಸ್ವಾಮಿ ಪ್ರತ್ಯಕ್ಷ ಹೊರಟಾಗ ಆತನ ಸಮಕ್ಷಮ ಸುಭಗಾನ್ನ ಕೈ ಹಿಡದೇನಿ. ಆಣೀ ಮಾಡೂದರಾಗ ಏನು ಅರ್ಥ ಅದ?"

ಗಂಗಾಸಾನಿ "ಹೌದೇನೆ?" ಎನ್ನುವಂತೆ ಸುಭಗೆಯನ್ನು ನೋಡಿದಳು. ಸುಭಗೆ ಲಜ್ಜೆಯಿಂದ ತಲೆ ತಗ್ಗಿಸಿದಳು. ಗಂಗಾಸಾನಿಗೆ ಹರ್ಷವಾದುದನ್ನು ಆಕೆಯ ಮುಖ ಸೂಚಿಸಿತು. ಕೆಳಗೆ ಕುಳಿತು ಗಂಗಾಸಾನಿ ತನ್ನ ವಿಚಾರವನ್ನು ಹೊರಗೆ ಹಾಕಿದಳು.

"ಹಂಗಾರ, ಹೀಂಗ ಮಾಡಿರಿ ರಾಮಣ್ಣಾ: ನೀವು ಯಾವ ಕೆಲಸಾನೂ ಹಿಡಿಯುವ ಗೋಜಿಗೆ ಹೋಗಬ್ಯಾಡರಿ. ಅನಕಾ ಎರಡು ದಿನ ಇಲ್ಲೇ ಇರ್ರಿ. ಶಂಕರಭಟ್ಟರು ಬರಲಿ. ನಾನೂ ನೀವೂ ಕೂಡಿ ಧಾರವಾಡಕ್ಕ ಹೋಗೋಣ.

ಧ್ಹಾರವಾಡದಾಗ ನನ್ನದೊಂದು ಬಂಗ್ಲೇ ಅದ. ಕಂಪೌಂಡನ್ಯಾಗಽ ಪ್ರತ್ಯೇಕ ಮೂರು ಖೋಲಿ ಅವ. ಆ ಬಂಗ್ಲೇನ್ನ ಸುಭಗಾನ ಹೆಸರಿಲೇ ನಾ ಭಕ್ಷೀಸು ಪತ್ರಾ ಮಾಡಿ ಕೊಡತೇನಿ. ಹೊರಗಿನ ಖೋಲ್ಯಾಗ ನೀವಿಬ್ಬರೂ ಇರ್ರಿ. ಬಂಗ್ಲೇಕ್ಕ ಬರೋ ಬಾಡಿಗಿಯಿಂದ ಬೇಕಾದಾಂಗ ನಿಮ್ಮ ಉಪಜೀವನ ಸಾಗ ತಽದ. ಧಾರವಾಡದಂಥ ದೊಡ್ಡ ಊರಾಗ ಒಣಾ ಕಿತಬಿ ಇರೋದಿಲ್ಲ. ನೀವು ಯಾರು ಅಂತ ಮಾತಾಡಸೂದಿಲ್ಲ ಸಹಿತ. ಮೇಲಾಗಿ ವಿಶಾಲ ದೃಷ್ಟೀ ಜನಾನೂ ಇರತಾರ ಅಲ್ಲಿ.''

ಸುಭಗೆ ಮೌನವಾಗಿಯೇ ಕೃತಜ್ಞತೆಯ ದೃಷ್ಟಿಯಿಂದ ಗಂಗಾಸಾನಿ ಯನ್ನು ನೋಡಿ ರಾಮೂನ ಕಡೆಗೆ ಹೊರಳಿದಳು. ಇಬ್ಬರೂ ಅವನ ಉತ್ತರದ ನಿರೀಕ್ಷಣೆಯಲ್ಲಿ ಕುಳಿತರು.

ರಾಮೂ ಅಂದ: "ನೀವು ಹೇಳೋದೇನೋ ಸೈ. ಆದರ ನಾನು ಹಾಂಗ ಮಾಡೋದು ತಪ್ಪು ಆಗತಽದ. ನಿಮ್ಮದೂ ಒಂದು ಹೊಟ್ಟಿ ಅದ."

"ನನ್ನ ಬಗ್ಗೆ ಕಾಳಜೀ ಮಾಡಬ್ಯಾಡರಿ. ನನಗ ಸುಭಗಾ ಸುಖದಿಂದ ಇರೋದು ಬೇಕಾಗೇದ. ಮೇಲಾಗಿ ಬ್ಯಾಂಕಿನ್ಯಾಗ ನನಗ ತುಸು-ಥೋಡೆ ರೊಕ್ಕ ಅದ. ಅದೂ ತೀರಿದ ಮ್ಯಾಲೇ ? ಒಬ್ಬಾಕಿ ಹೊಟ್ಟಿ ! ಶಂಭುಲಿಂಗನ ಜೋಳಿಗಿ ಅದ. ನನ್ನದೇನೂ ದೊಡ್ಡ ಪ್ರಶ್ನೆ ಅಲ್ಲ."

ರಾಮೂ ಬೇಗ ಒಪ್ಪಲಿಲ್ಲ. ಗಂಗಾಸಾನಿ ದುಂಬಾಲು ಬಿದ್ದು ಕಡೆಗೆ ಅವನಿಂದ 'ಹೂಂ' ಎನಿಸಿಕೊಂಡಳು. ಸುಭಗೆಯ ಮುಖ ಹಿಗ್ಗಿತು. ಅವನು ಹೊರಗೆ ಹೊರಟಾಗ ಹಿಂದೆ ಹೊರಳಿ ಸುಭಗೆಯನ್ನೊಮ್ಮೆ ನೋಡಿದ. ಸುಭಗೆ ಅವನು ಹಿಂದೆ ಹೊರಳುವ ಹಾದಿಯನ್ನೇ ನೋಡುತ್ತಿದ್ದಳು. ಇಬ್ಬರ ನೋಟ ಕೂಡಿದಾಗ, ಗಂಗಾಸಾನಿ ಏನೂ ತಿಳಿಯದವಳಂತೆ ನಟಿಸಿ ಕಂದೀ ಲಿನ ಬತ್ತಿಯನ್ನು ಮೇಲೆ ಏರಿಸುವ ಕೆಲಸದಲ್ಲಿ ಉದ್ಯುಕ್ತಳಾಗಿದ್ದಳು.

*

# ೪೦

ಎರಡು ಮೂರು ದಿನ ಶ್ರೀಕಂಠಶಾಸ್ತ್ರಿಗಳಿಗೆ ಬಿಡುವೇ ಸಿಗದಷ್ಟು ಕೆಲಸ. ದೇಶಾಟನೆಯಲ್ಲಿ ಒಳ್ಳೇ ನುರಿತ ಗೊರವರನ್ನು ಹಿಡಿದು ಅವರು ಮೊದಲು ಶಂಕರಭಟ್ಟರನ್ನು ಹುಡುಕಿಕೊಂಡು ಬರಲು ಕಳಿಸಿದರು. ಅವರು ಹೊರಡುವ ಮುನ್ನ ಪ್ರತಿಯೊಬ್ಬ ಗೊರವನಿಗೂ ಶಂಕರಭಟ್ಟರು ಯಾವ ಯಾವ ಊರಲ್ಲಿ ಯಾರ ಯಾರ ಮನೆಯಲ್ಲಿ ಇರಬಹುದೆಂಬುದರ ಬಗ್ಗೆ ಸವಿಸ್ತಾರವಾಗಿ ತಿಳಿಸಿ ಹೇಳಿದರು. ಶಂಕರಭಟ್ಟರನ್ನು ತಾನು ಹುಡುಕಿಕೊಂಡೇ ಬರುವೆನೆಂದು ಸಂಗಪ್ಪನೂ ಟೊಂಕಕಟ್ಟಿ ಹೊರಟನು. ಶಾಸ್ತ್ರಿಗಳಿಗೆ ಇಷ್ಟರಿಂದಲೇ ಸಮಾಧಾನವಾಗಲಿಲ್ಲ. ಶಂಕರಭಟ್ಟರು ಬೇಗ ಬಾರದಿದ್ದಲ್ಲಿ, ಗುಡಿಸಲು ಹಾಕಿಸುವ ಕೆಲಸ ಮುಗಿದೊಡನೆ, ತಾವೇ ತಿರುಗಾಡಿ ಬರಬೇಕೆಂದು ನಿಶ್ಚಯ ಮಾಡಿಕೊಂಡು ಹಗಲು ಹನ್ನೆರಡು ತಾಸೂ ಗುಡಿಸಲಿನ ಸಿದ್ಧತೆಯಲ್ಲಿಯೇ ತೊಡಗಿದರು.

ಯಾರಿಗೂ ಹೇಳದೆ ಕೇಳದೆ, ತಮ್ಮ ಗುಡಿಸಲಿನ ಎಡಗಡೆಗೆ ಶಂಕರಭಟ್ಟರ ಸಲುವಾಗಿಯೂ, ಬಲಗಡೆಗೆ ಗಂಗಾಸಾನಿಯ ಸಲುವಾಗಿಯೂ ಎರಡು ಗುಡಿಸಲುಗಳ ವ್ಯವಸ್ಥೆ ಮಾಡಿದರು. ಗಳಗಳು ನಿಂತವು. ತಟ್ಟಿಯೂ ತಯಾರಾಯಿತು. ಕೆಮ್ಮಣ್ಣು-ಸೆಗಣಿಗಳನ್ನು ಕಲೆಯಿಸಿ ದಂಟಿನ ತಟ್ಟಿಗಳಿಗೆ ಹೊರಗೂ ಒಳಗೂ ತುಂಬ ಮೆತ್ತಿಸಿ ಭದ್ರಮಾಡಿಸಿದರು. ನೆಲಘಟ್ಟಣೆಯೂ ಮುಗಿಯಿತು. ಮಳೆ ಬಂದರೆ ನೀರು ಹರಿದು ಹೋಗಲು ಕಾಲುವೆಗಳ ವ್ಯವಸ್ಥೆಯೂ ಆಯಿತು. ಆದರೆ ಮೇಲೆ ಹೊಚ್ಚಲು ಬೇಕಾದ ತಗಡುಗಳ ಪ್ರಶ್ನೆ ಇನ್ನೂ ಬಗೆಹರಿದಿದ್ದಿಲ್ಲ. ಶಂಕರಭಟ್ಟರ ತಗಡುಗಳನ್ನೆಲ್ಲ ಸಂಗಪ್ಪ ತನ್ನ ದನಗಳ ಹಟ್ಟಿಗೆ ಉಪಯೋಗ ಮಾಡಿಕೊಂಡಿದ್ದುದು ಶ್ರೀಕಂಠಶಾಸ್ತ್ರಿಗಳಿಗೆ ಮೊದಲೇ ಗೊತ್ತಿದ್ದುದರಿಂದ ಅವನು ಊರಿಗೆ ಹೋಗುವ ಮುನ್ನ ಶಂಕರಭಟ್ಟರ ಗುಡಿಸಲಿಗೆ ಬೇಕೆಂದು ಎಲ್ಲ ತಗಡುಗಳನ್ನೂ ಕಿತ್ತಿಸಿಕೊಂಡಿದ್ದರು. ಆದುದರಿಂದ ಶಂಕರಭಟ್ಟರ ಗುಡಿಸಲನ್ನು ಮೊದಲು ಪೂರ್ಣ ಮಾಡಿದರು. ಉಳಿದ ಒಂದೆರಡು ತಗಡುಗಳಿಗೆ ಶ್ಯಾನುಭೋಗರದೊಂದು ಕಮ್ಮಾರರದೊಂದು ತಗಡು ಜೋಡಿಸಿ ಗಂಗಾಸಾನಿಯ ಗುಡಿಸಲನ್ನೂ

ಬೆಚ್ಚಗೆ ಮಾಡಿದರು. ತಮ್ಮದೊಂದು ಗುಡಿಸಲು ಬೋಳಾಗಿ ಹಾಗೆಯೇ ನಿಂತಾಗ, ನೆರೆಯ ಹಳ್ಳಿಗೆ ಚಕ್ಕಡಿಯನ್ನು ಮಾಡಿಕೊಂಡು ಹೋಗಿ ನಾಲ್ಕು ಜನ ಭಕ್ತರಿಗೆ ಶಂಭುಲಿಂಗನ ಭಂಡಾರ ಹಚ್ಚಿ, ಎರಡು ತಿಂಗಳುಗಳ ಮುಟ್ಟಿಗೆ ಹತ್ತು ತಗಡುಗಳನ್ನು ಕಡ ತಂದರು.

ಗುಡಿಸಲುಗಳಲ್ಲಿಯ ಜನರೆಲ್ಲರಿಗೆ — ಅದರಲ್ಲಿಯೇ ಬ್ರಾಹ್ಮಣರ ಹಿಂಡಿಗೆ— ಶ್ರೀಕಂಠಶಾಸ್ತ್ರಿಗಳ ರೀತಿ-ನೀತಿ ಆಶ್ಚರ್ಯವನ್ನುಂಟು ಮಾಡಿತು. ಶಂಕರಭಟ್ಟರೆಂದರೆ ವಿಷ ಕಾರುತ್ತಿದ್ದವರು, ಅವರ ಮಗಳ ವ್ಯಭಿಚಾರದ ವಿಷಯ ತಾಸುಗಟ್ಟಲೆ ವೇದಾಂತದ ಭಾಷಣ ಮಾಡಿ ತಮ್ಮೆಲ್ಲರ ಮನಸ್ಸಿನ ವಿರುದ್ಧ ಅವರಿಗೆ ಬಹಿಷ್ಕಾರ ಹಾಕಿಸಿದವರು, ಈಗ ಮತ್ತೆ ಸದ್ದಿಲ್ಲದೆ ಶಂಕರ ಭಟ್ಟರನ್ನು ಹುಡುಕಲು ಕಳುಹಿಸಿದುದೂ, ಅವರ ಸಲುವಾಗಿ ತಮ್ಮ ಪಕ್ಕದಲ್ಲಿಯೇ ಗುಡಿಸಲನ್ನು ತಯಾರಿಸಿದುದೂ ಎಲ್ಲ ಬ್ರಾಹ್ಮಣರಿಗೆ ವಿಚಿತ್ರವೆನಿಸಿತು. ಆದರೆ ಪ್ಲೇಗಿನ ಹಾವಳಿಯಿಂದ ರಾವು ಹೊಡೆದ ಅವರಿಗೆ ಇತ್ತ ಲಕ್ಷ್ಯ ಕೊಡಲು ಮನಸ್ವಾಸ್ಥ್ಯವಿರಲಿಲ್ಲ. ಸುಭಗೆಯ ಬಗೆಗೆ ಪ್ರತಿಯೊಬ್ಬರೂ ಮೂಗು ಮುರಿಯುತ್ತಲಿದ್ದರಾದರೂ, ಶಂಕರಭಟ್ಟರ ಬಗೆಗೆ ಎಲ್ಲರಿಗೂ ಸಹಾನುಭೂತಿಯಿದ್ದಿತಾದುದರಿಂದ ಅವರಿಗೆ ಸಮಾಧಾನವೇ ಆಯಿತು.

ಗುಡಿಸಲಿನ ಕೆಲಸವೆಲ್ಲ ಸುಸಜ್ಜಿತವಾದ ದಿನ ಶ್ರೀಕಂಠಶಾಸ್ತ್ರಿಗಳು ಸ್ನಾನ ಮುಗಿಸಿಕೊಂಡು ಉಟ್ಟ ಜೋಟಾ ಪಂಜೆಯನ್ನು ಹಿಂಡಿ ಕೊಡಹಿ ದೂರದಿಂದ ಗಳಪಿನ ಮೇಲೆ ಒಗೆಯುತ್ತ ಹೆಂಡತಿಗೆ ಅಂದರು :

“ ಲಗೂನs ಊಟಾ ಮುಗಿಸಿಕೊಂಡು ಸಾಮಾನಾ ಕಟ್ಟು ; ಇವತ್ತು ಊರ ಬಿಡಬೇಕು. ಹಂಗs ಗಂಗಾಗೂ ತಿಳಿಸಿ ಬಾ, ಆಕೇ ದಸಿಯಿಂದಾ ಮತ್ತೂ ಶಂಕರಭಟ್ಟರ ದಸಿಯಿಂದಾ ಗುಡಸಲು ತಯಾರು ಆಗ್ಯಾವ ಅಂತ. ಆಕಿ ಒಲ್ಲೆ-ಪಲ್ಲೆ ಅಂತಿದ್ಲು; ಆಕೀಗೆ ಸ್ವಲ್ಪ ತಿಳಿಸಿ ಹೇಳು. ಸುಭಗಾನೂ ಬೇಕಾರ ಇವತ್ತs ಬಂದುಬಿಡಲಿ. ಆಕೀಗೂ ಹೇಳಿ ಬಾ. ಸುಭಗಾ ಬಂದರ ಗಂಗಾ ಬಂದs ಬರತಾಳ. ಮತ್ತೊಂದು ಮಾತು— ಇರ್ಲಿ ಬಿಡು. ನಾನs ಹೋಗಿ ಬರತೇನಿ. ಆ ರಾಮಣ್ಣಾಗ ಒಂದು ಮಾತು ಹೇಳಬೇಕಾಗೇದ, ಅನಕಾ ನಮ್ಮ ಗುಡಿಸಲದಾಗs ಇದ್ದುಬಿಡು ಅಂತ. ”

ರಾಧಕ್ಕನವರಿಗೆ ಶ್ರೀಕಂಠಶಾಸ್ತ್ರಿಗಳ ಮಾತಿನ ಅರ್ಥ ಪೂರ್ಣ ಆಗ

ಲಿಲ್ಲ. ಸಾರಿಗೆ ಮಸಾಲೆಯ ಪುಡಿಯನ್ನು ಹಾಕುತ್ತಿದ್ದರು ; ಗಂಡನನ್ನು ಬಿರಿ ಬಿರಿ ನೋಡಿದರು ಮಾತ್ರ.

ಊಟ ಮುಗಿದು ಎಂಜಲುಗೋಮ ಆಗುವದೊಂದೇ ತಡ ರಾಧಕ್ಕ ಗಂಗಾಸಾನಿಯಲ್ಲಿಗೆ ಹೋದರು. ಗಂಗಾಸಾನಿ ಎಂದೂ ಮಲಗದಾಕೆ ಆದಿನ ಊಟ ಮುಗಿಸಿಕೊಂಡು ಅಡ್ಡ ಆಗಿದ್ದಳು. ಮನಸ್ಸಿನಲ್ಲಿ ನೆಮ್ಮದಿಯಿರಲಿಲ್ಲ. ಅದೇ ದಿನವೇ ಮೈಸೂರು ಸೀಮೆಯ ಕಡೆಗೆ ಶಂಕರಭಟ್ಟರನ್ನು ಹುಡುಕಲು ಹೋದ ಒಬ್ಬಿಬ್ಬರು ಗೊರವರು ಅವರು ಸಿಗಲಿಲ್ಲವೆಂದು ಹಾಗೆಯೇ ತಿರುಗಿ ಬಂದ ಸುದ್ದಿ ಬಂದಿದ್ದಿತು. ಆಕೆಯ ಮನಸ್ಸನ್ನು ನೋಯಿಸಿದ್ದಿತು. ಶಂಕರ ಭಟ್ಟರು ಬಂದೊಡನೆ ಧಾರವಾಡಕ್ಕೆ ಹೋಗಿ ಮನೆಯ ಸಂಬಂಧಿ ಭಕ್ಷೀಸು ಪತ್ರವನ್ನು ಮುಗಿಸಿ ರಾಮಣ್ಣನನ್ನೊಂದು ಹಾದಿಗೆ ಹಚ್ಚಬೇಕೆಂದು ಆಕೆಯ ಮನಸ್ಸಿನಲ್ಲಿ ಹಗಲೂ ಇರುಳೂ ಕಟಿಯಹತ್ತಿದ್ದಿತು. ಉಳಿದ ಗೊರವರು ಇನ್ನೂ ಮರಳಿ ಬಂದಿರಲಿಲ್ಲ. ಆದುದರಿಂದ ಆಕೆಯ ತಾಳ್ಮೆ ಕೈಮೀರಹತ್ತಿದ್ದಿತು.

ಮೇಲಾಗಿ ಆಕೆಗೆ ಆದಿನ ಮಧ್ಯಾಹ್ನದಿಂದಲೂ ಮೈಯಲ್ಲಿ ನೆಮ್ಮದಿ ಇರಲಿಲ್ಲ. ಮೈಯಲ್ಲಿಯ ಶಕ್ತಿ ಕುಂದಿದಂತಾಗಿ ಆಯಾಸವೂ ಆಗಿದ್ದಿತು. ಊಟವೂ ಚನ್ನಾಗಿ ಹೋಗಿರಲಿಲ್ಲ. ಸಣ್ಣಗೆ ತಲೆ ಹೊಡೆಯಹತ್ತಿದುದರಿಂದ ತಲೆಶೂಲಿಯ ಗುಳಿಗೆಗಳನ್ನು ನುಂಗಿ, ಬಿಸಿನೀರು ಕುಡಿದು, ಸ್ವಲ್ಪ ನಿದ್ದೆ ಯಾದರೂ ಹತ್ತಿದರೆ ಮನಸ್ಸಿಗೆ ಹಾಯ್ ಎನಿಸಬಹುದೋ ಏನೋ ಎಂದು ಮಲಗಿಕೊಂಡಿದ್ದಳು.

“ ಯಾಕ ಗಂಗಾಸಾನಿ, ಮಲಕೊಂಡೀ ಅಲ್ಲ ? ” ಎಂದರು ರಾಧಕ್ಕ.

“ ಸುಮ್ಮನೇ, ಬರ್ರಿ. ” ಎಂದು ಗಂಗಾಸಾನಿ ಎದ್ದು ಕುಳಿತು ಕೇಳಿದಳು, “ ಗುಡಸಲಕ್ಕ ಎಂದು ಹೋಗಬೇಕರಿ, ರಾಧಕ್ಕ ? ”

“ ಆದರ ದಶಿಂದಾನಃ ಬಂದೇನವ್ವ. ಗುಡಸಲ ತಯಾರಾಗ್ಯಾವ ; ಇವತ್ತ ನೀರಿಗೆ ಹೋದಾಗ ನೋಡಿಕೊಂಡು ಬಂದೆ. ನಿನಗೂ ಒಂದು ಮಾಟನ್ನ ಗುಡಸಲಾ ಹಾಕ್ಸ್ಯಾರ. ಅಡಿಗೀ ತೆಗ್ಗು ಎಂಥಾ ಮಾಟ ಆಗ್ಯಾವಂತೀ ! ”

“ ನಾ ಒಲ್ಲೆನ್ರೆಪ್ಪಾ, ಬರೋದಿಲ್ಲ. ಸುಭಗಾ ಊರಾಗ ಒಬ್ಬಾಕೇ

ಆಗತಾಳ. ಆಕೀನ್ನ ಹ್ಯಾಂಗ ಬಿಟ್ಟು ಬರೋದು? ಊರು ಅಂಬೋದು ಹಾಳು ಸುರೀಲಿಕ್ಕೆ ಹತ್ತೇದ. ನಮಗೆಲ್ಲ ಶಂಭುಲಿಂಗ ಇದ್ದಾನ ಕಾಪಾಡಲಿಕ್ಕೆ."

"ನೀ ಎಂಥಾಕೇ ಗಂಗಾಸಾನಿ? ಅವರು ಖಟಪಿಟಬಟ್ಟು ಎಲ್ಲಾ ಸಜ್ಜು ಮಾಡ್ಯಾರ, ನೀನು ಒಲ್ಲೆ ಅನಲಿಕ್ಕೆ ಹತ್ತೀದೆಲ್ಲ! ಸುಭಗಾ ಒಬ್ಬಾಕೆ ಏನು ಇಲ್ಲಿ ಇರತಾಳಂತ. ನಮ್ಮ ಗುಡಸಲ ಹತ್ರಾನs ಅವರಿಗೂ ಒಂದು ಗುಡಸಲ ತಯಾರಾಗೇದ. ಆಕೀನೂ ಇಂದs ಬಂದುಬಿಡ್ಲೆಲ್ಲ! ಮುದ್ದಾಂ ಸುಭಗಾಗ ಹಿಂಗ ತಿಳಿಸಿ ಬಾ ಅಂತ ಹೇಳಿ ಕಳಿಸ್ಯಾರ ಇವರು ನನಗ."

"ಆಕಿ ಬರೋದಿಲ್ಲ ಬಿಡ್ರಿ. ಆಗಲೇ ಹೇಳಿ ಆಯ್ತು. ಶಂಕರಭಟ್ರು ಬಂದ ಮ್ಯಾಲೆ ಅವರು ತೆಳಗ ಹೋದ್ರೂ, ತಾನು ಇಲ್ಲೇ ಉಳಿಯಾಕೇ ಅಂತ ಹಟಾ ತೊಟ್ಟಾಳ ಆಕಿ."

ಸುಭಗೆಯ ಬಗ್ಗೆ ತಾನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದ ಯೋಜನೆಯ ಬಗ್ಗೆ ಗಂಗಾಸಾನಿ ಬೇಕಂತಲೇ ಏನೂ ಮಾತೆತ್ತಲಿಲ್ಲ.

"ಬಿಡು ಹಂಗಾರ; ನೀನು ಬರದಿದ್ರ ನಾನೂ ಹೋಗೋದs ಇಲ್ಲ." ಎಂದು ರಾಧಕ್ಕ ನಿರಾಶೆಯನ್ನು ವ್ಯಕ್ತ ಮಾಡಿದರು.

"ಛೀ ಹುಚ್ಚುಚ್ಚನಾಂಗ ಮಾಡಬ್ಯಾಡ್ರಿ. ನೀವು ಮಕ್ಕಳ ತಾಯಿ ಇದ್ದೀರಿ. ನಾನು ಇಲ್ಲಿ ಇದ್ರೇನು, ಕೆಳಗ ಇದ್ರೇನು? ನಿಮ್ಮ ಗುಡಸಲಕ್ಕ ದಿನಾ ಬಂದು ಹೋಗತಿರತೇನಿ. ಎಲ್ಲಾ ತಯಾರು ಇದ್ರ, ಇವತ್ತು ಹೊರಟs ಬಿಡ್ರಿ. ಸುಮ್ಮನ ತಡಾ ಯಾಕ ಮಾಡೋದು?"

"ಅದಕ್ಕಂತನs ಕೇಳ್ಳಿಕ್ಕೆ ಬಂದಿದ್ನೆವ್ವ. ನೀ ಹೀಂಗ ಅಂತೀದಿ. ಸುಭಗಾನ್ನ ಒಂದು ಮಾತು ಕೇಳಲೇನು?"

"ಕೇಳಬ್ಯಾಡರೀ, ಮಾಡಬ್ಯಾಡರಿ." ಎಂದು ಗಂಗಾಸಾನಿ ಮತ್ತೆ ಒರಗಿಕೊಂಡಳು. ರಾಧಕ್ಕ ಸಾಮಾನು ಕಟ್ಟುವದಿದೆಯೆಂದು ಅಸಮಾಧಾನ ದಿಂದಲೇ ಮನೆಗೆ ಮರಳಿದರು.

ಶ್ರೀಕಂಠಶಾಸ್ತ್ರಿಗಳೇ ಗಂಗಾಸಾನಿಯ ಮನೆಗೆ ಬಂದು ಊರು ಬಿಡಲು ಆಕೆಗೆ ಜುಲುಮೆ ಮಾಡಿದರು. ಆಕೆ ಒಪ್ಪಲಿಲ್ಲ. ನಾನಾ ಬಗೆಯಿಂದ ಆಕೆಯ ಮನಸ್ಸನ್ನು ತಿರುಗಿಸಲು ಪ್ರಯತ್ನ ಮಾಡಿದರು. ರಾಮೂನಿಗೂ ತನ್ನಲ್ಲಿಯೇ ಇದ್ದುಬಿಡಲು ಕೇಳುವದಾಗಿಯೂ, ಬೇಕಾದರೆ ಅವನಿಂದ ಸುಭಗೆಗೆ

ಗುಡಿಸಲಿಗೆ ಹೋಗಲು ಹೇಳಿಸುವದಾಗಿಯೂ ಅವರು ಗಂಗಾಸಾನಿಗೆ ಭರವಸೆ ಕೊಡಲೂ ಹವಣಿಸಿದರು. ಅವರ ಪ್ರಯತ್ನ ವಿಫಲವಾದಾಗ ನಿರ್ವಾಹ ವಿಲ್ಲದೇ ಹಿಂದೆ ತಿರುಗಿದರು.

ಆ ದಿನ ಸಂಜೆಯ ಅಡಿಗೆಯನ್ನು ರಾಧಕ್ಕ ಗುಡಿಸಲಿನಲ್ಲಿಯೇ ಮಾಡಿದರು.

## ೪೧

ರಾತ್ರಿಯಲ್ಲಿ ಗಂಗಾಸಾನಿಯ ತಲೆಶೂಲೆ ಕಡಿಮೆಯಾಗಿತ್ತಾದರೂ, ಮೈಯಲ್ಲಿಯ ದುಗುಡ ಕಡಿಮೆಯಾಗಿರಲಿಲ್ಲ; ಹೆಚ್ಚೇ ಆಗಿದ್ದಿತು. ಆಯಾ ಸವೂ ಹೆಚ್ಚಿದ್ದಿತು. ಅಂಥದರಲ್ಲಿಯೇ ಮಂಗಳಾರತಿಯ ವೇಳೆಗೆ ಶಂಭು ಲಿಂಗನ ಗುಡಿಗೆ ಹೋಗಿ ಬಂದು ಸುಭಗೆಯ ಮನೆಗೆ ಪ್ರತಿನಿತ್ಯದಂತೆ ಮಲ ಗಲು ಹೋದಳು.

ದಿನಾಲು ಬಹಳ ಹೊತ್ತಿನ ವರೆಗೆ ಸುಭಗೆಯೊಡನೆ ಹರಟೆ ಹೊಡೆ ಯುತ್ತ ಕೂಡುತ್ತಿದ್ದವಳು ಆ ದಿನ ಹೆಚ್ಚು ಮಾತಾಡಲಿಲ್ಲ. "ರಾಮಣ್ಣ ಬಂದಿದ್ದರε?" ಎಂದು ಕೇಳಿದಳು ಸುಭಗೆಗೆ. ಆಕೆ 'ಹೂಂ' ಎಂದಳು. "ನಿಮ್ಮ ತಂದೆಯವರ ಬಗ್ಗೆ ಏನಾದರೂ ಸುದ್ದಿ ?" ಎಂದಳು. ಆಕೆ 'ಇಲ್ಲ' ಎಂದಾಗ ಉಸಿರುಗರೆದಳು.

ಇಬ್ಬರೂ ಬೇಗ ಮಲಗಿದರು. ಆದರೆ ಗಂಗಾಸಾನಿಗೆ ನಿದ್ರೆ ಹತ್ತಲಿಲ್ಲ.

ರಾತ್ರಿ ಹನ್ನೆರಡರ ಸುಮಾರಿಗೆ ಗಂಗಾಸಾನಿ ನರಳಿದುದು ಸುಭಗೆಗೆ ಕೇಳಿಸಿತು. ಸಣ್ಣದಾಗಿ ಮಾಡಿದ್ದ ಕಂದೀಲನ್ನು ಏರಿಸಿ, ಸುಭಗೆ "ಯಾಕε ಗಂಗಕ್ಕ ನರಳತೀದಿ?" ಎಂದಳು. ಗಂಗಾಸಾನಿ "ಯಾಕೂ ಇಲ್ಲವ್ವ, ಸುಮ್ಮನೆ ನಿದ್ದಿಗಣ್ಣಾಗ ನರಳಿದ್ದೇನು," ಎಂದಳು.

ಬೆಳಗು ಮುಂಜಾನೆಯ ಸುಮಾರಿಗೆ ಜ್ವರ ಬಂದಿದ್ದವು. ಕಣ್ಣು ಮಿತಿಮೀರಿ ಉರಿಯಹತ್ತಿದ್ದವು. ಗೆಜ್ಜಿಯಲ್ಲಿ ಏನೋ ಬೊಕ್ಕೆ ಆದಂತೆ ಹತ್ತಿತು ಕೈಗೆ.

ಹವುರಗೆ ಎದ್ದು ದೀಪವನ್ನು ದೊಡ್ಡದು ಮಾಡಿದಳು. ಸುಭಗಾ ಗಾಢ ನಿದ್ರೆಯಲ್ಲಿದ್ದಳು. ದೀಪದ ಬೆಳಕಿನಲ್ಲಿ ಬೊಕ್ಕೆಯನ್ನು ನೋಡಿಕೊಂಡಳು. ಕೆಂಪೇರಿದ ಬೊಕ್ಕೆ. ಕೈಯಾಡಿಸಿದೊಡನೆ ಭಗ್ ಎಂದು ಉರಿಯುತ್ತಿದ್ದಿತು.

ಆದಿನ ಮುಂಜಾನೆ ಕಾಲ ಹೆಬ್ಬೆರಳಿನ ನರದ ಮೇಲೆ ಈಳಿಗೆ ಬಿದ್ದು ಜೀವ ವಿಲಿವಿಲಿಯಾದದ್ದು ನೆನಪಿಗೆ ಬಂತು. ಅದರ ನೋವಿಗೆ ಹದಗಡಲೆಯಾಗಿರಬಹುದೇ ? ಎಂದು ಅನುಮಾನಿಸಿದಳು. ಆದರೆ ಬೆರಳಿನ ನೋವೇ ಉಳಿದಿರಲಿಲ್ಲ. ಹದಗಡಲೆಯಾಗುವದೆಂತು ? ಮೇಲಾಗಿ ಹದಗಡಲೆಯಾಗಿದ್ದರೆ, ಅದು ಕೆಂಪಗೆ ಇರುತ್ತಿತ್ತೇಕೆ ? ಮುಟ್ಟಿದರೆ ಉರಿಯಬೇಕೇಕೆ ?

ಗಂಗಾಸಾನಿ ಅಂಜಿದಳು. 'ಶಂಭುಲಿಂಗನ ಚಿತ್ತ' ಎಂದಂದುಕೊಂಡು ಮತ್ತೆ ಮಲಗಿದಳು. ಮುಂದೆ ನಿದ್ದೆ ಹತ್ತಲಿಲ್ಲ.

ಬೆಳಗುಮುಂಜಾನೆಯ ನಗಾರಿಯ ಹೊತ್ತಿಗೆ ಹಾಸಿಗೆ ಸುತ್ತಿ, ಸುಭಗೆಗೆ ಏಳಲು ಹೇಳಿ, ತನಗೆ ಜ್ವರ ಬಂದುದನ್ನೂ ಗೆಜ್ಜೆಯಲ್ಲಿ ಬೊಕ್ಕೆಯಾದುದನ್ನೂ ಆಕೆಗೆ ತಿಳಿಸದೇ ಲಗುಬಗೆಯಿಂದ ಮನೆಗೆ ಹೋಗಿ ಮಲಗಿಕೊಂಡಳು.

ಮುಂಜಾನೆ ಜ್ವರ ಹಾಗೆಯೇ ಇದ್ದವು. ಕಣ್ಣಿನ ಉರಿತ ಹೆಚ್ಚಾಯಿತು. ಗೆಜ್ಜೆಯಲ್ಲಿಯ ಬೊಕ್ಕೆಯೂ ದೊಡ್ಡದಾಗಿ ಮುಟ್ಟಗೊಡದಂತಾಯಿತು.

ಅಂದು ಸೋಮವಾರವಾದ್ದರಿಂದ ಜನವೆಲ್ಲ ಗುಡಿಸಲುಗಳಲ್ಲಿದ್ದರೂ, ಗೊರವರ ಜನ ಸ್ನಾನ ಮಾಡಿಕೊಂಡು ಶಂಭುಲಿಂಗನ ದರುಶನಕ್ಕಾಗಿ ಮೇಲೆ ಬರುತ್ತಲೇ ಇದ್ದಿತು. ಹೊತ್ತು ಏರುವದರಲ್ಲಿಯೇ ಗುಡಿಸಲುಗಳಲ್ಲಿ ಸುದ್ದಿ ಹರವಿತು, ಗಂಗಾಸಾನಿಗೆ ಸ್ವರ ಬಂದಿವೆಯೆಂದು. ಬರಿಯೆ ತಲೆಶೂಲಿಯೆಂದು ಯಾರಾದರೂ ಮಲಗಿದರೆ ಸಾಕು ಪ್ಲೇಗಿನಿಂದಲೇ ಮಲಗಿರುವರೆಂದು ಸುದ್ದಿ ಹಬ್ಬುವ ದಿನಗಳಿವು. ಅಂದ ಮೇಲೆ ಕೇಳುವದೇನು ? ಗುಡಿಸಲುಗಳ ತುಂಬ ಹಾಹಾಕಾರವೆದ್ದಿತು. ಬಾವಿಯ ಕಟ್ಟೆಯ ಮೇಲೆ, ಒಗೆಯುವ ಹೊಂಡಗಳಲ್ಲಿ, ಹೊಲಗಳ ಮೇರೆಗಳ ಗುಂಟ ದನಗಳನ್ನು ಮೇಯಿಸುತ್ತ ನಿಂತ ಜನರ ಗುಂಪಿನಲ್ಲಿ, ಶಂಭುಲಿಂಗನ ತೋಪಿನಲ್ಲಿ—ಎಲ್ಲೆಲ್ಲಿಯೂ ಗಂಗಾಸಾನಿಯ ಸುದ್ದಿಯೇ; ಆಕೆಯ ಗುಣಗಾನವೇ.

ಸುಭಗೆಗೆ ಈ ಸುದ್ದಿ ಬಡೆದುದು ಒಬ್ಬ ಗೊರವನಿಂದ. ಆಕೆಗೆ ಆಶ್ಚರ್ಯವಾಯಿತು. ತಾಸಿನ ಹಿಂದೆ ತಮ್ಮ ಮನೆಯಿಂದ ಹೋಗುವಾಗ ಗಂಗಾಸಾನಿ ತನಗೆ ಈ ಸುದ್ದಿಯನ್ನು ಹೇಳಲಿಲ್ಲವಲ್ಲ ಎಂದು ಆಕೆಗೆ ಕೆಟ್ಟೆನಿಸಿತು. ಸುದ್ದಿ

ಬಡಿದೊಡನೆ ಆಕೆಯ ಮನೆಗೆ ಧಾವಿಸಿದಳು. “ಗಂಗಕ್ಕಾ, ನನಗ್ಯಾಕ ಹೇಳಲಿಲ್ಲ ನಿನಗ ಜ್ವರಾ ಬಂದ ಸುದ್ದೀನಾ ?” ಎನ್ನುತ ಆಕೆಯ ಹಾಸಿಗೆಯ ಮೇಲೆ ಕುಳಿತು ಹಣೆ ಮುಟ್ಟಿ ನೋಡಿದಳು; ಸುಡುತಲಿತ್ತು. ಕಣ್ಣು ಕೆಂಪಡರಿದ್ದವು.

ಸುಭಗೆಯನ್ನು ನೋಡಿದೊಡನೆ ಗಂಗಾಸಾನಿಯ ಕಣ್ಣಲ್ಲಿ ನೀರು ಬಂದವು. “ನೀನು ಗಾಬರಿ ಆದೀ ಅಂತಾ ನಿನ್ನ ಮುಂದ ಏನೂ ಹೇಳ ಲಿಲ್ಲವ್ವ, ಪ್ಲೇಗೇ ಏನೋ ಯಾರು ಬಲ್ಲರು? ಅಂಟುರೋಗ. ಹೀಂಗ ಹತ್ತರ ಕೂಡ ಬ್ಯಾಡ ಕೂಸಃ” ಎಂದು ಆಕೆಯ ಗಲ್ಲ ಹಿಡಿದು ದೂರ ಕೂಡಲು ಹೇಳಿದಳು. ಸುಭಗೆ ಕೇಳಲಿಲ್ಲ. ಒಂದು ಕ್ಷಣ ಕುಳಿತು ಆ ಮೇಲೆ ಮನೆಗೆ ಹೋಗಿ ಕಾಫೀ ಮಾಡಿಕೊಂಡು ಬಂದಳು.

ಅಷ್ಟರಲ್ಲಿ ಆಗಲೇ ಶ್ರೀಕಂಠಶಾಸ್ತ್ರಿಗಳೂ ರಾಧಕ್ಕನವರೂ ರಾಮಣ್ಣನೂ ಇನ್ನೂ ಬೇರೆ ಕೆಲವು ಜನರೂ ಬಂದು ಕುಳಿತಿದ್ದರು. ಗಂಗಾಸಾನಿ ಬಂದ ವರಿಗೆ ಕೂಡಲು ಹೇಳುತಿದ್ದಳು; ಆದರೆ ಮುಂದೆ ಹೆಚ್ಚಿಗೆ ಮಾತನಾಡು ತಿರಲಿಲ್ಲ. ಆಗಾಗ ಒಬ್ಬರಿಬ್ಬರನ್ನು ಶಂಕರಭಟ್ಟರ ವಿಷಯ ಕೇಳಿದಳು ಮಾತ್ರ.

ಗಂಗಾಸಾನಿ ಜ್ವರದ ತಾಪದಲ್ಲಿಯೇ, ಬೊಕ್ಕೆಯ ನೋವಿನಲ್ಲಿಯೇ, ಯಾವದೋ ಒಂದು ಗಂಭೀರ ವಿಚಾರದಲ್ಲಿ ಮಗ್ನಳಾದಂತೆ ತೋರಿತು. ತಲೆ ಕೆದರಿಕೊಂಡು, ಹೇಗಲ ಮೇಲೆ ದೋತರ ಚುಂಗನ್ನು ಹಾಕಿಕೊಂಡು ಕುಳಿತಿದ್ದ ರಾಮಣ್ಣನಿಗೆ ಕೇಳಿಕೊಂಡಳು: “ರಾಮಣ್ಣ, ಶ್ಯಾನಭೋಗರ ಶಿವಪ್ಪನವರನ್ನ ಗೌಡರನ್ನ, ಮತ್ತು ಶೆಟ್ರನ್ನ ಸ್ವಲ್ಪ ಬಂದು ಹೋಗಲಿಕ್ಕೆ ಹೇಳತೀರಾ ?”

ರಾಮೂ ಚಟ್ಟನೆ ಎದ್ದು ಅವರನ್ನು ಕರೆಯಲು ಹೋದ.

ಶ್ರೀಕಂಠಶಾಸ್ತ್ರಿಗಳು ಗಂಗಾಸಾನಿಯ ಕೈ ಹಿಡಿದು, ಹತ್ತೊತ್ತಿ, ಕೇಳಿದರು. “ಗಂಗಾ ಬರೇ ಜ್ವರ. ಮತ್ತೇನೂ ಇಲ್ಲಲ್ಲ ?”

ಗಂಗಾಸಾನಿ ಅವರನ್ನೊಮ್ಮೆ ಅರಳಿದ ಕಣ್ಣಿನಿಂದ ನೋಡಿದಳು. ದುಃಖವುಕ್ಕಿತು. ಆಕೆಯೆಂದಳು: “ಬರೇ ಜ್ವರ ಯಾಕ ? ಗೆಜ್ಜ್ಯಾಗ ಗಡ್ಡೀನೂ ಒಡದೂದ.”

ಶ್ರೀಕಂಠಶಾಸ್ತ್ರಿಗಳ ಮುಖ ಗಂಭೀರವಾಯಿತು. ಚಟ್ಟನೇ ಮೇಲೆದ್ದರು.

" ಎಲ್ಲಿ ಹೊರಟಿರಿ? ಸ್ವಲ್ಪ ಕೂಡ್ರಿ; ಕೆಲಸ ಅದ, ಶಿವಪ್ಪನವರೂ ಉಳಿದವರೂ ಬಂದ ಮ್ಯಾಲೆ. " ಎಂದಳು ಗಂಗಾಸಾನಿ.

" ಬರತೀನಿ ಗಂಗಾ ಈಗ. " ಎಂದು ಹೆಂಡತಿಗೆ ಅಲ್ಲಿಯೇ ಇರಲು ಹೇಳಿ ಲಗುಬಗೆಯಿಂದ ಹೊರಗೆ ಹೋದರು. ದೇವಸ್ಥಾನದ ಆಫೀಸಿಗೆ ಹೋಗಿ ಕಿಡಿಕಿಯಲ್ಲಿ ಹಣಿಕಿ ಹಾಕಿ ಗಡಿಯಾರ ನೋಡಿದರು. ಒಂಬತ್ತು ಹೊಡೆದಿತ್ತು. ಒಂಬತ್ತೂವರೆಗೆ ಗಾಡಿಯು ವೇಳೆ. ಗುಡಿಸಲುಗಳ ಕಡೆಗೆ ಧಾವಿಸಿ, ಶಂಭುಲಿಂಗನ ಮಧ್ಯಾಹ್ನದ ಪೂಜೆ ಮಂಗಳಾರತಿಗಳನ್ನು ಬೇರೊಬ್ಬರಿಗೆ ಮಾಡಲು ಹೇಳಿ, ಅಂಗಿ ರುಮಾಲ ಹಾಕಿಕೊಂಡು ಸ್ಟೇಶನ್ನಿಗೆ ಹೊರಟರು. ಸ್ಟೇಶನ್ನಿನಿಂದ ಕೂಗಳತೆಯ ದೂರದಲ್ಲಿ ಇರುವಾಗಲೇ ಗಾಡಿಯ ಹೊಗೆ ಕಾಣಹತ್ತಿತು. ಅವರೂ ಓಡಹತ್ತಿದರು. ಅವರು ತೇಗುತ್ತ ಗಾಡಿಯಲ್ಲಿ ಹೆಜ್ಜೆ ಇಡುವದಕ್ಕೂ ಗಾಡಿ ಬಿಡುವದಕ್ಕೂ ಸಮನಾಯಿತು.

* * * *

ಇತ್ತ, ಗಂಗಾಸಾನಿಗೆ ಜ್ವರ ಬಂದಿರುವದಾಗಿಯೂ ತಮಗೆ ಯಾತಕ್ಕೋ ಹೇಳಿ ಕಳಿಸಿರುವದಾಗಿಯೂ ತಿಳಿದೊಡನೆ ಶಿವಪ್ಪನವರೂ ಗೌಡರೂ ಬಿಟ್ಟಿದ್ದು ಬಿಟ್ಟು ಗಂಗಾಸಾನಿಯ ಮನೆಗೆ ಬಂದರು.

ಎಲ್ಲರೂ ಕೂಡಿದ ಮೇಲೆ ಗಂಗಾಸಾನಿ ಹಾಸಿಗೆಯ ಮೇಲೆಯೇ ಎದ್ದು ಕುಳಿತು ತನ್ನ ಮೃತ್ಯುಪತ್ರವನ್ನು ತಯಾರಿಸುವದಾಗಿ ಅವರೆಲ್ಲರಿಗೂ ಬಿನ್ನವಿಸಿಕೊಂಡಳು. "ನಿನಗೇನಾಗೇದ ಗಂಗಾಸಾನಿ ? ಎಲ್ಲರಿಗೂ ಬರೋಂಗ ನಿನಗೂ ಜ್ವರ ಬಂದಾವ. ಇಷ್ಟ್ಯಾಕ ಹೆದರೀದಿ ? " ಎಂದು ಶಿವಪ್ಪನವರು ಮೃತ್ಯುಪತ್ರದ ಆವಶ್ಯಕತೆ ಈಗ ಇಲ್ಲವಾಗಿ ಹೇಳಿದರೂ ಗಂಗಾಸಾನಿ ಕೇಳಲಿಲ್ಲ. ಕಾಗದ ಪತ್ರಗಳೂ ಬರೆಯುವ ಸಾಮಗ್ರಿಗಳೂ ಸಿದ್ಧವಾದ ಮೇಲೆ ಕೋರ್ಟು-ಖಟ್ಲೆಗಳಿಗೆ ಓಡಾಡಿ ಕಾಯದೆಯ ಜ್ಞಾನವಿದ್ದ ಶಿವಪ್ಪನವರು ಗಂಗಾಸಾನಿಯ ಇಚ್ಛೆಯನ್ನು ಪೂರ್ಣ ತಿಳಿಮಕೊಂಡು, ವಿಚಾರಪೂರ್ವಕವಾಗಿ ಸುಸ್ಪಷ್ಟ ಭಾಷೆಯಲ್ಲಿ ಮೃತ್ಯುಪತ್ರ ತಯಾರಿಸಿದರು. ಅದಕ್ಕೆ ಗಂಗಾಸಾನಿಯು ಮತ್ತೂ ಸಾಕ್ಷೀದಾರರ ಸಹಿಯೂ ಆಯಿತು.

ತನ್ನ ಮೃತ್ಯುಪತ್ರದಲ್ಲಿ ಗಂಗಾಸಾನಿ ಧಾರವಾಡದ ತನ್ನ ಮನೆಯನ್ನು ಸುಭಗೆಗೂ, ಶಂಭುಲಿಂಗನ ಬೆಟ್ಟದಲ್ಲಿಯ ಬೆಳ್ಳಿ ಬಂಗಾರ ಮೊದಲ್ಗೊಂಡು

ತನ್ನ ಎಲ್ಲ ಸೊತ್ತನ್ನು ರಾಧಕ್ಕನವರಿಗೂ, ಬ್ಯಾಂಕಿನಲ್ಲಿ ಉಳಿದಿದ್ದ ಹಣದ ಅರ್ಧ ಪಾಲನ್ನು ಶಂಭುಲಿಂಗನಿಗೂ, ಉಳಿದ ಹಣವನ್ನು ಶ್ರೀಕಂಠಶಾಸ್ತ್ರಿಗಳಿಗೂ ಕೊಡುವದಾಗಿ, ಇಚ್ಛೆಯನ್ನು ವ್ಯಕ್ತ ಪಡಿಸಿದುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

ಮೃತ್ಯುಪತ್ರ ಮುಗಿದೊಡನೆ ಸುಭಗೆಯೂ ರಾಮೂನೂ ಒಬ್ಬರನ್ನೊಬ್ಬರು ನೋಡಿದರು. ಇಬ್ಬರ ಮುಖದ ಮೇಲೆಯೂ ಕೃತಜ್ಞತೆ ಉಕ್ಕಿ ಬರುತ್ತಿದ್ದಂತೆ ಕಾಣುತಿತ್ತು. ಸುಭಗೆ ಮುಖ ಮುಚ್ಚಿಕೊಂಡು ಅಳಹತ್ತಿದಳು.

* * * *

ಶ್ರೀಕಂಠಶಾಸ್ತ್ರಿಗಳು ನೆರೆಯ ಊರ ಸ್ಟೇಶನ್ನಿನಲ್ಲಿ ಇಳಿದಾಗ ಅದೇ ತಾನೇ ಹತ್ತು ಹೊಡೆದಿತ್ತು. ಅಲ್ಲಿಂದ ತಿರುಗಿ ಶಂಭುಲಿಂಗನ ಬೆಟ್ಟಕ್ಕೆ ಹೋಗಲು ಮೊದಲಿನ ಗಾಡಿಯಂದರೆ ಸಂಜೆಯ ಐದು ಗಂಟೆಗೇನೇ.

ಶ್ರೀಕಂಠಶಾಸ್ತ್ರಿಗಳು ಸ್ಟೇಶನ್ನಿನಲ್ಲಿಯೇ ಒಂದು ಕ್ಷಣ ನಿಂತು ವಿಚಾರ ಮಾಡಿದರು. ತಮಗೆ ಗೊತ್ತಿದ್ದ ಒಬ್ಬ ಸಾಹುಕಾರನಲ್ಲಿಗೆ ಹೋಗಿ ಅವರ ಕಾರನ್ನು ಒಂದು ತಾಸಿನ ಪೂರ್ತಿ ಪಡೆಯಲು ಅವರಿಗೆ ತೊಂದರೆಯಾಗಲಿಲ್ಲ. ಕಾರನ್ನು ತೆಗೆದುಕೊಂಡೇ ಶ್ರೀಕಂಠಶಾಸ್ತ್ರಿಗಳು ನೇರವಾಗಿ ತಮಗೆ ಪೂರ್ಣ ಪರಿಚಿತರಾದ ಡಾಕ್ಟರರ ಕಡೆಗೆ ಹೋಗಿ ಅವರನ್ನು ಶಂಭುಲಿಂಗನ ಬೆಟ್ಟಕ್ಕೆ ಹೊರಡಿಸಿದರು.

ಕಾರು ಬೆಟ್ಟದ ತುಟ್ಟತುದಿಯ ವರೆಗೂ ಬಂತು. ಕಾರನ್ನು ಬೆನ್ನುಹತ್ತಿ ಗುಡಿಸಲುಗಳಿಂದ ಕೆಲವು ಜನವೂ ಬಂತು.

ಡಾಕ್ಟರರು ಗಂಗಾಸಾನಿಯನ್ನು ಪರೀಕ್ಷಿಸಿದರು. ೧೦೪ ಅಂಶದ ವರೆಗೆ ಜ್ವರಗಳಿದ್ದವು. ಗಂಗಾಸಾನಿಯ ಕಣ್ಣು ತೆರೆಸಿ ನೋಡಿದರು. ಕಣ್ಣುಗಳು ತುಂಬ ಕೆಂಪೇರಿದ್ದವು. ಗಡ್ಡೆಯನ್ನು ಮುಟ್ಟಿ ನೋಡಿದರು. ಜನರೆಲ್ಲ ಡಾಕ್ಟರರನ್ನೇ ಎವೆಯಿಕ್ಕದೆ ನೋಡುತ್ತಿದ್ದರು.

ಡಾಕ್ಟರರು ಅಲ್ಲಿ ಹತ್ತು ನಿಮಿಷ ಸಹ ನಿಲ್ಲಲಿಲ್ಲ. ಏನೂ ಮಾತಾಡಲೂ ಇಲ್ಲ. ತಿರುಗಿ ಕಾರಿನಲ್ಲಿ ಕೂತಾಗ ಶ್ರೀಕಂಠಶಾಸ್ತ್ರಿಗಳು ಅವರನ್ನು ವಿಚಾರಿಸಲು ಅವರು ಅಂದರು: “ ಪ್ಲೇಗು. ಯಾರನಾದರೂ ದವಾಖಾನಿಗೆ ಕಳಸರಿ. ಔಷಧ ಕೊಡತೇನಿ. ” ಹೆಚ್ಚಿಗೆ ಮಾತಾಡಲೇ ಇಲ್ಲ. ಕಾರು ಕೆಳಗಿಳಿಯಿತು.

ಸಂಜೆಯಾದರೂ ಗಂಗಾಸಾನಿಯ ಸುತ್ತಲು ಕುಳಿತವರು ಯಾರೂ ಚದರಿರಲಿಲ್ಲ. ಈಗಾಗಲೇ ಗಂಗಾಸಾನಿಗೆ ಮಬ್ಬು ಬಂದಂತಾಗಿ ಆಗಾಗ ನಿದ್ದೆಹೋಗುತ್ತಿದ್ದಳು. ಜ್ವರ ಹಾಗೆಯೇ ಇದ್ದವು. ಗಡ್ಡೆಯ ನೋವು ಬಹಳ ಇದ್ದಿತೋ ಏನೋ ?

ರಾತ್ರಿಯಾದಂತೆಲ್ಲ ಆಕೆ ಆಗಾಗ ಬಡಬಡಿಸಹತ್ತಿದಳು. ನಡುನಡುವೆ ತಕ್ಕಮಟ್ಟಿಗೆ ಎಚ್ಚರವೂ ಆಗುತ್ತಿತ್ತು. ಒಂದೆರಡು ಸಲ—ಶಂಕರಭಟ್ಟರು ಬಂದರೋ, ಹೇಗೆ— ಎಂಬುದಾಗಿ ವಿಚಾರಿಸಿದಳು. ಆಕೆಯ ಮಾತಿನಲ್ಲಿ ಅಸಂಬದ್ಧತೆ ಹೆಚ್ಚುತಲಿತ್ತು.

ನಿದ್ದೆಹೋದಾಕೆ ಒಮ್ಮೆ ಬೆಚ್ಚಿಬಿದ್ದು ಎಚ್ಚರಾದಂತಾಯಿತು. ತನ್ನ ಕೆಂಪು ಕಣ್ಣುಗಳನ್ನು ಅತ್ತಿತ್ತ ಹೊರಳಿಸಿದಳು; ಬದಿಯಲ್ಲಿಯೇ ಕುಳಿತ ಸುಭಗೆಯನ್ನು ಬಿರಿಬಿರಿ ನೋಡಿದಳು. ಅವಳಿಗೆ ಪೂರ್ಣ ಎಚ್ಚರಿಕೆ ಇರ ಲಿಲ್ಲವೆಂಬುದು ಆಕೆಯ ಮಾತೇ ಹೇಳುವಂತಿತ್ತು. ಆಕೆ ಸುಭಗೆಯ ಹಣೆ ಯಲ್ಲಿಯೇ ತನ್ನ ಕಣ್ಣುಗಳನ್ನಿಟ್ಟು ಅಂದಳು: "ಅಲ್ಲ, ಸುಭಗಾ, ಹಣೀ ಮ್ಯಾಲೆ ಕುಂಕುಮಾನs ಕಾಣೋದಿಲ್ಲಲ್ಲವ್ವಾ....ಬರೀ ಹಣೇಲೇ ಇರಬಾರ ದವ್ವ, ಹಚಿಗೋ!"

ಸುಭಗೆ ಸುಮ್ಮನೆ ಕುಳಿತಿದ್ದಳು. ಉಳಿದವರೂ ಮಾತನಾಡಲಿಲ್ಲ. ಗಂಗಾಸಾನಿ ಸ್ವಲ್ಪ ಕಣ್ಣು ಮುಚ್ಚಿದಂತೆ ಮಾಡಿ, ಮತ್ತೆ ಅಂದಳು: "ಮ್ಯಾಲೆ ನಾಗೊಂದಿಗಿ ಮ್ಯಾಲ ಅರಿಸಿಣ-ಕುಂಕುಮದ ಪಂಚಪಾಳೆ ಅದ. ಯಾರರ ಸ್ವಲ್ಪ ಕೊಡರಿ."

ಯಾರೂ ಮಾತನಾಡಲಿಲ್ಲ.

ಗಂಗಾಸಾನಿ ಮತ್ತೆ ನಾಲ್ಕೂ ಕಡೆಗೆ ಕಣ್ಣು ಆಡಿಸಿ, ರಾಮೂನ ಕಡೆಗೆ ಹೊರಳಿ "ರಾಮಣ್ಣಾ, ನೀವು ಉದ್ದ ಇದ್ದೀರಿ; ಸ್ವಲ್ಪ ಆ ಪಂಚಪಾಳೇ ಕೊಡ ತೀರಾ?" ಎಂದು ದೈನ್ಯದಿಂದ ಕೇಳಿಕೊಂಡಳು. ರಾಮೂ ಪಂಚಪಾಳೆ ಯನ್ನು ಗಂಗಾಸಾನಿಯ ಹತ್ತಿರ ತಂದಿಟ್ಟ.

ಗಂಗಾಸಾನಿ ಒಂದು ಚುಟಿಕಿ ಕುಂಕುಮ ತೆಗೆದುಕೊಂಡು ಸುಭಗೆಯ ಹಣೆಗೆ ಹಚ್ಚಲು ಹೋದಳು. ಸುಭಗೆ ಮುಖವನ್ನು ಹಿಂದೆ ಸರಿಸಿದಾಗ,

ಸುತ್ತಲು ಕುಳಿತವರಲ್ಲಿ ಒಬ್ಬಿಬ್ಬರು "ಇರಲಿ ಬಿಡು ಸುಭಗಕ್ಕ. ಆಕೆಗೇನು ಎಚ್ಚರ ಅದಽನ?"

ಗಂಗಾಸಾನಿ ಮತ್ತೆ "ನಾನೂ ಮುತ್ತೈದಿ ಇದ್ದೇನವ್ವ ಸುಭಗಾ. ನೀನೇನೂ ತಿಳಕೋಬ್ಯಾಡಾ." ಎಂದಳು.

ಮನೆ ಹಿಡಿಸಲಾರದಷ್ಟು ಜನ ಮೌನವಾಗಿ ಕುಳಿತುಕೊಂಡಿತ್ತು. ರಾಧಕ್ಕ ಗಂಗಾಸಾನಿಯ ತಲೆಯನ್ನು ತನ್ನ ತೊಡೆಯ ಮೇಲೆಯೇ ಹಾಕಿಕೊಂಡಿದ್ದರು. ತಮ್ಮ ಜೀವನದಲ್ಲಿಯೇ ಮೊದಲ ಸಲ ಶ್ರೀಕಂಠಶಾಸ್ತ್ರಿಗಳು ಕಣ್ಣಲ್ಲಿ ನೀರು ತಂದರು.

ಹೊರಗೆ ಆಗಸದಲ್ಲಿ ಬೆಳ್ಳಿ ಬೆಳಗುತಲಿತ್ತು. ಇಂದು ಅದರ ತೇಜಸ್ಸು ಹೆಚ್ಚಿದ್ದಿತು. ಗಂಗಾಸಾನಿಯ ಜ್ಯೋತಿ ಅದರಲ್ಲಿ ಕೂಡಿಕೊಂಡಿತ್ತೊ ಏನೊ?

* * * *

ಗಂಗಾಸಾನಿಯ ಅಂತ್ಯಸಂಸ್ಕಾರದ ಸಮಯಲ್ಲಿ ಸಂಗಪ್ಪನೂ ಶಂಕರ ಭಟ್ಟರೂ ಉಪಸ್ಥಿತರಿದ್ದರು. ಶ್ರೀಕಂಠಶಾಸ್ತ್ರಿಗಳು ಗಂಗಾಸಾನಿಯ ಆತ್ಮ ಶಾಂತಿಯಾಗಲೆಂದು ಶಂಕರಭಟ್ಟರನ್ನೊಳಗೊಂಡು ಐವರು ಬ್ರಾಹ್ಮಣರಿಗೂ, ಐವರು ಗೊರವರಿಗೂ ದಕ್ಷಿಣೆ ಕೊಟ್ಟರು.

---

# ಮನೋಹರ ಗ್ರಂಥಮಾಲೆ

## — ಪರಿಚಯ ಪತ್ರ —

**ಪ್ರಾರಂಭ :**

ಈ ಗ್ರಂಥಮಾಲೆಯು **೧೯೩೩ನೆಯ ಅಗಸ್ಟ ೧೫ಕ್ಕೆ** (ಶ್ರೀ. ಅರವಿಂದರ ಜನ್ಮದಿನವನ್ನು ನೆನೆದು ) ಪ್ರಾರಂಭವಾಗಿದೆ.

**ಪ್ರಕಟಿಸುವ ಸಾಹಿತ್ಯ :**

ಕಾದಂಬರಿ, ಸಣ್ಣ ಕತೆ, ನಾಟಕ, ಏಕಾಂಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೆ ಈ ಗ್ರಂಥಮಾಲೆಯು ನಿಯತಕಾಲಾವಕಾಶದಲ್ಲಿ ಪ್ರಕಟಿಸುತ್ತಿದೆ.

ಅನುವಾದ, ಭಾಷಾಂತರಗಳಿಗಿಂತಲೂ ಸ್ವತಂತ್ರಗ್ರಂಥಗಳನ್ನೆ ಹೆಚ್ಚಾಗಿ ಪ್ರಕಟಿಸುತ್ತಿದೆ.

ಕಾವ್ಯ-ವಿಮರ್ಶೆ-ವಿಜ್ಞಾನ-ವಿಚಾರ ಸಾಹಿತ್ಯವನ್ನೂ ಗ್ರಂಥಮಾಲೆಯು ಬಿಡಿಮುತ್ತುಗಳೆಂದು ಆಗೀಗ ಪ್ರಕಟಿಸುತ್ತಿದೆ.

**ನಮ್ಮ ಸಲಹೆಗಾರರು :**

ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಈ ಗ್ರಂಥಮಾಲೆಗೆ ಪ್ರಾರಂಭದಿಂದಲೂ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

**ನಮ್ಮ ಬರೆಹಗಾರರು :**

ಇಡಿ ಕನ್ನಡ ನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಅದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ ; ಅದರ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

**ಹೊಸ ವರ್ಷ :**

ಗ್ರಂಥಮಾಲೆಯ ಹೊಸ ವರ್ಷವು ಅಗಸ್ಟ ತಿಂಗಳಿಂದ ಪ್ರಾರಂಭವಾಗುತ್ತದೆ; ಜುಲೈ ತಿಂಗಳಿಗೆ ಮುಗಿಯುತ್ತದೆ.

**ಚಂದಾದಾರರಾಗುವದು :**

ವರ್ಷದಲ್ಲಿ ಯಾವಾಗ ಬೇಕಾದರೂ ಹೊಸದಾಗಿ ಚಂದಾದಾರರಾಗಬಹುದು. ಆದರೆ ಆ ಹಿಂದೆ ಪ್ರಕಟವಾದ ಆ ವರ್ಷದ ಗ್ರಂಥಗಳನ್ನು— ಅಗಷ್ಟದಿಂದಲೆ ಪ್ರಾರಂಭವೆಂದು ತಿಳಿದು— ಅವರಿಗೆ ಕಳಿಸಿಕೊಡಲಾಗುವುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.

**ಹಿಂದಿನ ಗ್ರಂಥಗಳು :**

ಗ್ರಂಥಮಾಲೆಯ ನಡೆಯುವ ವರ್ಷದ ಗ್ರಂಥಗಳನ್ನು ಬಿಟ್ಟು ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತಿಲ್ಲ. ಅವನ್ನು ಮುಖಬೆಲೆ ಕೊಟ್ಟು ಕೊಳ್ಳಬೇಕಾಗುವದು.

**ಅಜೀವಚಂದಾ :**

ಗ್ರಂಥಮಾಲೆಗೆ **ಒಂದೇ ಸಲಕ್ಕೆ ೧೫೦ ರೂಪಾಯಿಗಳನ್ನು** ಸಲ್ಲಿಸಿ ಆಜೀವ ಚಂದಾದಾರರಾಗಬಹುದು. ಅವರಿಗೆ ಅವರ ಆಜನ್ಮಪರ್ಯಂತ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವದು.

ಗ್ರಂಥಮಾಲೆಯ ಬಿಡಿಮುತ್ತುಗಳನ್ನು ವಿಶೇಷ ಸವಲತ್ತಿನಿಂದ ಅವರಿಗೆ ಪೂರೈಸಲಾಗುವುದು.

**ವಾರ್ಷಿಕ ಚಂದಾ :**

ಗ್ರಂಥಮಾಲೆಯ ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ **ಆರು ರೂಪಾಯಿ ಎಂಟಾಣೆ ( ೬–೮–೦ )** ಮಾತ್ರ ಇದೆ.

ಗ್ರಂಥಮಾಲೆಯ ಕಾರ್ಯಾಲಯದಲ್ಲಿಯೆ ಬಂದು ತೆಗೆದುಕೊಂಡು ಹೋಗಲಪೇಕ್ಷೆಯುಳ್ಳವರಿಗೆ ಮಾತ್ರ (ಅಂಚೆವೆಚ್ಚ ಬಿಟ್ಟು) ಐದು ರೂಪಾಯಿ ಎಂಟಾಣೆ ( ೫–೮–೦ ) ಮಾತ್ರ ತೆಗೆದುಕೊಳ್ಳಲಾಗುವುದು.

**ವರ್ಷಕ್ಕೆ ಕೊಡುವ ಪುಟಗಳು :**

ಗ್ರಂಥಮಾಲೆಯಿಂದ ಒಂದು ವರ್ಷದಲ್ಲಿ ಚಂದಾದಾರರಿಗೆ ಕ್ರಾ. ಅ. ೯೦೦ ಪುಟಗಳಷ್ಟು ಸರಸಸಾಹಿತ್ಯವನ್ನು ಸಲ್ಲಿಸಲಾಗುತ್ತದೆ.

**ಸೂಚನೆ :**

'ಬೇಡಿಕೆ'ಯನ್ನು ಕೊಡುವಾಗ '**ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ**' ಪಟ್ಟಿಯೊಳಗಿಂದಲೇ ಆಯ್ದು ಕಳುಹಿಸಬೇಕು.

**— ಪುಸ್ತಕ ವ್ಯಾಪಾರಿಗಳಿಗೆ ಮಾತ್ರ —**

ಪುಸ್ತಕ ವ್ಯಾಪಾರಿಗಳು ತಮ್ಮ ಬೇಡಿಕೆಯನ್ನು ಕಳಿಸುವಾಗ 'ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ' ಪಟ್ಟಿಯೊಳಗಿಂದ ಮಾತ್ರ ಆಯ್ದು ಕಳಿಸಬೇಕು.

**ಬೇಡಿಕೆಯೊಡನೆ ಮುಂಗಡ ಹಣ ಕಳುಹಿಸಬೇಕು.**

ಬೇಡಿಕೆಯ ಒಟ್ಟುಬೆಲೆಯ ಮೇಲೆ ೧೨ ೩/೪% ಕಮಿಶನ್ ಕೊಡಲಾಗುವುದು.

**೧೫೦ ರೂಪಾಯಿಗಳ ಮೇಲ್ಪಟ್ಟು ಬೇಡಿಕೆ ಕಳುಹಿಸಿದಲ್ಲಿ** Free Delivery **ಕೊಡುವ ಸವಲತ್ತಿದೆ.**

ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

**ವಿಳಾಸ :**

ಸಂಪಾದಕ

**ಮನೋಹರ ಗ್ರಂಥಮಾಲಾ**

**ಧಾರವಾಡ**

## ಮನೋಹರ ಗ್ರಂಥಮಾಲೆಯ ಶತಗ್ರಂಥಪೂರ್ತಿಯಾಗುವ

### ಈ ವರುಷಕ್ಕೆ

**ಚಂದಾದಾರರಿದ್ದವರಿಗೆ—ಮತ್ತು—ಚಂದಾದಾರರಾಗುವವರಿಗೆ**

## ಒಂದು ಸುವರ್ಣಪ್ರಸಂಗ! ವಿಶೇಷ ಸೌಕರ್ಯ!

# ಆರು ರೂಪಾಯಿ ಎಂಟಾಣೆಯಲ್ಲಿಯೆ

## ಹದಿನೈದುನೂರು ಪುಟಗಳ ಮನೋಹರ ಸರಸಸಾಹಿತ್ಯ!

**ಹೊಸದಾಗಿ ಚಂದಾದಾರರಾಗುವವರು**

**ಈ ಸುಪ್ರಸಂಗವನ್ನು ಕಳೆದುಕೊಳ್ಳಬಾರದು**

ಇದೇ ವರುಷದಲ್ಲಿ ಮನೋಹರ ಗ್ರಂಥಮಾಲೆಯ ಶತಗ್ರಂಥಪೂರ್ತಿಯಾಗುವುದನ್ನು ನೆನೆದು, ನಮ್ಮ ಬರೆಹಗಾರರು ಕೊಟ್ಟ ಉತ್ಸಾಹದ ಆಶ್ವಾಸನಗಳನ್ನು ನಂಬಿ, ನಮ್ಮ ಗ್ರಾಹಕರು ಈ ವರೆಗೂ ಸಲ್ಲಿಸುತ್ತ ಬಂದ ಪ್ರೋತ್ಸಾಹವನ್ನನುಲಕ್ಷಿಸಿ, ಕನ್ನಡ ಸಾಹಿತ್ಯಪ್ರಯೋಗಮಂದಿರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಸಾಹಿತ್ಯಜ್ಞರ ಸಹಕಾರ ಪಡೆದು ಪ್ರಾರಂಭಿಸುವ ಸಾಹಸಕ್ಕೆ ಕೈಹಾಕಿದ್ದೇವೆ. ಸಾಹಿತ್ಯನಿರ್ಮಾಣದ ಈ ಪ್ರಯೋಗದಲ್ಲಿ ಹುಟ್ಟಬಹುದಾದ ಕೃತಿಗಳ ಕಲ್ಪನೆ ನಮಗೂ ಇಲ್ಲ; ಪ್ರಯೋಗ ನಡೆಯಿಸಿದ ಆ ಸಾಹಿತ್ಯಜ್ಞರಿಗೂ ಇರಲಿಕ್ಕಿಲ್ಲ. ಆದರೆ ಉತ್ತಮ ಕೃತಿನಿರ್ಮಾಣಕ್ಕೆ ಈ ಪ್ರಯೋಗ ಅನುವುಮಾಡಿಕೊಟ್ಟೀತು ಎಂಬ ಆಶೆ ನಮ್ಮನ್ನು ಈ ದಾರಿಯಲ್ಲಿ ನಡೆಯಿಸಿದೆ.

**ನಮ್ಮ ಗ್ರಾಹಕರಿಗೆ ವಿಶೇಷಸೂಚನೆ :**

ಸಾಹಿತ್ಯನಿರ್ಮಾಣದ ರೂಪರೇಷೆಯನ್ನು ಓದಿನೋಡಿ **ಅದರಲ್ಲಿ** ಕಾಣಿಸಿದ ಎಲ್ಲ ಗ್ರಂಥಗಳೂ ಇದೇ ವರುಷದಲ್ಲಿ ಬರುತ್ತವೆಂದಾಗಲಿ, **ಅದೇ** ಕ್ರಮದಲ್ಲಿ ಬರುತ್ತವೆಂದಾಗಲಿ ದಯವಿಟ್ಟು ತಿಳಿದುಕೊಳ್ಳಬಾರದು.

ಅದರೊಳಗಿಂದ ಈ ವರುಷದಲ್ಲಿ (೧೯೪೯ರ ಆಗಸ್ಟದಿಂದ **೧೯೫೦ ಜುಲೈ** ಅಂತ್ಯದೊಳಗಾಗಿ) ಒಟ್ಟು ೧೫೦೦ ಪುಟಗಳನ್ನು ನಮ್ಮ ಗ್ರಾಹಕ**ರಿಗೆ ಸಲ್ಲಿಸು**ತ್ತೇವೆ.

ಈ ಸಲ ನಿಯತಾವಕಾಶದ ನಿರ್ಬಂಧವನ್ನೂ ಸ್ವಲ್ಪಮಟ್ಟಿಗೆ ಮೀರ**ಬೇ**ಕಾಗಿದ್ದರೂ ಸಲ್ಲಿಸಬೇಕಾದ ಒಟ್ಟು ಪುಟಗಳನ್ನು ಅಗಸ್ಟ **ತಿಂಗಳ ಪ್ರಾ**ರಂಭದೊಳಗಾಗಿ ಸಲ್ಲಿಸಿಯೇ ಸಲ್ಲಿಸುತ್ತೇವೆ.

ಈಗ ತೋರಿಸಿದ ಸಾಹಿತ್ಯನಿರ್ಮಾಣದ ಈ ರೂಪರೇಷೆಯನ್ನು–ತೆರೆಯ ಹಿಂದೆ ಒಳಗೆ ಏನು ನಡೆದಿದೆ, ಹೇಗೆ ನಡೆದಿದೆ, ಯಾರು ಯಾರು ಯಾವ ಯಾವ ಕೃತಿನಿರ್ಮಾಣ ನಡೆಯಿಸಿದ್ದಾರೆ—ಎಂಬುದನ್ನು ನಮ್ಮ ಗ್ರಾಹಕರ ಕಲ್ಪನೆಗೆ ತಂದುಕೊಡುವುದಕ್ಕಾಗಿ ಇಲ್ಲಿ ಪ್ರಕಟಿಸಲಾಗಿದೆ.

# ಗ್ರಂಥಮಾಲೆಯಲ್ಲಿ ಮುಂದೆ ಬರುವ
# ಸಾಹಿತ್ಯ ನಿರ್ಮಾಣದ ರೂಪರೇಷೆ

**ಕಾದಂಬರಿಗಳು**

೧ **ಮಾನಸಪುತ್ರ** (ಸಾಮಾಜಿಕ ಕಾದಂಬರಿ) .... ದ. ರಾ. ಬೇಂದ್ರೆ
೨ **ಮಿದಿನಾಪುರಮಲ್ಲ** (ಸಾಹಸ ಜೀವನಚಿತ್ರ) ... 'ಗುರುರಾಜ'
೩ **ತಾಯಿ** ('ಪರ್ಲ್‌ಬಕ್ಕ'ಳ ಕಾದಂಬರಿಯ ಆಧಾರದಿಂದ) ಕೃಷ್ಣಕುಮಾರ
೪ **ಸಮರಸವೇ ಜೀವನ** (ಇಜ್ಜೋಡಿನ ಕೊನೆಯ ಭಾಗ) ವಿ. ಕೃ. ಗೋಕಾಕ
೫ **ನಟಸಾರ್ವಭೌಮ** ( ಪೂರ್ತಿಮಾಡಿದ್ದು ) .... 'ಕ್ಷ'
೬ **ಮೂಕಬಲಿ** ( ಸಾಮಾಜಿ ಕಾದಂಬರಿ ) .... ಜಡಭರತ.
೭ **ಸಂಪಾದಕ** ( ಕಾದಂಬರಿ ) ಜಡಭರತ.

ಅಲ್ಲದೆ

ಕನ್ನಡಸಾಹಿತ್ಯ ಪ್ರಯೋಗಮಂದಿರದಲ್ಲಿ
ಸಾಹಿತ್ಯಜ್ಞರ ಪ್ರಯೋಗಫಲವಾಗಿ
**'ಒಂದು ಕಾದಂಬರಿ'**
ಹೊರಕ್ಕೆ ಬರಲಿದೆ.

ಮತ್ತು

ಐತಿಹಾಸಿಕ ಒಂದು ಸ್ವತಂತ್ರ ಮಹಾಕಾದಂಬರಿಯೂ
ಮುದ್ರಣಕ್ಕಾಗಿ ಸಿದ್ಧವಾಗುತ್ತಲಿದೆ.

**ನಾಟಕಗಳು :**

೯ **ಮಹಾಲಕ್ಷ್ಮಿ ಮತ್ತು ಮಂದೀ ಮದಿವೆ** .... ದ. ರಾ. ಬೇಂದ್ರೆ
೧೦ **ಪಂಜು** .... .... .... ಜಡಭರತ
೧೧ **ಭೃಗು** .... .... .... ಜಡಭರತ
೧೨ **ಅಂಗಿ ಮ್ಯಾಲಂಗಿ** .... .... ದ. ರಾ. ಬೇಂದ್ರೆ
೧೩ **ಕಪ್ಪು ಹೆಂಡತಿ** .... .... ದ. ರಾ. ಬೇಂದ್ರೆ
೧೪ **ಹೆಣ್ಣಿನಾಸೆ** .... .... .... ದ. ರಾ. ಬೇಂದ್ರೆ

ಅಲ್ಲದೆ

ಕಲೋಪಾಸಕ ಮಂಡಲದವರು ತಾವು ರಂಗಭೂಮಿಯ ಮೇಲೆ ಈಗಾಗಲೆ ಪ್ರಯೋಗ ಮಾಡಿದ, ಮಾಡಲಿರುವ (ಪ್ರಯೋಗ ವಾದನಂತರ) ಸುಮಾರು ಇಪ್ಪತ್ತೈದು "**ಆಶು ನಾಟಕಗಳನ್ನು**" ಸೇರಿಸಿ ಒಂದು ಸಂಗ್ರಹ ಮಾಡಿ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಕೊಡಲೊಪ್ಪಿ ಸಿದ್ಧತೆ ನಡೆಯಿಸಿದ್ದಾರೆ.

ಮತ್ತು

ಲಕ್ಷ್ಮಣರಾವ ಬೇಂದ್ರೆ, ಎಚ್. ಬಿ. ಕುಲಕರ್ಣಿ, ಆರ್. ವಿ. ಕುಲಕರ್ಣಿ, ಎ. ಎನ್. ಮೂರ್ತಿರಾವ್, ಇವರೂ ಒಪ್ಪಿ ನಾಟಕಗಳನ್ನು ಬರೆಯುವುದರಲ್ಲಿ ತೊಡಗಿದ್ದಾರೆ.

**ಕತೆಗಳು :**

೧೫ **ಮೊದಲ ಹೂ** .... .... ಜಡಭರತ
೧೬ **ನಾನು–ನನ್ನದು** .... .... ಜಡಭರತ
೧೭ **ಜಡಭರತನ ದಿನಚರಿ** .... ಜಡಭರತ
೧೮ **ಚೀನದ ಬಾಳು-ಬದುಕು** .... ದ. ರಾ. ಬೇಂದ್ರೆ ಮತ್ತು ಗುಂಡಪ್ಪ

**ನಡೆದು ಬಂದ ದಾರಿ :**

ಈ ವರೆಗೆ ಕನ್ನಡ ಸಾಹಿತ್ಯ ನಡೆದು ಬಂದ ದಾರಿಯನ್ನು ಗುರುತಿಸಿ ತೋರಿಸುವ ಒಂದು (ಕ್ರೌ. ೩ ದ) ಒಂದು ಸಾವಿರ ಪುಟದ ವಿಶೇಷ-ಸಾಹಿತ್ಯ-ಸಂಪುಟವನ್ನು ಶ್ರೀಮಾನ್ ದ. ರಾ. ಬೇಂದ್ರೆಯವರ ಮುಖ್ಯ ಸಂಪಾದಕತ್ವದಲ್ಲಿ ಮನೋಹರ ಗ್ರಂಥಮಾಲೆಯ ಶತ ಗ್ರಂಥಪೂರ್ತಿಯ ನೆನಪಿಗಾಗಿ ಪ್ರಕಟಿಸುವದನ್ನು ನಿಶ್ಚಯಿಸಲಾಗಿದೆ.

---

# ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳು

## ಕಾದಂಬರಿಗಳು

| | | | |
|---|---|---|---|
| ೧. | ಧರ್ಮಸೆರೆ | .... ಜಡಭರತ | .... ೨—೦-೦ |
| ೨. | ಇಜ್ಜೋಡು ೧,೨,೩,೪,೫ . | ವಿ ಕೃ. ಗೋಕಾಕ | .... ೧೮-೧೨-೦ |
| ೩. | ನಿಸರ್ಗ | .... ಮಿರ್ಜಿ ಅಣ್ಣಾರಾಯ | .... ೩—೮-೦ |
| ೪. | ಅನಂತ | .... ಸತ್ಯಬೋಧ | .... ೧—೪-೦ |
| ೫. | ಭಗ್ನಮಂದಿರ | .... ಹೇಮಂತ | .... ೪—೮-೦ |
| ೬. | ರಾಷ್ಟ್ರಪುರುಷ | .... ಮಿರ್ಜಿ ಅಣ್ಣಾರಾಯ | .... ೭—೦-೦ |
| ೭. | ಅನ್ನ | .... ರಂ. ಶ್ರೀ. ಮುಗಳಿ | .... ೪—೦-೦ |
| ೮. | ಕಾರಣಪುರುಷ | .... ರಂ ಶ್ರೀ. ಮುಗಳಿ | .... ೧—೮-೦ |
| ೯. | ಮುನಿಯನ ಮಾದರಿ | .... ಕೆ. ಎ. ಎನ್. ರಾವ್ | .... ೨-೧೨-೦ |
| ೧೦. | ಜಡಭರತನ ಕನಸುಗಳು .. | ಜಡಭರತ | .... ೧—೮-೦ |
| ೧೧. | ಗಂಗಾಸಾನಿ | .... ಗಿರಿಮಾತಾ | .... ೧-೧೨-೦ |
| ೧೨. | ಔರಂಗಜೇಬ | .... ಕೆರೂರ ವಾಸುದೇವಾಚಾರ್ಯ. | ೩—೦-೦ |
| ೧೩. | ವಾಲ್ಮೀಕಿ ವಿಜಯ | .... ಕೆರೂರ ವಾಸುದೇವಾಚಾರ್ಯ. | ೧—೦-೦ |

## ನಾಟಕಗಳು

| | | | |
|---|---|---|---|
| ೧೪. | ಜಯಶ್ರೀ | .... ಚಿ. ಸದಾಶಿವಯ್ಯ | .... ೨—೪-೦ |
| ೧೫. | ಮಿಂಚಿನ ಹುಡಿ | .... ಕೃಷ್ಣಕುಮಾರ | .... ೨—೮-೦ |
| ೧೬. | ಎತ್ತಿದ ಕೈ | .... ರಂ. ಶ್ರೀ. ಮುಗಳಿ | .... ೧-೧೪-೦ |
| ೧೭. | ಯುಗಾಂತರ | .... ವಿ. ಕೃ. ಗೋಕಾಕ | .... ೦-೧೨-೦ |
| ೧೮. | ಬಿತ್ತಿದ ಬೆಳೆ | .... ಕೋ. ಶಿ. ಕಾರಂತ | .... ೧—೦-೦ |
| ೧೯. | ಪರಿವರ್ತನ | .... ಲಕ್ಷ್ಮಣರಾವ ಬೇಂದ್ರೆ | .... ೦-೧೨-೦ |
| ೨೦. | ವೇಣುಮಾವ | .... ಪ ಸೀತಾದೇವಿ | .... ೦-೧೨-೦ |
| ೨೧. | ಆಶುನಾಟಕಗಳು | .... ಬೇರೆ ಬೇರೆಯವರು | .... ೦-೧೨-೦ |
| ೨೨. | ವಿಮರ್ಶಕ ವೈದ್ಯ | .... ವಿ. ಕೃ. ಗೋಕಾಕ | .... ೦—೬-೦ |
| ೨೩. | ನಲದಮಯಂತಿ | .... ಕೆರೂರ ವಾಸುದೇವಾಚಾರ್ಯ. | ೧—೮-೦ |
| ೨೪. | ಮಗು | .... ಕೆ. ಎ. ಎನ್. ರಾವ್ | .... ೧—೮-೦ |

**ಇತರ**

೨೫. ಸುಳುವು ಹೊಳವು (ಪ್ರಬಂಧಗಳು) ಬೇರೆಬೇರೆಯವರು ೧—೮—೦
೨೬. ಕೆನ್ಸಿಂಗ್‌ಟನ್ ಪಾರ್ಕ್ (ಕತೆ-ಹರಟೆ-ಏಕಾಂಕ ಸಂಗ್ರಹ) ೧—೮—೦
೨೭ ಬಹುಮಾನ ಪಡೆದ ಬರೆಹಗಳು ( ,, ,, ) .... ೧—೧೨—೦
೨೮. ಸಾಹಿತ್ಯ ಸಂಶೋಧನ (ವಿಮರ್ಶನಾತ್ಮಕ) ದ. ರಾ. ಬೇಂದ್ರೆ ೨—೮—೦
೨೯. ದತ್ತವಾಣಿ (ವಿಮರ್ಶಾತ್ಮಕ) ಮಿರ್ಜಿ ಅಣ್ಣಾರಾಯ .... ೧—೪—೦
೩೦. ಮಾತೃವಾಣಿ (ಆಧ್ಯಾತ್ಮಿಕ) ಶಿಶು ಮಧುರಚೆನ್ನ .... ೧—೪—೦
೩೧. ಬಾಸಿಗ (ಕವನ ಸಂಗ್ರಹ) ರಂ. ಶ್ರೀ. ಮುಗಳಿ .... ೧—೪—೦
೩೨. ಸಮುದ್ರಗೀತಗಳು (ಕವನ ಸಂಗ್ರಹ) ವಿ. ಕೃ. ಗೋಕಾಕ ೧—೪—೦
೩೩. ಸಾಹಿತ್ಯ-ವಿಮರ್ಶೆ (ದ. ರಾ. ಬೇಂದ್ರೆ) .... ೧—೮—೦
೩೪. ಯುಗಪ್ರವರ್ತಕ ಬಸವಣ್ಣ (ಚಿಂತಾಮಣಿ) .... ೧—೦—೦

---

## ಬೇಗನೆ ಪ್ರಕಟವಾಗಲಿರುವ

### ಎರಡನೆಯ ಆವೃತ್ತಿಗಳು



| | | | |
|---|---|---|---|
| ೧ | ಕುರಿಹಿಂಡು | (ವಿಡಂಬನಗಳು) | ಜಲಧರ |
| ೨ | ಹೂಬಾಣಗಳು | (ಹಾಸ್ಯ ಪ್ರಬಂಧಗಳು) | ಪ. ರಮಾನಂದ |
| ೩ | ತುಟಿಮೀರಿದುದು | (ಹರಟೆಗಳು) | ರಾ. ಶಿ. |
| ೪ | ನಿರಾಭರಣ ಸುಂದರಿ | (ಕತೆ-ಹರಟೆಗಳು) | ದ. ರಾ. ಬೇಂದ್ರೆ |
| ೫ | ನವಿಲುಗರಿ | (ಕತೆಗಳ ಸಂಗ್ರಹ) | ಬೇರೆಬೇರೆಯವರು |
| ೬ | ಕೋಲ್ಮಿಂಚು | (ಏಕಾಂಕ ಸಂಗ್ರಹ) | ಬೇರೆಬೇರೆಯವರು |
| ೭ | ಸೋಲೋ ಗೆಲುವೋ | (ಕತೆಗಳು) | ದೇವುಡು |
| ೮ | ಸಮುದ್ರದಾಚೆಯಿಂದ | (ದಿನಚರಿ) | ಗೋಕಾಕ |
| ೯ | ಜನನಾಯಕ | (ನಾಟಕ) | ಗೋಕಾಕ |
| ೧೦ | ಗಾಳಿಗೋಪುರ | (ಕಾದಂಬರಿ) | ನಾ. ಕಸ್ತೂರಿ |
| ೧೧ | ಚಕ್ರದೃಷ್ಟಿ | (ಕಾದಂಬರಿ) | ನಾ. ಕಸ್ತೂರಿ |
| ೧೨ | ಬಾಳುರಿ | (ಕಾದಂಬರಿ) | ಶ್ರೀ. ಮುಗುಳಿ |
| ೧೩ | ಮೇಡಂಕ್ಯೂರಿ | (ಚರಿತ್ರ) | ಕೆ. ವಿ. ರತ್ನಮ್ಮ |
| ೧೪ | ತೆನ್ನಾಲಿ ರಾಮಕೃಷ್ಣ | (ನಾಟಕ) | ಸಿ. ಕೆ. ವೆಂಕಟರಾಮಯ್ಯ |

### ಹೊಸ ಬಿಡಿಮುತ್ತುಗಳು

| | | | |
|---|---|---|---|
| ೧ | ಮಹಾಯುದ್ಧ | (ಖಂಡಕಾವ್ಯ) | ಕೆ. ಎ. ಎನ್. ರಾವ್ |
| ೨ | ಪುಷ್ಪವಿಕ್ಷೇಪ | (ಕಾವ್ಯಸಂಗ್ರಹ) | ಸುಬ್ರಹ್ಮಣ್ಯ ಅಯ್ಯರ್ |
| ೩ | ತೊಳೆದ ಮುತ್ತು | (ಕತೆಗಳ ಸಂಗ್ರಹ) | 'ಶ್ರೀನಿವಾಸಸುತ' |
| ೪ | ಕಾವ್ಯಲಹರಿ | (ಕವನಗಳ ಸಂಗ್ರಹ) | 'ಶ್ರೀನಿವಾಸಸುತ' |

# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಅರಳಿದ ಕುಸುಮಗಳು

**ಸೂಚನೆ :**

ಕೆಳಗಿನ ಗ್ರಂಥಗಳಲ್ಲಿ ಈಗ ಮಾರಾಟಕ್ಕೆ ದೊರೆಯುವ ಗ್ರಂಥಗಳ ಪಟ್ಟಿಯೊಂದನ್ನು ಬೇರೆಯಾಗಿಯೆ ಕೊಟ್ಟಿದೆ. ಬೇಡಿಕೆ ಕೊಡುವವರು ಆದರಿಂದ ಆಯ್ದು ಕಳಿಸಬೇಕು.

ಅವನ್ನು ಬಿಟ್ಟು ಉಳಿದ ಗ್ರಂಥಗಳ ಪ್ರತಿಗಳು ಮುಗಿದಿವೆಯೆಂದು ತಿಳಿಯಬೇಕು.

ಈ ಪಟ್ಟಿಯನ್ನು ಗ್ರಂಥಗಳು ಪ್ರಕಟವಾದ ಕ್ರಮದಲ್ಲಿಯೆ ಕೊಡಲಾಗಿದೆ.

**ಒಂದನೆಯ ವರ್ಷ**

೧ ಸುದರ್ಶನ ( ಕಾದಂಬರಿ ) .... .... ಆನಂದಕಂದ
೨ ನವಿಲುಗರಿ ( ಸಣ್ಣ ಕತೆಗಳ ಸಂಕಲನ ) .... ಬೇರೆಬೇರೆಯವರು
೩ ತ್ರಿಪುರದಹನ (ವಿಚಾರಾತ್ಮಕಸಂವಾದ) ದೊರೆಸ್ವಾಮಿ ಅಯ್ಯಂಗಾರ
೪ ಬಾಳುರಿ ( ಕಾದಂಬರಿ ) .... .... ರಂ. ಶ್ರೀ. ಮುಗಳಿ
೫ ಬ್ರಾಹ್ಮಣರ ಹುಡಿಗಿ (ಶರತ್ ಕಾದಂಬರಿ) ಆರ್. ವ್ಯಾಸರಾಯರು
೬ ವಿಶ್ವಾಮಿತ್ರನ ಸೃಷ್ಟಿ ಭಾಗ ೧ ( ಕಾದಂಬರಿ ) ಶ್ರೀರಂಗ

**ಎರಡನೆಯ ವರ್ಷ**

೭ ವಿಶ್ವಾಮಿತ್ರನ ಸೃಷ್ಟಿ ಭಾಗ ೨ (ಕಾದಂಬರಿ) ಶ್ರೀರಂಗ
೮ ಜೀವನ (ಸಣ್ಣ ಕತೆಗಳ ಸಂಗ್ರಹ) .... ಕೃಷ್ಣಕುಮಾರ
೯ ಕಾಳರಾತ್ರಿ ( ಅಧ್ಯಾತ್ಮಿಯ ಆತ್ಮಕಥನ) .... ಮಧುರಚೆನ್ನ
೧೦ ಧರ್ಮಸೆರೆ (ಕಾದಂಬರಿ) .... .... ಜಡಭರತ
೧೧ ರಾಜಯೋಗಿ (ಐತಿಹಾಸಿಕ ಕಾದಂಬರಿ) .... ಆನಂದಕಂದ
೧೨ ಕೋಲ್ಮಿಂಚು ( ಏಕಾಂಕ ಸಂಗ್ರಹ ) ಬೇರೆಬೇರೆಯವರು

## ಮೂರನೆಯ ವರ್ಷ

೧೩ } ಇಜ್ಜೋಡು (ಕಾದಂಬರಿ) .... ವಿ. ಕೃ ಗೋಕಾಕ
೧೪ }
೧೫ ಕುರಿಹಿಂಡು (ವ್ಯಂಗ್ಯಚಿತ್ರಗಳು) .... 'ಜಲಧರ'
೧೬ ಧೂಮಕೇತು (ಕಾದಂಬರಿ) .... ಕೆ. ಶಂಕರಭಟ್ಟ
೧೭ ಧರ್ಮಜ್ಯೋತಿ (ನಾಟಕ) ದೊರೆಸ್ವಾಮಿ ಅಯ್ಯಂಗಾರ್
೧೮ ಸೇವಾಪ್ರದೀಪ (ಐತಿಹಾಸಿಕ ನಾಟಕ) .... ರಂ. ಶ್ರೀ. ಮುಗಳಿ

## ನಾಲ್ಕನೆಯ ವರ್ಷ

೧೯ ದಿಲ್ಲೀಶ್ವರನ ದಿನಚರಿ .... ನಾ. ಕಸ್ತೂರಿ
೨೦ ಪುಷ್ಪಮಾಲೆ (ಸಣ್ಣಕತೆಗಳ ಸಂಗ್ರಹ) .... 'ಶ್ರೀಸ್ವಾಮಿ'
೨೧ ಸೊಲೋ ಗೇಲುವೋ (ಸಣ್ಣ ಕತೆಗಳು) .... ದೇವುಡು
೨೨ ಹಳ್ಳಿಯ ಸಮಾಜ (ಶರತ್ ಕಾದಂಬರಿ) .... ಆರ್. ವ್ಯಾಸರಾಯರು
೨೩ ಪಾವನಪಾವಕ (ಏಕಾಂಕಗಳು) .... ರಂ. ಶ್ರೀ. ಮುಗಳಿ
೨೪ ಸಮುದ್ರದಾಚೆಯಿಂದ ಭಾಗ ೧ (ಪತ್ರಗಳ ಸಂಗ್ರಹ) ಗೋಕಾಕ

## ಐದನೆಯ ವರ್ಷ

೨೫ ಸರಸಮ್ಮನ ಸಮಾಧಿ (ಕಾದಂಬರಿ) .... ಕೋ. ಶಿ. ಕಾರಂತ
೨೬ ಎರಡುಧ್ರುವ ಭಾ. ೧ (ಖಾಂಡೇಕರ ಕಾದಂಬರಿ) ವಿ. ಎಂ. ಇನಾಂದಾರ
೨೭ ಎರಡುಧ್ರುವ ಭಾ. ೨ ( ,, ,, ) ವಿ. ಎಂ. ಇನಾಂದಾರ
೨೮ ಸಮುದ್ರದಾಚೆಯಿಂದ ಭಾಗ ೨ (ಪತ್ರಗಳ ಸಂಗ್ರಹ) ಗೋಕಾಕ
೨೯ ಹೂಬಾಣಗಳು (ಹಾಸ್ಯಕತೆಗಳು) .... ಪ. ರಮಾನಂದ
೩೦ ಮಹಾಪೂರ (ಕಾದಂಬರಿ) .... ಎಸ್. ಜಿ. ಕುಲಕರ್ಣಿ

## ಆರನೆಯ ವರ್ಷ

೩೧ ಸಂಧ್ಯಾರಾಗ (ಕಾದಂಬರಿ) .... ಅ. ನ. ಕೃಷ್ಣರಾಯ
೩೨ ಪ್ರೇಮಾಹುತಿ (ಟಾಲ್ಸ್ಟಾಯರ ಕಾದಂಬರಿ) ಗು. ಭೀ. ಜೋಶಿ
೩೩ ಪ್ರೇಮಾಹುತಿ ( ,, ,, ಗು. ಭೀ. ಜೋಶಿ
೩೪ ಜನನಾಯಕ (ನಾಟಕ) .... ವಿ. ಕೃ. ಗೋಕಾಕ

೩೫ ಸುಳುವು ಹೊಳವು (ಪ್ರಬಂಧಗಳು) .... ಬೇರೆಬೇರೆಯವರು
೩೬ ಕಾರಣಪುರುಷ (ಕಾದಂಬರಿ) .... ರಂ. ಶ್ರೀ. ಮುಗಳಿ

## ಏಳನೆಯ ವರ್ಷ

೩೭ ಹತ್ತುವರ್ಷ (ಆತ್ಮಕತೆ) .... ಜಿ. ಪಿ. ರಾಜರತ್ನಂ
೩೮ ತುಟಿಮೀರಿದುದು (ಹಾಸ್ಯಕತೆಗಳು) .... ರಾ. ಶಿ.
೩೯ ಭಾರತಮಾರ್ಗ ಭಾಗ ೧ (ಘಾಃಸ್ಟರನ ಕಾದಂಬರಿ) ಗು. ಭೀ. ಜೋಶಿ
೪೦ ಭಾರತಮಾರ್ಗ ಭಾಗ ೨ ( ,, ,, ) ಗು. ಭೀ. ಜೋಶಿ
೪೧ ಗ್ರಾಮಪಂಚಾನನ (ಕಾದಂಬರಿ) .... ಬಾ. ಕೃ. ಲಕ್ಷ್ಮೇಶ್ವರ
೪೨ ಮಾರ್ಗದರ್ಶಕ (ಸಣ್ಣಕತೆಗಳು) .... ಎಂ.ವಿ. ಸೀತಾರಾಮಯ್ಯ

## ಎಂಟನೆಯ ವರ್ಷ

೪೩ ಗಾಳಿಗೋಪುರ (ಕಾದಂಬರಿ) .... ನಾ. ಕಸ್ತೂರಿ
೪೪, ೪೫ ಮಂಗಳಸೂತ್ರ (ಕಾದಂಬರಿ) .... ಅ. ನ. ಕೃಷ್ಣರಾಯ
೪೬ ಬಿಡುಗಡೆಯ ಬೆಲೆ (ರಾಷ್ಟ್ರಸೇವಕನ ಆತ್ಮವೃತ್ತ) ಅಶ್ವತ್ಥನಾರಾಯಣ
೪೭, ೪೮ ವೈಯಾರಿ (ಕತೆಗಳು) .... ಗೊರೂರ ರಾಮಸ್ವಾಮಿ

## ಒಂಬತ್ತನೆಯ ವರ್ಷ

೪೯ ಮರಳಿಮಣ್ಣಿಗೆ ಭಾಗ ೧ (ಕಾದಂಬರಿ) .... ಕಾರಂತ
೫೦ ಮರಳಿಮಣ್ಣಿಗೆ ಭಾಗ ೨ ( ,, ) .... ,,
೫೧ ಮರಳಿಮಣ್ಣಿಗೆ ಭಾಗ ೩ ( ,, ) .... ,,
೫೨ ಮರಳಿಮಣ್ಣಿಗೆ ಭಾಗ ೪ ( ,, ) .... ,,
೫೩ ಭರಮಪ್ಪನ ಭೂತ (ಪತ್ತೇದಾರಿ ಕಾದಂಬರಿ).... ಶ್ರೀರಂಗ
೫೪ ಜಯಶ್ರೀ (ನಾಟಕ) .... ಬಿ. ಸದಾಶಿವಯ್ಯ

## ಹತ್ತನೆಯ ವರ್ಷ

೫೫ ಪಚ್ಚೇ ಉಂಗುರ (ಪತ್ತೇದಾರಿ ಕಾದಂಬರಿ) .... ಎಂ. ಜಿ. ವೆಂಕಟೇಶಯ್ಯ
೫೬ ಮೇಡಂಕ್ಯೂರಿ (ವಿಜ್ಞಾನಿಯ ಚರಿತ್ರೆ) .... ಶ್ರೀಮತಿ ಕೆ.ವಿ. ರತ್ನಮ್ಮ

೫೭ ಮೋಡಗಳು (ಸಣ್ಣ ಕತೆಗಳು) .... 'ಶ್ರೀಸ್ವಾಮಿ'
೫೮ ತೆನ್ನಾಲಿ ರಾಮಕೃಷ್ಣ (ನಾಟಕ) .... ಸಿ.ಕೆ. ವೆಂಕಟರಾಮಯ್ಯ
೫೯, ೬೦ ಬೆಟ್ಟದ ಜೀವ (ಕಾದಂಬರಿ) .... ಕೋ. ಶಿ. ಕಾರಂತ

## ಹನ್ನೊಂದನೆಯ ವರ್ಷ

೬೧ ಹೂವಿನ ಹಾಸಿಗೆ (ಮಕ್ಕಳ ಕತೆಗಳು) .... ಹೊಯಿಸಳ
೬೨ ಕನಸಿನ ಕೆಳದಿ (ಸಣ್ಣ ಕತೆಗಳು) .... ರಂ. ಶ್ರೀ. ಮುಗಳಿ
೬೩ ಕೆನ್ಸಿಂಗ್‌ಟನ್ ಪಾರ್ಕ (ಕತೆ-ಹರಟೆ-ನಾಟಕ) ಕೆ. ಗೋಪಾಲಕೃಷ್ಣ
೬೪ ಚಕ್ರದೃಷ್ಟಿ (ಕಾದಂಬರಿ) .... ನಾ. ಕಸ್ತೂರಿ
೬೫, ೬೬ ಮಿಂಚಿನ ಹುಡಿ (ನಾಟಕಗಳು) .... ಕೃಷ್ಣಕುಮಾರ

## ಹನ್ನೆರಡನೆಯ ವರ್ಷ

೬೭ ನಕ್ಷತ್ರಾತಾಯಿ (ಸಾಹಿತ್ಯ ವಿಮರ್ಶಾತ್ಮಕ ಕತೆ) ಜಿ. ಪಿ. ರಾಜರತ್ನಂ
೬೮ ಮಲಮಗಳು (ಕಾದಂಬರಿ) .... ರಾ. ವೆಂ. ಶ್ರೀನಿವಾಸ
೬೯ ನಟಸಾರ್ವಭೌಮ ಭಾಗ ೧ (ಕಾದಂಬರಿ) .... ಅ. ನ. ಕೃಷ್ಣರಾಯ
೭೦ ಇಜ್ಜೋಡು (ಭಾಗ ೨) .... ವಿ. ಕೃ. ಗೋಕಾಕ
೭೧, ೭೨ ನಿಸರ್ಗ (ಕಾದಂಬರಿ) .... ಮಿರ್ಜಿ ಅಣ್ಣಾರಾಯ

## ಹದಿಮೂರನೆಯ ವರ್ಷ

೭೩ ಅನಂತ (ಕಾದಂಬರಿ) ... ಸತ್ಯಬೋಧ
೭೪, ೭೫ ನಟಸಾರ್ವಭೌಮ (ಕಾದಂಬರಿ) .... ಅ. ನ. ಕೃಷ್ಣರಾಯ
೭೬, ೭೭ ಪ್ರೀತಿಯು ಯೋಗವಾಯಿತು (ಇಜ್ಜೋಡು ೩).... ವಿ. ಕೃ. ಗೋಕಾಕ
೭೮ ಎತ್ತಿದ ಕೈ (ಏಕಾಂಕ ಸಂಗ್ರಹ) .... ರಂ. ಶ್ರೀ. ಮುಗಳಿ

## ಹದಿನಾಲ್ಕನೆಯ ವರ್ಷ

೭೯, ೮೦ ಭಗ್ನಮಂದಿರ (ಕಾದಂಬರಿ) .... 'ಹೇಮಂತ'

೮೧, ೮೨ ದೇವತಾಮನುಷ್ಯ (ಕಾದಂಬರಿ) .... ಕೆ. ಶಂಕರಭಟ್ಟ

೮೩ ಯುಗಾಂತರ (ನಾಟಕ) .... ವಿ. ಕೃ. ಗೋಕಾಕ

೮೪ ಏರಿಳಿತ (ಇಜ್ಜೋಡು ೪) .... ವಿ. ಕೃ. ಗೋಕಾಕ
ಬಿತ್ತಿದ ಬೆಳೆ (ನಾಟಕ) .... ಕೋ. ಶಿ. ಕಾರಂತ

## ಹದಿನೈದನೆಯ ವರ್ಷ

೮೫, ೮೬, ೮೭, ೮೮, ೮೯ ರಾಷ್ಟ್ರಪುರುಷ (ಕಾದಂಬರಿ) .... ಮಿರ್ಜಿ ಅಣ್ಣಾರಾಯ

೯೦ ಸಮುದ್ರಯಾನ (ಇಜ್ಜೋಡು ೫) .... ವಿ. ಕೃ. ಗೋಕಾಕ

## ಹದಿನಾರನೆಯ ವರ್ಷ

೯೧, ೯೨ ಅನ್ನ (ಕಾದಂಬರಿ) .... ರಂ. ಶ್ರೀ. ಮುಗಳಿ

೯೩ ಪರಿವರ್ತನ (ನಾಟಕ) .... ಲಕ್ಷ್ಮಣರಾವ ಬೇಂದ್ರೆ

೯೪ ವೇಣುಮಾವ (ನಾಟಕ) .... ಶ್ರೀಮತಿ ಪ. ಸೀತಾದೇವಿ

೯೫ ಬಹುಮಾನ ಪಡೆದ ಬರಹಗಳು .... ಬೇರೆಬೇರೆಯವರು

೯೬ ಮುನಿಯನ ಮಾದರಿ (ಕಾದಂಬರಿ) .... ಕೆ. ಎನ್. ಎ. ರಾವ್

## ಹದಿನೇಳನೆಯ ವರ್ಷ

೯೭ ಜಡಭರತನ ಕನಸುಗಳು .... ಜಡಭರತ

೯೮ ಮಗು (ನಾಟಕ) .... ಕೆ. ಎ. ಎನ್. ರಾವ್
ಗಂಗಾಸಾನಿ (ಕಾದಂಬರಿ) .... ಗಿರಿಮಾತಾ